# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಸಂಕೇತ್, ಕಮಲಂ ಅರಸು, ಶ್ರೀಹರಿ, ರಾಂಚಂದ್ರ ಕೊಪ್ಪಲು, ಗೋಪಿ

ಮುಖಚಿತ್ರ : ಮುತ್ತು ಹಾಳಕೇರಿ ಮುಂಡರಗಿ

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

ನಮ್ಮ ದೇಶದ ಗೌರವವನ್ನು ಯಾವ ನಾಚಿಕೆಯೂ ಇಲ್ಲದೆ ಹರಾಜಿಗಿಟ್ಟಿದ್ದಕ್ಕಾಗಿ ಏನಾದರೂ ಕಪಾಳ ಮೋಕ್ಷ ಎಂಬುದಿದ್ದರೆ ಅದು ಈ ತಿಂಗಳಲ್ಲಿ ಕೇಂದ್ರದ ಮಂತ್ರಿ ಸಲ್ಮಾನ್ ಖುರ್ಷೀದ್‌ಗೆ ಸಲ್ಲಬೇಕು. ದೇಶವೆಂದರೆ ತನ್ನ ಸ್ವಂತದ ಆಸ್ತಿಯೆಂಬಂತೆ ನಡೆದುಕೊಳ್ಳುವ ಆತನ ದುರಹಂಕಾರಕ್ಕೆ ನಮ್ಮ ಮಾಧ್ಯಮಗಳು ಅಷ್ಟಾಗಿ ಗಮನ ನೀಡದಿರುವುದು ಸ್ವತಃ ಅವುಗಳ ಯೋಗ್ಯತೆಗೆ ಕನ್ನಡಿ ಹಿಡಿದಂತಾಗಿದೆ. ಖುರ್ಷೀದ್‌ಗೆ ದೇಶದ ಸಂವಿಧಾನ, ಕಾನೂನು ಮತ್ತು ಯೋಗ್ಯ ನಡತೆಗಿಂತಲೂ ವಿದೇಶಿ ಬಂಡವಾಳ ಹೆಚ್ಚು ಆಕರ್ಷಣೆಯ ವಸ್ತು. ಏನೇ ಆಗಲಿ, ಅದನ್ನು ಬರಮಾಡಿಕೊಂಡು ತುಂಬಿಕೊಳ್ಳಬೇಕು, ಆ ವಿದೇಶಿ ಬಂಡವಳಿಗರಿಗೆ ಡೊಗ್ಗು ಸಲಾಮು ಹಾಕುತ್ತಿರಬೇಕು. ಅದೇ ಆತನ ಸಂಸ್ಕೃತಿ. ಅದಕ್ಕೆ ಪ್ರಧಾನಿ, ಅರ್ಥಮಂತ್ರಿ, ಯೋಜನಾ ಆಯೋಗದ ಅಧ್ಯಕ್ಷ, ಆನಂದ ಶರ್ಮ ಎಂಬ ಸಚಿವ, ಎಲ್ಲರದೂ ಸಮ್ಮತಿ ಇದೆ. ಅವರ ಸಂಸ್ಕೃತಿಯೂ ಅದೇ ತಾನೆ! ಈ ಖುರ್ಷೀದ್‌ಗೆ ವ್ಯಥೆ ಉಂಟುಮಾಡುವ ಸಂಗತಿಯೆಂದರೆ ನ್ಯಾಯಾಲಯಗಳು ಭ್ರಷ್ಟ ವ್ಯಾಪಾರೋದ್ಯಮಿಗಳಲ್ಲಿ ಕೆಲವರನ್ನು ಆಗಿಂದಾಗ್ಗೆ ಕಾರಾಗೃಹಕ್ಕೆ ಕಳಿಸುತ್ತವೆ, ಎಂಬುದು. ಹಾಗೆ ನೋಡಿದರೆ, ಜೈಲಿಗೆ ಹೋಗಿ ಆಜೀವಪರ್ಯಂತ ಅಲ್ಲೇ ಕೊಳೆಯಲು ಅರ್ಹತೆಯುಳ್ಳ ಉದ್ಯಮಿಗಳ ಪಟ್ಟಿ ಬಹಳ ಉದ್ದವಾಗಿದೆ. ಮುಖೇಶ್ ಅಂಬಾನಿ, ರತನ್ ಟಾಟಾ, ಇತ್ಯಾದಿ ದೊಡ್ಡ ಮನುಷ್ಯರನ್ನು ಈವರೆಗೆ ದಸ್ತಗಿರಿ ಮಾಡಿಲ್ಲ, ಅವರ ಮೇಲೆ ಮೊಕದ್ದಮೆ ಹೂಡಿಲ್ಲ. ಖುರ್ಷೀದ್ ಮಹಾಶಯ ಹೇಳುತ್ತಾನೆ, ವ್ಯಾಪಾರಿಗಳು ಮತ್ತು ಉದ್ಯಮಿಗಳು ಜೈಲಿಗೆ ಹೋಗುವಂತಾಗಿಬಿಟ್ಟರೆ ನಮ್ಮ ದೇಶಕ್ಕೆ ವಿದೇಶಿ ಬಂಡವಾಳದ ಹೊಳೆ ಹರಿಯುವುದು ನಿಂತುಬಿಡುತ್ತದೆ, ಅದು ಘೋರ ಅನ್ಯಾಯ, ದೇಶ ಮುಳುಗಿಹೋಗುತ್ತದೆ, ನ್ಯಾಯಾಲಯಗಳು ಇದನ್ನೆಲ್ಲಾ ಗಮನದಲ್ಲಿರಿಸಿಕೊಳ್ಳಬೇಕು, ಎಂದು. ಜೈಲಿಗೆ ಹೋಗಬೇಕಾಗುವಂತಹ ನೀಚ ಅಪರಾಧಗಳನ್ನೆಸಗಬೇಡಿರೆಂದು ಆತ ಉದ್ಯಮಿಗಳಿಗೆ ಹೇಳುವುದಿಲ್ಲ, ಏಕೆಂದರೆ ಅವರು ಏನು ಹೀನಾಯ ಕೃತ್ಯವೆಸಗಿದರೂ ಅದು ದೇಶದ ಪ್ರಗತಿಗಾಗಿಯೇ ಎಂಬ ಮೂರ್ಖತನ ಆತನದು. ಇಂತಹ ಹೇಳಿಕೆ ನೀಡಿದ್ದಕ್ಕಾಗಿ ನ್ಯಾಯಾಲಯ ಆತನ ಮೇಲೆ ನ್ಯಾಯಾಂಗನಿಂದನೆ ಆರೋಪ ಹೊರಿಸಿ ಕ್ರಮ ಕೈಗೊಳ್ಳಬೇಕು, ಆದರೆ ಹಾಗೆ ಮಾಡದೆ ನ್ಯಾಯಾಲಯ ಹೇಳುತ್ತದೆ, 'ಅಯ್ಯೋ, ಅಂತಹ ಪ್ರತಿಕೂಲ ಪರಿಣಾಮ ಉಂಟಾಗುತ್ತದೆಂಬುದು ನಿಜವಾದರೆ ಸಮಕಾಲೀನ ಆರ್ಥಿಕ ಸಂದರ್ಭವನ್ನು ಪರಿಶೀಲಿಸಿ ಅದಕ್ಕೆ ಸೂಕ್ತವಾದ ಕ್ರಮಗಳನ್ನು ತೆಗೆದುಕೊಳ್ಳೋಣ,' ಎಂದು. ಇದು ನಮ್ಮ ದೇಶದಲ್ಲಿ ಕಾನೂನು ಎಲ್ಲರಿಗೂ ''ಸಮಾನವಾಗಿ'' ಅನ್ವಯವಾಗುತ್ತದೆಂಬ ಮಿಥ್ಯೆಯ ಕತೆ. ಒಟ್ಟಿನಲ್ಲಿ, ದಾಸ್ಯಕ್ಕೆ ನೂಕಲ್ಪಡುತ್ತಿರುವ ನಮ್ಮ ದೇಶದ ಆದ್ಯತೆ ವಿದೇಶಿ ಬಂಡವಾಳಕ್ಕೆ, ದೇಶದ ಜನರಿಗೆ ಮತ್ತು ಅವರ ಗೌರವಯುತ ಸ್ವಾಭಿಮಾನಕ್ಕಲ್ಲ. ಇದಕ್ಕೆಲ್ಲಾ ಕಾರಣವಾದ ಮನಮೋಹನ ಸಿಂಗ್ ಹೇಗೂ ಮುಂದಿನ ಚುನಾವಣೆಯಲ್ಲಿ ಮಣ್ಣು ಮುಕ್ಕುತ್ತಾರೆಂದು ಸಮಾಧಾನದಿಂದಿರುವಂತೆಯೂ ಇಲ್ಲ. ಏಕೆಂದರೆ, ರಥಯಾತ್ರೆಗಳ ಪಾರಂಗತ ಅದ್ವಾನಿ ತಾನು ಮುಂದಿನ ಪ್ರಧಾನಿಯೆಂದು ಘೋಷಿಸಿಕೊಳ್ಳುತ್ತಿದ್ದಾರೆ. ಬಾಣಲಿಯಿಂದ ಬೆಂಕಿಗೆ. ಇವರಿಬ್ಬರನ್ನೂ ತೊರೆದು ದೇಶದ ಜನ ಇನ್ನೆಲ್ಲಿ ಕಮ್ಯುನಿಸ್ಟರ ಸಹಕಾರದಿಂದ ಬೇರೊಂದು ಸರ್ಕಾರವನ್ನು ಆರಿಸಿಕೊಂಡು ಬಿಡುತ್ತಾರೋ ಎಂದು ಕೇಜ್ರಿವಾಲ್ ಕಣಕ್ಕಿಳಿಯಲು ಸಿದ್ಧನಾಗುತ್ತಿದ್ದಾನೆ. ಖುರ್ಷೀದ್‌ಗೆ ವಿದೇಶಿ ಬಂಡವಾಳದ ಗೀಳು, ಕೇಜ್ರಿವಾಲ್‌ಗೆ ವಿದೇಶಿ ಹಣದ ಗೀಳು.

* * *

ಅದ್ವಾನಿಗಿಂತಲೂ ತಾನೇ ಪ್ರಧಾನಿ ಸ್ಥಾನಕ್ಕೆ ಸೂಕ್ತ ಎಂದು ಖಾತ್ರಿಪಡಿಸಿಕೊಂಡ ನರಮೇಧೇಂದ್ರ ಮೋದಿ ಅಹಮದಾಬಾದಿನ ರಂಗುರಂಗಿನ ಉತ್ಸವ ಮಂದಿರದಲ್ಲಿ ಸಾಂಪ್ರದಾಯಿಕ ಗುಜರಾತಿ ನಟನ ವೇಷದಲ್ಲಿ ಪಂಚತಾರಾ ಮೆರುಗಿನ ಉಪವಾಸವನ್ನು ಸತತವಾಗಿ ಮೂರು ದಿನ ಕೈಗೊಂಡು ಜಗದ್ವಿಖ್ಯಾತರಾಗಿದ್ದಾರೆ. ಅಮೆರಿಕಾ ಸರ್ಕಾರ ಮತ್ತು ಉದ್ಯಮಿಗಳು ಮೋದಿ ಪರವಾಗಿ ನಿಂತು ತಮ್ಮ ಎಂದಿನ ರಾಜಕೀಯ ಸಟ್ಟಾ ಜೂಜು ಆರಂಭಿಸಿದ್ದಾರೆಂಬುದು ವದಂತಿ. ಅಮೆರಿಕಾಕ್ಕೆ ಇನ್ನೂ ಹೆಚ್ಚಿನ ನೆಂಟನಾಗಲು

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೩ ಸಂಚಿಕೆ-೪ ನವೆಂಬರ್ ೨೦೧೧

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೧ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೫೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೨೨೦೩೭೪೮೯, ೨೨೦೩೫೬೮೦
ಫ್ಯಾಕ್ಸ್ : ೨೨೦೩೭೪೦೨೨

e-mail : navakarnataka@gmail.com
hosathu@gmail.com
URL : www.navakarnataka.com
http ://navakarnataka.blogspot.com
http ://hosathu.blogspot.com


# ಸಂಪಾದಕೀಯ

## ಲೋಕಾಯುಕ್ತರ ವರದಿ ತಳ್ಳಿಹಾಕಲು ಹುನ್ನಾರ

**ಮೂ**ರು ತಿಂಗಳು ಮೀನಾಮೇಷ ಎಣಿಸಿ ಭಾರತೀಯ ಜನತಾ ಪಕ್ಷದ ಸರಕಾರ ಕರ್ನಾಟಕದ ಮಾಜಿ ಲೋಕಾಯುಕ್ತ ನ್ಯಾಯಮೂರ್ತಿ ಸಂತೋಷ ಹೆಗ್ಡೆ ಅಕ್ರಮ ಗಣಿಗಾರಿಕೆ ಕುರಿತು ನೀಡಿದ್ದ ವರದಿಯನ್ನು ಸರಕಾರ ಕೆಲವು ಆಕ್ಷೇಪಗಳನ್ನು ಎತ್ತಿ ಲೋಕಾಯುಕ್ತ ಕಛೇರಿಗೆ ವಾಪಸು ಕಳಿಸಲು ನಿರ್ಧರಿಸಿದೆ. ಸಂಪುಟ ಸಭೆಯಲ್ಲಿ ಯಡಿಯೂರಪ್ಪ ಬೆಂಬಲಿಗರ ಒತ್ತಾಯಕ್ಕೆ ಮಣಿದು ಸರಕಾರ ಈ ತೀರ್ಮಾನಕ್ಕೆ ಬಂದಿದೆ ಎಂದು ತಿಳಿದುಬಂದಿದೆ. ಈ ತೀರ್ಮಾನ ಪ್ರಕಟವಾದ ಮರುದಿನವೇ ಮಾಜಿ ಮುಖ್ಯಮಂತ್ರಿ ಯಡಿಯೂರಪ್ಪ ಭೂ ಕಬಳಿಕೆ ಹಗರಣದಲ್ಲಿ ಸಿಕ್ಕಿಕೊಂಡು ಕಾರಾಗೃಹ ಸೇರಿ ಪರಪ್ಪನ ಅಗ್ರಹಾರದ ಅತಿಥಿಯಾದರು. ವರದಿಯನ್ನು ವಾಪಸು ಕಳಿಸಿಕೊಡಲು ಸರಕಾರ ನೀಡಿರುವ ಕಾರಣಗಳು ಕುಂಟುನೆಪವಷ್ಟೇ ಅಲ್ಲದೆ ಬೇರೇನೂ ಅಲ್ಲ. ಸರಕಾರದ ಆದೇಶದಂತೆ ವರದಿ ಸಲ್ಲಿಸುವುದಷ್ಟೇ ಲೋಕಾಯುಕ್ತರ ಕೆಲಸ. ವಿವಿಧ ಮೂಲಗಳಿಂದ ಮಾಹಿತಿ ಸಂಗ್ರಹಿಸಿ ವರದಿ ಸಲ್ಲಿಸಿದ್ದಾರೆ. ಅದರಲ್ಲಿ ಯಡಿಯೂರಪ್ಪ ಸಂಪುಟದ ಸಚಿವರುಗಳಾಗಿದ್ದ ರೆಡ್ಡಿ ಸಹೋದರರಲ್ಲದೆ, ಹಲವು ಮಂದಿ ಅಧಿಕಾರಿಗಳ ಮತ್ತು ಮಾಜಿ ಸಚಿವರುಗಳ ದೊಡ್ಡ ಪಟ್ಟಿಯೇ ಇದೆ. ಇವರೆಲ್ಲ ಆರೋಪಿಗಳು ಅಷ್ಟೆ. ಸರಕಾರ ಮುಂದಿನ ಕ್ರಮ ಕೈಗೊಂಡು ತನಿಖೆ ಆದೇಶಿಸಿ, ನ್ಯಾಯಾಲಯ ತೀರ್ಮಾನಕ್ಕೆ ಬಿಡಬೇಕಾಗಿತ್ತು ಅಷ್ಟೆ. ನ್ಯಾಯಾಲಯದಲ್ಲಿ ಆರೋಪಿಗಳಿಗೆ ತಮ್ಮ ಅಹವಾಲು ಹೇಳಿಕೊಳ್ಳಲು ಬೇಕಾದಷ್ಟು ಅವಕಾಶಗಳಿರುತ್ತವೆ. ಕಾನೂನಿನ ಪ್ರಕಾರ ಸಹಜ ನ್ಯಾಯ ತತ್ವ ಪಾಲಿಸಲು ಮಾರ್ಗವಿರುತ್ತದೆ. ನಿವೃತ್ತ ನ್ಯಾಯಮೂರ್ತಿ ಸಂತೋಷ ಹೆಗ್ಡೆ ಹೇಳಿರುವಂತೆ ಅದು ವರದಿಯಷ್ಟೇ ಹೊರತು ತೀರ್ಪು ಅಲ್ಲ. ಇದು ಸರಕಾರಕ್ಕೂ ಗೊತ್ತಿದೆ. ಸುಪ್ರೀಂ ಕೋರ್ಟಿನ ಹಿರಿಯ ವಕೀಲರನ್ನು ಇರಿಸಿಕೊಂಡು ವ್ಯವಹಾರ ನಡೆಸಿದಾಗ ಸರಕಾರಕ್ಕೆ ಈಗ ಎತ್ತಿರುವ ಪ್ರಶ್ನೆಗಳು ಕಾಡಲೇ ಇಲ್ಲ.

ಲೋಕಾಯುಕ್ತ ವರದಿಯ ನಂತರ ಯಡಿಯೂರಪ್ಪ ಸರಕಾರ ರಾಜೀನಾಮೆ ಸಲ್ಲಿಸಬೇಕಾಯಿತು. ಆಗ ನಡೆದ ಜುಗ್ಗಾಟವನ್ನು ಕರ್ನಾಟಕದ ಜನ ಮರೆತಿಲ್ಲ. ಬೇರೆ ವಿಧಿಯಿಲ್ಲದೆ 'ಶಿಸ್ತಿನ' ಭಾಜಪ ನಾಯಕತ್ವ ಮುಖ್ಯಮಂತ್ರಿಯನ್ನು ಕೆಳಗಿಳಿಸಲು ಮುಂದಾಗಬೇಕಾಯಿತು. ಅಕ್ರಮ ಗಣಿಗಾರಿಕೆಯಲ್ಲಿ ಕೋಟಿ ಕೋಟಿ ಹಣ ಲೂಟಿ ಮಾಡಿರುವ ರೆಡ್ಡಿ ಸಹೋದರರು ಯಾರ್ಯಾರಿಗೆ ಎಷ್ಟೆಷ್ಟು ಪಾಲು ನೀಡಿದ್ದಾರೆ ಎನ್ನುವುದು ಬಹಿರಂಗವಾಗದೆ ಇರದು. ಈಗಾಗಲೇ ಮಾಜಿ ಸಚಿವ ಜನಾರ್ದನ ರೆಡ್ಡಿ ಬಂಧಿತರಾಗಿ ಆಂಧ್ರಪ್ರದೇಶದ ಕಾರಾಗೃಹದಲ್ಲಿದ್ದಾರೆ. ಲೋಕಾಯುಕ್ತ ಪೊಲೀಸರು, ಸಿಬಿಐ ದಳದವರು ಗಣಿ ಧಣಿಗಳ ಮನೆ, ಕಛೇರಿಗಳ ಮೇಲೆ ದಾಳಿ ನಡೆಸಿ ದಾಖಲೆಗಳನ್ನೂ, ಅಕ್ರಮ ಗಳಿಕೆಯನ್ನೂ ವಶಪಡಿಸಿಕೊಂಡಿದ್ದಾರೆ. ಯಡಿಯೂರಪ್ಪ ಸರಕಾರವನ್ನು ಭದ್ರಗೊಳಿಸಲು 'ಆಪರೇಶನ್ ಕಮಲ' ಕಾರ್ಯಾಚರಣೆಯಲ್ಲಿ ಸಾಕಷ್ಟು ಹಣ ಚೆಲ್ಲಿದ್ದು ಸರ್ವವಿದಿತ. ಈ ಹಣ ಎಲ್ಲಿಂದ ಬಂತು ? ಭಾಜಪ ಕೇಂದ್ರದ ಮಾಜಿ ಸಚಿವೆ, ವಿಪಕ್ಷದ ನಾಯಕಿ ಸುಷ್ಮಾ ಸ್ವರಾಜ್ ಮತ್ತು ರೆಡ್ಡಿ ಸಹೋದರರ ನಂಟು ರಹಸ್ಯವೇನಲ್ಲ. ಪ್ರಧಾನಿಪಟ್ಟ ಅಲಂಕರಿಸಲು 'ರಥಯಾತ್ರೆ' ಕೈಗೊಂಡಿರುವ ಆಡ್ವಾನಿ ಹೊರಟ ಕೆಲವೇ ದಿನಗಳಲ್ಲಿ ಕರ್ನಾಟಕದಲ್ಲಿ ಮೊದಲ ಭಾಜಪ ಸರಕಾರದ ಮುಖ್ಯಮಂತ್ರಿ ಯಡಿಯೂರಪ್ಪ ಜೈಲು ಸೇರಿರುವುದು ವಿಪರ್ಯಾಸ. ರಾಜ್ಯದಲ್ಲಿ ಅವರ ಪ್ರವಾಸ ಮುಖಕ್ಕೆ ಮಸಿ ಬಳಿದಂತೆ ಇರುತ್ತದೆ. ಏಕೆಂದರೆ ಆಡ್ವಾನಿ ಘೋಷಣೆ ಭ್ರಷ್ಟಾಚಾರದ ವಿರುದ್ಧ ಜನರನ್ನು ಎಚ್ಚರಗೊಳಿಸುವುದು. ಕರ್ನಾಟಕದ ಭಾಜಪ ಸರಕಾರ ದೇಶದಲ್ಲೇ ಅತ್ಯಂತ ಭ್ರಷ್ಟ ಎಂಬ ಬಿರುದನ್ನು ಪಡೆದಿರುವುದು ಅವರಿಗೆ ತಿಳಿಯದ್ದೇನಲ್ಲ. ಯಡಿಯೂರಪ್ಪ ಬಲಗೈ ಭಂಟ ಮುಖ್ಯಮಂತ್ರಿ ಸದಾನಂದ ಗೌಡರ ಸರಕಾರ ಲೋಕಾಯುಕ್ತ ವರದಿ ಬಗ್ಗೆ ತಳೆದಿರುವ ನಿಲುವಿನ ಕುರಿತು ಆಡ್ವಾನಿ ಏನು ಹೇಳುತ್ತಾರೆ ?

ಕರ್ನಾಟಕದ ಬಳ್ಳಾರಿಯಲ್ಲಿ ಕಂಡುಬಂದ ಅಕ್ರಮ ಗಣಿಗಾರಿಕೆ ಈಗ ದೇಶವನ್ನೇ ತಲ್ಲಣಗೊಳಿಸಿದೆ. ಒಂದೊಂದಾಗಿ ಅಕ್ರಮಗಳು ದೇಶದ ನಾನಾ ಭಾಗಗಳಲ್ಲಿ ಹೊರಬರುತ್ತಿವೆ. ಗೋವಾದಲ್ಲಿ ಅಕ್ರಮ ಗಣಿಗಾರಿಕೆ ದೊಡ್ಡ ಪ್ರಮಾಣದಲ್ಲಿ ನಡೆದಿರುವುದು ಕಂಡುಬಂದಿದೆ. ಗಣಿಗಾರಿಕೆಯ ಅವಾಂತರ '೨ ಜಿ' ಸ್ಪೆಕ್ಟ್ರಮ್ ಹಗರಣದಷ್ಟೇ ದೊಡ್ಡದು. ದೇಶದ ಸಂಪತ್ತನ್ನು ಸೂರೆಮಾಡುವ ಇಂಥ ಅಕ್ರಮಗಳಿಗೆ ಕೊನೆ ಎಂದು ?

## ಆತ್ಮಾವಲೋಕನಕ್ಕೆ ಮುಂದಾಗೋಣ

**ಮು**ಖ್ಯಮಂತ್ರಿ ಯಡಿಯೂರಪ್ಪ ಜೈಲಿಗೆ ಹೋದರು. ಅವರಿಗೆ ಮುಂಚೆ ಬೇರೆಯವರು ಹೋಗಿಯಾಗಿತ್ತು. ಕೇಂದ್ರದ ಮಂತ್ರಿಗಳು ಕೆಲವರು ಅದನ್ನೇ ಮಾಡಿದ್ದಾರೆ. ಮಧ್ಯಂತರ ಚುನಾವಣೆಗಳಲ್ಲಿ ಕಾಂಗ್ರೆಸ್ ಪಕ್ಷ ಒಂದು ಸ್ಥಾನವನ್ನೂ ಗೆಲ್ಲಲಿಲ್ಲ. ಅಣ್ಣಾ ಹಜಾರೆ ತಂಡದ ಕರೆಯಿಂದಾಗಿ ಕಾಂಗ್ರೆಸ್ ಸೋತಿತು. ಅಡ್ವಾನಿ ರಥಯಾತ್ರೆಯ ವರದಿ ಮಾಧ್ಯಮದಲ್ಲಿ ಚೆನ್ನಾಗಿ ಬರಲೆಂದು ವರದಿಗಾರರಿಗೆ ಹಣದ ಲಕೋಟೆಗಳನ್ನು ನೀಡಲಾಯಿತು. ಅಕ್ರಮ ಗಣಿಗಾರಿಕೆಯ ಆಪಾದನೆ ಹೊತ್ತ ಉದ್ಯಮಿ ಗೋಯಲ್‌ನನ್ನು ಪೊಲೀಸರು ನ್ಯಾಯಾಲಯಕ್ಕೆ ಕರೆತಂದಾಗ ಮಾಧ್ಯಮದವರು ಛಾಯಾಚಿತ್ರ ತೆಗೆದುಕೊಳ್ಳಬಾರದೆಂದು ಆಗ್ರಹಿಸಿ ಅಪರಾಧಿಯ ಕಡೆಯವರು ಸಾವಿರಾರು ರೂಪಾಯಿಗಳನ್ನು ಛಾಯಾಚಿತ್ರಕಾರರ ಜೇಬಿಗೆ ತುರುಕಿದರು. ದೊಡ್ಡ ಬಂಡವಳಿಗರನ್ನು ಜೈಲಿಗೆ ಕಳಿಸಬಾರದೆಂದು ಸಚಿವ ಖುರ್ಷೀದ್ ಹೇಳಿದರು.

ಇಂತಹ ಹತ್ತಾರು ಸಂಗತಿಗಳು ನಮ್ಮ ದೇಶದಲ್ಲಿ ಪ್ರತಿನಿತ್ಯ ಜನರ ಕಣ್ಣೆದುರು ಬರುತ್ತಿವೆ. ಅವಕ್ಕೆ ಹೇಗೆ ಪ್ರತಿಕ್ರಿಯಿಸಬೇಕು ? ಸಂಭ್ರಮದಿಂದ ನಲಿಯಬೇಕೆ, ದುಃಖದಿಂದ ಕಣ್ಣೀರು ಸುರಿಸಬೇಕೆ, ಎಲ್ಲಾ ಮರ್ಯಾದಸ್ಥರೇ ಎಂದು ತಣ್ಣಗೆ ಕೂರಬೇಕೆ ಅಥವಾ ನಮ್ಮ ದೇಶಕ್ಕೆ ಭವಿಷ್ಯವಿಲ್ಲವೆಂದು ಕೊರಗುತ್ತಾ ಸೊರಗಬೇಕೆ ? ಇದರಲ್ಲಿ ಯಾವುದನ್ನು ಮಾಡಿದರೂ ಕೇವಲ ವರ್ತಮಾನಕ್ಕೆ ಸ್ಪಂದಿಸಿದಂತಾಗುತ್ತದೆಯೇ ವಿನಾ ಭವಿಷ್ಯದ ಬಗೆಗಿನ ಕಾತುರತೆಯನ್ನು ತೋರ್ಪಡಿಸಿದಂತಾಗುವುದಿಲ್ಲ. ಮನಮೋಹನ ಸಿಂಗ್ ಸರ್ಕಾರದ ಆರ್ಥಿಕ ನೀತಿಗಳು, ಅದ್ವಾನಿ-ಮೋದಿ-ಸುಷ್ಮಾ ಯಾರೇ ಪ್ರಧಾನಿಯಾದರೂ ಖಚಿತವಾಗಿ ಅದೇ ನೀತಿಯ ಮುಂದುವರಿಕೆ, ಇವನ್ನು ಎಷ್ಟು ದುಗುಡದಿಂದ ಮತ್ತು ಗಂಭೀರವಾಗಿ ನೋಡುತ್ತೇವೋ ಅದೇ ರೀತಿಯಲ್ಲಿ ಭ್ರಷ್ಟತನ, ಭೂ ಹಗರಣ, ಜೈಲಿಗೆ ಹೋಗುವುದು, ಮುಂತಾದವನ್ನು ನೋಡುವುದು ಆರೋಗ್ಯಕರ. ಆಗ ಭವಿಷ್ಯದತ್ತ ದೃಷ್ಟಿ ಹರಿಸುವುದು ಸಾಧ್ಯ. ಈಗಿನ ಆಪತ್ತು ಇಲ್ಲವಾಗಲು ನಾವು ಮಾಡಬೇಕಾದ್ದೇನು ಎಂಬುದರ ಚಿಂತೆ ಮುಖ್ಯ, ಯಾರೋ ಜೈಲಿಗೆ ಹೋದರೆಂದು ಕುಣಿಯುವುದು ಅಪ್ರಾಸಂಗಿಕ.

ನಮ್ಮ ರಾಜಕೀಯ ಪಕ್ಷಗಳು, ವಿಶೇಷತಃ ದೊಡ್ಡವಾದ ಎರಡು ಪಕ್ಷಗಳು, ಹೀಗೇಕಾಗಿವೆ ? ಒಂದೇ ಪಕ್ಷದಲ್ಲಿ ಅದೆಷ್ಟು ವೈಮನಸ್ಯ, ಹೊಟ್ಟೆಕಿಚ್ಚು, ಪ್ರತೀಕಾರದ ಭಾವನೆ ಮತ್ತು ಪರಸ್ಪರ ದ್ವೇಷ! ಇದು ಭಾರತೀಯ ಜನತಾ ಪಕ್ಷ ಮತ್ತು ಕಾಂಗ್ರೆಸ್‌ಗೆ ಸಮಪ್ರಮಾಣದಲ್ಲಿ ಅನ್ವಯವಾಗುತ್ತದೆ. ಒಂದು ಪಕ್ಷದ ಸಚಿವನಿಗೆ ಅದೇ ಪಕ್ಷದ ಒಬ್ಬ ಕಾರ್ಯಕರ್ತ ಚಪ್ಪಲಿ ಏಟು ಕೊಡುತ್ತಾನೆ; ಇದು ಬೀಭತ್ಸ ಕೃತ್ಯದ ಪರಮಾವಧಿ. ಅವನು ಪಾದರಕ್ಷಾ ಪ್ರಯೋಗ ಮಾಡುವುದು ಯಾವುದೋ ಸೈದ್ಧಾಂತಿಕ ಪ್ರಶ್ನೆಯ ಚರ್ಚೆಯ ಸಂಬಂಧದಲ್ಲಿ ಅಲ್ಲ; ಲೂಟಿಯಲ್ಲಿ ತನಗೂ ಭಾಗ ಬೇಕು, ಅದನ್ನು ಮಂತ್ರಿ ಕೊಡುತ್ತಿಲ್ಲ, ಎಂಬ ಕಾರಣಕ್ಕೆ. ರಾಜಕೀಯದ ಅಧಃಪತನ ಇದಕ್ಕಿಂತಲೂ ಕೆಳಮಟ್ಟದ್ದಾಗಲಾರದು. ರಾಜಕೀಯ ಪ್ರವೇಶಿಸಿ ಈ ಎರಡೂ ಪಕ್ಷಗಳ ಸದಸ್ಯರು, ಕಾರ್ಯಕರ್ತರು, ಅಪೇಕ್ಷಿಸುವುದೇನನ್ನು? ದೇಶದ ಜನರ ಹಿತಕ್ಕಾಗಿ ನೀತಿ ನಿರೂಪಣೆ ಮಾಡಿ ನಿಷ್ಠೆಯಿಂದ ಕೆಲಸ ಮಾಡಬೇಕೆಂಬ ಆಶಯ ಸ್ವಲ್ಪವಾದರೂ ಇದೆಯೇ ? ನಮ್ಮ ದೇಶದ ಸಾಂಸ್ಕೃತಿಕ ವರ್ಚಸ್ಸಿನ ಮಾಪನ ಮಾಡಬೇಕಾದ್ದು ಈ ಪ್ರಶ್ನೆಗಳಿಗೆ ಉತ್ತರ ಕೊಡುವ ಮೂಲಕ; ಪರಸ್ಪರ ಬೈದಾಟಗಳಿಂದ ವೃತ್ತಪತ್ರಿಕೆಗಳ ಪುಟಗಳನ್ನು ತುಂಬುವುದರಿಂದ ಅಲ್ಲ. ಎಷ್ಟೊಂದು ಸಮಸ್ಯೆಗಳಿವೆ, ಎಷ್ಟೊಂದು ನಿರೀಕ್ಷೆಗಳಿವೆ, ಎಂಬುದು ಇವರಿಗೆ ತಿಳಿಯದೆ? ಅವರವರ ಪಕ್ಷಗಳ ಸಿದ್ಧಾಂತಗಳ ಪರಿವೆ ಅಲ್ಪವಾದರೂ ಬೇಡವೆ? ಎಲ್ಲರೂ ರಾಹುಲ ಗಾಂಧಿಯ ಪಡಿಯಚ್ಚುಗಳೇ! ನಾಟಕೀಯವಾಗಿ ಬೇಗನೆ ನಾಯಕರಾಗಿಬಿಡಬೇಕು, ಅಧಿಕಾರ ಪಡೆಯಬೇಕು, ಸಂಪತ್ತು ಲೂಟಿಮಾಡಿ ಶೇಖರಿಸಿಕೊಳ್ಳಬೇಕು ಮತ್ತು ಅದಕ್ಕಾಗಿ ದೇಶಕ್ಕೆ ಬೆಂಕಿ ಕೊಟ್ಟರೂ ಪರವಾಗಿಲ್ಲ. ಇದು ಐದಾರು ಸಾವಿರ ವರ್ಷಗಳ ಇತಿಹಾಸವಿರುವ ನಮ್ಮ ದೇಶಕ್ಕೆ ಶೋಭಿಸುವುದಿಲ್ಲ.

ನಮ್ಮ ಇಂದಿನ ರಾಜಕೀಯ ವ್ಯವಹಾರಗಳನ್ನು ತುಸು ಕಾಳಜಿಯಿಂದ ನೋಡಿದರೆ ಅನ್ನಿಸುವುದೇನು ? ನಮ್ಮದೇ ಕಡೆಯ ಪೀಳಿಗೆ ಎಂಬಂತೆ ದುಷ್ಟರಾಗಿ ವ್ಯವಹರಿಸುತ್ತಿದ್ದೇವೆ. ಒಂದೇ ಒಂದು ಉದಾಹರಣೆ ಸಾಕು : ಭೂಮಿಯ ಪ್ರಶ್ನೆ. ನಾವೆಷ್ಟೇ ಧೀಮಂತರಾದರೂ ಒಂದಡಿ ಭೂಮಿಯನ್ನು ಹೊಸದಾಗಿ ಸೃಷ್ಟಿಸಲಾರೆವು, ಆದರೆ ಇರುವ ಭೂಮಿಯನ್ನೆಲ್ಲಾ ಯಾವಾವುದಕ್ಕೋ ಆಕ್ರಮಿಸಿಬಿಡುತ್ತಿದ್ದೇವಲ್ಲ, ಇನ್ನು ನೂರು ವರ್ಷದ ನಂತರ ಬರುವ ನಮ್ಮ ಮರಿಮಕ್ಕಳು ಏತಕ್ಕಾದರೂ ಒಂದು ತುಂಡು ಭೂಮಿ ಬೇಕೆಂದರೆ ಏನು ಮಾಡಬೇಕು ? ಮನಮೋಹನ ಸಿಂಗ್ ಮತ್ತು ಅದ್ವಾನಿ, ಇಬ್ಬರೂ ಇದಕ್ಕೆ ಉತ್ತರ ಹುಡುಕಲಿ. ಸಿದ್ಧಾಂತವೇ ಇಲ್ಲದಿದ್ದರೆ ಇಬ್ಬರೂ ತಮ್ಮ ತಮ್ಮ ಪಕ್ಷಗಳನ್ನು ದೊಡ್ಡ ಮೋರಿಗೆ ಬಿಸುಡಿ ಎಲ್ಲಾದರೂ ತೊಲಗಿಹೋಗಲಿ. ದೇಶ ಮತ್ತು ದೇಶದ ಜನರನ್ನು ಹೀಗೆ ದೈನೇಸಿ ಸ್ಥಿತಿಗೆ ತಂದು ಭವಿಷ್ಯವನ್ನು ಕಪ್ಪುಕತ್ತಲೆ ಮಾಡಲು ಇವರಾರಿಗೂ ಹಕ್ಕಿಲ್ಲ. ಬೇರೆ ಪಕ್ಷಗಳ ವಿಮರ್ಶೆ, ವಿಶ್ಲೇಷಣೆ, ಪರಿಹಾರದ ಹುಡುಕಾಟ, ಇವನ್ನು ಸಹ ನಾಳಿನ ನಮ್ಮ ಸ್ಥಿತಿಯನ್ನು ದೃಷ್ಟಿಯಲ್ಲಿರಿಸಿಕೊಂಡೇ ಮಾಡಬೇಕು. ಭಾರತದ ಚರಿತ್ರೆ ನಮ್ಮ ಪೀಳಿಗೆಯೊಂದಿಗೆ ಅಂತ್ಯವಾಗುವುದು ಬೇಡ, ಭಾರತದ ಜನ ಇನ್ನೂ ಸಾವಿರಾರು ವರ್ಷ ಬಾಳಿ ಬದುಕಬೇಕಾಗಿದೆ. ಅದಕ್ಕೆ ಹಾದಿ ಮಾಡಿಕೊಡುವ ರಾಜಕೀಯ ನಮ್ಮದಾಗಲಿ. ಸಿದ್ಧಾಂತವೇ ಬೇಡವೆಂದು ಸ್ವಾರ್ಥದ ಕೊಳಚೆಯಲ್ಲಿ ಮೀಯುವವರನ್ನು ಶುದ್ಧೀಕರಿಸಲು ಅವರನ್ನೆಲ್ಲಾ ಮಹಾಸಾಗರಕ್ಕೆ ತಳ್ಳಿ ಮುಳುಗಿಸಬೇಕಾದ ಪ್ರಸಂಗ ಬಾರದಿರಲಿ. ಜನರು ರೊಚ್ಚಿಗೇಳುವ ಮುನ್ನ ರಾಜಕೀಯವನ್ನು ವೈಯ್ಯಕ್ತಿಕ ಲಾಭದ ನೆಲೆಯಿಂದ ಹೊರತಂದು ವಿಶಾಲ ಸಮಾಜದ ತಳಹದಿಯ ಮೇಲೆ ನಿಲ್ಲಿಸೋಣ. ಹಾಗೆ ಮಾಡದಿದ್ದರೆ ಇಂದಿನ ಯುವ ರಾಜಕಾರಣಿಗಳು ನಾಳೆ ಮುಳ್ಳುಹಂದಿಗಳಾಗುತ್ತಾರೆ.

ಪ್ರಜಾಪ್ರಭುತ್ವದಲ್ಲಿ ರಾಜಕೀಯ ಪಕ್ಷಗಳಿರುತ್ತವೆ, ಅಭಿಪ್ರಾಯ ಭೇದಗಳಿರುತ್ತವೆ, ಆರ್ಥಿಕ-ಸಾಮಾಜಿಕ-ಸಾಂಸ್ಕೃತಿಕ ನೀತಿಗಳ ಪ್ರತಿಪಾದನೆ ಇರುತ್ತದೆ. ಅದನ್ನೆಲ್ಲಾ ಬದಿಗೆ ಸರಿಸಿ ಕೇವಲ ವೈಯ್ಯಕ್ತಿಕ ನೆಲೆಯಲ್ಲಿ ಪ್ರಜಾನಾಯಕರಾಗಲು ತವಕಿಸುವುದು, ಅದು ಸಾಧ್ಯವಾಗುವುದು, ಪ್ರಜಾಪ್ರಭುತ್ವದ ಲಕ್ಷಣವಲ್ಲ. ಇಂದು ಎಷ್ಟೇ ಲೂಟಿ ಮಾಡಿದರೂ ನಾಳೆ ಇವರೆಲ್ಲಾ ಇರುವುದಿಲ್ಲ. ಅದನ್ನು ಉಪನ್ಯಾಸಗಳಲ್ಲಿ ಹೇಳಿದರೆ ನಾವು ದೊಡ್ಡ ತತ್ವಜ್ಞಾನಿಗಳೂ ಸುಸಂಸ್ಕೃತರೂ ಆಗುವುದಿಲ್ಲ, ಆದರೆ ಆ ತಿಳಿವಳಿಕೆಗೆ ಬೆಲೆ ಬರಬೇಕಾದ ರೀತಿಯ ನಡತೆ ಬಹಳ ಮುಖ್ಯ. ಸಾಹಿತಿಗಳು, ವಿದ್ವಾಂಸರು, ಕಲಾವಿದರು, ಎಲ್ಲರೂ ಇದನ್ನು ಮನನ ಮಾಡಿಕೊಳ್ಳೋಣ. ರಾಜಕಾರಣಿಗಳಿಗೆ ಗತ್ಯಂತರವಿಲ್ಲದೆ ಸರಿಯಾದ ಹಾದಿಗೆ ಬರುವಂತಾಗುವ ಸಂದರ್ಭ ಅಸಾಧ್ಯವಲ್ಲ. ಸ್ವಲ್ಪ ಆತ್ಮಾವಲೋಕನ ಮಾಡಿಕೊಳ್ಳೋಣ, ಇಂದಾದ ಮೇಲೆ ನಾಳೆಯೂ ಇದೆ ಎಂಬುದನ್ನು ಖಚಿತವಾಗಿ ನಂಬೋಣ.

ತಿಂಗಳ ಪತ್ರಿಕೆ
ಹೊಸತು
ನೆನ್ನೆಯಿಂದ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಮೋದಿ ಇನ್ನೊಂದು ಅರ್ಹತಾ ಪತ್ರ ಬರೆದಿಟ್ಟುಕೊಂಡಿದ್ದಾರೆ. ಅದೇನೆಂದರೆ, ಪೊಲೀಸ್ ಅಧಿಕಾರಿಯಾಗಿದ್ದ ಸಂಜೀವ ಭಟ್ಟನನ್ನು ಸೆರೆಮನೆಗೆ ತಳ್ಳಿದ ವೀರ ತಾನೊಬ್ಬನೆ, ಎಂದು. ತನ್ನ ಪಾತಕವನ್ನು ಎಲ್ಲರೂ ಮರೆಯಬೇಕೆಂದು ಮೋದಿ ಆಜ್ಞೆಯಿತ್ತರೂ ಈ ಭಟ್ಟರಂಥವರು ಕೆದಕಿ ಕೆದಕಿ ಆ ದಿನಗಳ ನೆನಪು ಮಾಡಿಕೊಡುವುದು ಮೋದಿಗೆ ಗರ್ವಭಂಗದಂತೆ ಕಾಡುತ್ತದೆ. ''ಕಾನೂನು ಎಲ್ಲರಿಗೂ ಒಂದೇ, ಆದರೆ ಮೋದಿ ವಿಷಯಕ್ಕೆ ಬಂದರೆ ಪ್ರತ್ಯೇಕ ಕಾನೂನು ರಚನೆಯಾಗಬೇಕು'' ಎಂಬುದು ಮೋದಿ ಸಂಹಿತೆ. ಈತ ಪ್ರಧಾನಿಯಾಗಿಬಿಟ್ಟರೆ ತನ್ನ ಅನುರಾಗಿ ಅಮೆರಿಕಾದ ಮೆಕಾರ್ತಿಗೆ ಭಾರತದಲ್ಲಿ ಪುನರ್ಜನ್ಮ ಖಚಿತವಾದಂತಾಗುತ್ತದೆ, ಎಚ್ಚರ.

*      *      *

ಈಗಷ್ಟೆ ಪ್ರಕಟವಾದ ಒಂದು ತಾಜಾ ಜೋಕು. ಬ್ರೆಸಿಲ್, ಭಾರತ, ಚೀನಾ ಮುಂತಾದ ದೇಶಗಳು ತಮ್ಮ ವಿದೇಶಾಂಗ ನೀತಿಯನ್ನು ತಮ್ಮ ಆರ್ಥಿಕ ನೀತಿಗಳ ಉದ್ದೇಶವನ್ನು ಸಾಧಿಸಿಕೊಳ್ಳಲು ಬಳಸುತ್ತಿವೆಯಂತೆ. ಅಮೆರಿಕದ ಆಡಳಿತ ವ್ಯವಸ್ಥೆ ಇದರಿಂದ ಪಾಠ ಕಲಿಯಬೇಕಂತೆ. ಹಾಗೆಂದು ಹೇಳಿದವರು ಸಾಧಾರಣ ವ್ಯಕ್ತಿ ಅಲ್ಲ, ಎಲ್ಲ ದೇಶಗಳ, ಎಲ್ಲ ವಿದೇಶಾಂಗ ರಹಸ್ಯಗಳನ್ನು ಬಲ್ಲ ಅಮೆರಿಕದ ವಿದೇಶಾಂಗ ಕಾರ್ಯದರ್ಶಿ ಹಿಲ್ಲರಿ ಕ್ಲಿಂಟನ್! ಇದರಲ್ಲಿ ಜೋಕ್ ಏನು? ಈ ಕಲೆಯನ್ನು ಅಮೆರಿಕದ ಸರ್ಕಾರಕ್ಕಿಂತ, ಪಶ್ಚಿಮದ ಬಂಡವಳಿಗ ಸರ್ಕಾರಗಳಿಗಿಂತ ಪ್ರಯೋಗಿಸಬಲ್ಲ ನಿಪುಣರು ಯಾರಾದರೂ ಇದ್ದಾರೆಯೇ? ವಾಣಿಜ್ಯ ವಿಷಯಕ ಒಪ್ಪಂದಗಳನ್ನು ವಿದೇಶಾಂಗ ಕಾರ್ಯದರ್ಶಿಗಳು, ಮಂತ್ರಿಗಳೇ ಚರ್ಚಿಸಿ, ಒಪ್ಪಂದಗಳನ್ನು ಮಾಡುತ್ತಿರುವಾಗ ಇದೇನು ರಹಸ್ಯವನ್ನು ಈಕೆ ಬಹಿರಂಗ ಪಡಿಸಿದ್ದು? ನಮ್ಮದಿಷ್ಟು ವಿಮಾನ ಕೊಳ್ಳಿ, ಬಂದೂಕ ಕೊಳ್ಳಿ, ಇಲ್ಲವಾದರೆ ನಾವು ನಿಮ್ಮ ಸರಕುಗಳನ್ನು ಕೊಳ್ಳುವುದಿಲ್ಲ, ನಿಮಗೆ ಆಹಾರ ಮಾರುವುದಿಲ್ಲ ಎನ್ನುವವರು; ತಮಗೇ ಬೇಡದ ಅಣು ಘಟಕಗಳನ್ನು ಮಾರುವ, ಅದನ್ನು ಮಾರಲು, ನಮ್ಮ ಸಾರ್ವಭೌಮತೆಯನ್ನೇ ಅಡವಿಡಿಸುವ ಒತ್ತಾಯ ತರುವ ವಿದೇಶಾಂಗ ನೀತಿಯನ್ನು ನಡೆಸುವ ಹಿಲ್ಲರಿಗೆ ಸಾಕಷ್ಟು ಹಾಸ್ಯಪ್ರಜ್ಞೆ ಇದೆ ಎಂದು ಸ್ಪಷ್ಟವಾಯ್ತು. ನಮಗೇನೂ ಭ್ರಮೆ ಬೇಡ, ನಮ್ಮ ವಿದೇಶಾಂಗ ನೀತಿಯ ಅಧ್ವರ್ಯುಗಳ ಬಗ್ಗೆ ಈ ಮಾತು ಕೇಳಿ. ಅವರು ಪಶ್ಚಿಮದವರ ಕೇವಲ ಆಜ್ಞಾಧಾರಕರು, ಬೆನ್ನೆಲುಬಿಲ್ಲದವರು, ತಮ್ಮದೇ ಖಾಸಗೀ ಕಾರ್ಪೊರೇಟುಗಳ ಲಾಭಕ್ಕಾಗಿ ಸ್ವಾಯತ್ತೆಯನ್ನು ಅಡವಿಡಬಲ್ಲವರು. ಈ ಜೋಕಿನ ಹಿಂದೆ ಒಂದು ಹೊಸ ಉದ್ದೇಶ ಅಡಗಿದೆ. ಅಮೆರಿಕ ಈಗ ಪಶ್ಚಿಮ ಏಷ್ಯಾ ಬಿಟ್ಟು, ಚೀನಾದ ವಿರುದ್ಧ ಆಗ್ನೇಯ ಏಷ್ಯಾದಲ್ಲಿ, ದಕ್ಷಿಣ ಏಷ್ಯಾದಲ್ಲಿ ನೆಲೆಯೂರುವ ಯೋಜನೆ ಹಾಕಿದೆ. ಈ ಕುರಿತು ಹಿಲ್ಲರಿಯ ದೀರ್ಘ ಲೇಖನ ಈಗಷ್ಟೆ ಪ್ರಕಟವಾಗಿದೆ.

*      *      *

ರಾಷ್ಟ್ರದ ವಿದ್ಯುಚ್ಛಕ್ತಿಯ ಪರಿಸ್ಥಿತಿ ಅನಿರೀಕ್ಷಿತವಲ್ಲ. ಕಳೆದ ಎರಡು ದಶಕಗಳಲ್ಲಿ ಸರ್ಕಾರಗಳು ಇದಕ್ಕೆ ಕೊಡಬೇಕಾದ ಒತ್ತು ಕೊಡಲಿಲ್ಲ. ಅನವಶ್ಯಕವಾಗಿ ಖಾಸಗಿ, ಸಾರ್ವಜನಿಕ ಮುಗಿಯದ ಚರ್ಚೆ ನಡೆಸಿದವು. ಹಾಗಾಗಿ ಸಾರ್ವಜನಿಕದಲ್ಲಿ ಕೆಲಸ ನಿಂತಿತು, ಖಾಸಗಿ ಕೊಟ್ಟ ಅವಕಾಶವನ್ನು ಸರಿಯಾಗಿ ಬಳಸಲಿಲ್ಲ. ಈಗ ದಶಕಗಳ ನಂತರ ಫಲಕೊಡುತ್ತದೆ ಎಂಬ ನಿರಾಧಾರ ಆಶಯವಿಟ್ಟುಕೊಂಡ, ಸ್ವರೂಪ ಕಳೆದುಕೊಂಡ ಅಣುಶಕ್ತಿಯ ವಿದ್ಯುಚ್ಛಕ್ತಿಯನ್ನು ನೆಚ್ಚಿಕೊಂಡು ಮಾಡಬೇಕಾದದ್ದನ್ನು ಮಾಡಿಲ್ಲ. ಕಲ್ಲಿದ್ದಲಿನ ಕೊರತೆಯ ಪರಿಸ್ಥಿತಿ ಅದು ಇಲ್ಲದ್ದರಿಂದ ಬಂದಿದ್ದಲ್ಲ; ಇರುವುದರ ಉತ್ಪಾದನೆಯ ನಿರ್ವಹಣೆಯಲ್ಲಿನ ಹಲವು ಹಂತದ ವೈಫಲ್ಯಗಳು ಕಾರಣ. ಆ ಕ್ಷೇತ್ರದ ನೌಕರರ ಸಮಸ್ಯೆಗಳಿಗೆ ಸರ್ಕಾರ ಗಮನವೇ ನೀಡಿಲ್ಲ. ವಿದ್ಯುಚ್ಛಕ್ತಿಯನ್ನೇನೂ ಆಮದು ಮಾಡಲಾಗುವುದಿಲ್ಲ. ತನ್ನದೇ ಬೆಳವಣಿಗೆಗೆ ಮುಖ್ಯ ಉಸಿರಾದ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಿಕೊಳ್ಳಲಾಗದ ಈ ಬಂಡವಾಳ ವ್ಯವಸ್ಥೆಯ ನಾಯಕರಿಗೆ ಏನು ಹೇಳಬೇಕೋ ತಿಳಿಯದು. ಸಾಕಷ್ಟು ಸೂರ್ಯನ ಶಾಖದ ಪ್ರದೇಶದಲ್ಲಿ ಇಲ್ಲದ ದೇಶಗಳೂ ಸೌರಶಕ್ತಿಗಾಗಿ ಮುಂದಾಗಿ ಮಹತ್ತರ ಯೋಜನೆ ಮಾಡಿವೆ. ನಾವು ಅದನ್ನು ಇನ್ನೂ ಚರ್ಚಿಸುತ್ತಿದ್ದೇವೆ. ಜಗತ್ತಿಗೆ ಸೌರಶಕ್ತಿಯ ಘಟಕಗಳನ್ನು ಪೂರೈಸುವ ಮಹದಾಶಯ ಹೊತ್ತ ಕೈಗಾರಿಕಾ ಘಟಕಗಳನ್ನು ಚೀನಾ ಈಗಾಗಲೇ ಸ್ಥಾಪಿಸಲು ಸಮರ್ಥವಾಗಿದೆ. ಯಾವುದು ಆರ್ಥಿಕತೆಯ ಜೀವನಾಡಿಯೋ ಅದರ ಬಗ್ಗೆಯೇ ವಿಫಲರಾಗಿರುವ ನಮ್ಮ ಕಾರ್ಪೊರೇಟ್ – ಸರ್ಕಾರಿ ನಾಯಕರುಗಳು ಈ ಕ್ಷೇತ್ರದಲ್ಲಿ ಪಿಪಿಪಿ ಮಾಡದೆ ಕೇವಲ ಭ್ರಷ್ಟಾಚಾರದಲ್ಲಿ ಮಾತ್ರ ಆ ಸಹಕಾರ ವ್ಯಕ್ತಪಡಿಸುತ್ತಾರೆ. ಬರೇ ಸೇವಾಕ್ಷೇತ್ರಗಳ ಮೂಲಕ ಶೇಕಡ ೧೦ ಬೆಳವಣಿಗೆ ಅಪೇಕ್ಷಿಸುತ್ತಾ ಮೂಲ ಕೈಗಾರಿಕಾ ಕ್ಷೇತ್ರವನ್ನು ಸೊರಗಿಸುತ್ತ ಬೆಳೆಯುತ್ತಿರುವ ನಮ್ಮ ಆರ್ಥಿಕತೆಯ ಖಾಸಗೀ ಭವಿಷ್ಯವೂ ಅಸ್ಪಷ್ಟಕಷ್ಟ. ಅದು ಅಡಿಯಾಳು ಸಂಸ್ಕೃತಿಯದು. ಅಮೆರಿಕ ಅವಲಂಬಿತ. ಚೀನದಂತೆ ಸ್ವಾವಲಂಬನೆಯದಲ್ಲ. ನಮ್ಮಲ್ಲೂ ಅಂಥ ಒಂದು ಭವ್ಯನೋಟ ಇತ್ತು. ಇದನ್ನು ಕಳೆದ ಎರಡು ದಶಕಗಳಲ್ಲಿ ಹಾಳುಗೆಡವಲಾಗಿದೆ.

*      *      *

ಮಾರುತಿ ಕಾರು ಕಂಪನಿಯ ಹರಿಯಾಣದ ಮಾನೇಸರ ಘಟಕದಲ್ಲಿ ಕಾರ್ಮಿಕರು ತಮ್ಮ ಮೂಲಭೂತ ಹಕ್ಕಿಗಾಗಿ ಹೋರಾಡುತ್ತಿದ್ದಾರೆ. ಮುಖ್ಯವಾದ ಬೇಡಿಕೆ ತಮಗೆ ಇಷ್ಟಬಂದ ಕಾರ್ಮಿಕ ಸಂಘವನ್ನು ರಚಿಸಿಕೊಳ್ಳುವುದು. ಇಷ್ಟು ದಿವಸ ನಿದ್ದೆ ಮಾಡುತ್ತಿದ್ದ ಕೋರ್ಟು ಈಗ ಅವರ ಮುಷ್ಕರ ಸರಿಯಲ್ಲ ಎಂದು ಹೇಳುತ್ತದೆ. ಆದರೆ ತಾನಾಗೆ ಮಾಲೀಕ ಯೂನಿಯನ್ ನಡೆಸುವ ಹಕ್ಕನ್ನು ಮಾನ್ಯತೆ ಮಾಡುವುದು ಅವನ ಕರ್ತವ್ಯವೆಂದು ಹೇಳಲಿಲ್ಲ. ಇಡೀ ಗುಡಗಾಂವ್ ಕೈಗಾರಿಕಾ ಪ್ರದೇಶವೇ ಒಂದು ಕೈಗಾರಿಕೆಯ ಅರಾಜಕ ಪ್ರದೇಶವಾಗಿದೆ. ವಿದೇಶೀ ಕಂಪನಿಗಳು ತಮ್ಮದೇ ದೇಶದಲ್ಲಿ ಕಾರ್ಮಿಕರನ್ನು ಸಂಬಾಳಿಸಲಾಗದೆ ನಮ್ಮ ಸರ್ಕಾರದ ಆಶ್ವಾಸನೆಯ ಮೇಲೆ ಇಲ್ಲಿಗೆ ಬಂದಿವೆ. ಈಗ ಮೋದಿಯಂಥ ಫ್ಯಾಸೀ ಮುಖ್ಯಮಂತ್ರಿಯೊಬ್ಬ ಈ ಮುಂಚೆ ಟಾಟಾ ಕಂಪನಿಯನ್ನು ಪಶ್ಚಿಮ ಬಂಗಾಳದಿಂದ ಕರೆಸಿಕೊಂಡಂತೆ, ಮಾರುತಿ ಕಂಪನಿಯನ್ನು ತನ್ನ ರಾಜ್ಯಕ್ಕೆ ಆಹ್ವಾನಿಸಿದ್ದಾನೆ. ಶೇಕಡ ೧೦ ಬೆಳವಣಿಗೆಯ ಬೆನ್ನುಹತ್ತಿದ ಬಂಡವಳಿಗ ವರ್ಗಕ್ಕೆ ಯಾವುದೇ ಕಾರ್ಮಿಕ ವಿರೋಧಿ ನಿಲುವು ತಾಳಲು ಗುಜರಾತ್ ಇನ್ನು ಮೇಲೆ ರಕ್ಷಿತ ಸ್ಥಾನವಾಗುತ್ತಿದೆ. ಈಗ ವರ್ತಕ ವರ್ಗ ಬಯಸುತ್ತಿರುವ ಮೂರನೆಯ ಹಂತದ ಸುಧಾರಣೆಗಳು ಜಾರಿಗೆ ಬಂದರೆ ಆಗ ಅದು ಇನ್ನೂ ತೀವ್ರವಾಗಿ ಕಾರ್ಮಿಕರ ಹಕ್ಕಿಗೆ ಚ್ಯುತಿ ತರುತ್ತದೆ ''ಹೈರ್ ಅಂಡ್ ಫೈರ್'' ನೀತಿಗೆ ಅದು ದಾರಿ ಮಾಡಿಕೊಡುತ್ತದೆ. ವಿಷಯವೆಂದರೆ ದೇಶದ ಇಡೀ ಕಾರ್ಮಿಕ ವರ್ಗ ಮಾರುತಿ ಕಾರ್ಮಿಕರ ಹೋರಾಟವನ್ನು ತಮ್ಮದೇ ಭವಿಷ್ಯದ ಹೋರಾಟ ಎಂದು ಪರಿಗಣಿಸಿ, ರಾಷ್ಟ್ರವ್ಯಾಪಿ ಸಂಯುಕ್ತ ಹೋರಾಟವೊಂದಕ್ಕೆ ಮುಂದಾಗದಿದ್ದರೆ ಕಾರ್ಮಿಕ ಸಂಘಗಳನ್ನು ಬಿಡಿ ಬಿಡಿಯಾಗಿ ಬೇಟೆಯಾಡಿಬಿಡುತ್ತದೆ ಈ ಆಳುವ ವರ್ಗ – ಭಾಜಪವೂ, ಕಾಂಗ್ರೆಸ್ಸೂ; ಇದರಲ್ಲಿ ಯಾವ ಸಂದೇಹವೂ ಬೇಡ. ಈ ವಿಷಯ ಎಷ್ಟು ಗಂಭೀರವೆಂದರೆ ''ಈಗಲೇ, ಇಲ್ಲದೆ ಇದ್ದರೆ ಇಲ್ಲವೆ ಇಲ್ಲ'' ಪರಿಸ್ಥಿತಿಯಾಗುತ್ತದೆ. ಈ ರಾಜಕೀಯ ಪ್ರಜ್ಞೆ ನಮ್ಮ ಕಾರ್ಮಿಕ ಸಂಘಗಳಲ್ಲಿ ಇದೆಯೇ? ಇಂಥ ವಿಷಯಗಳಿಗೆ ಕೋರ್ಟಿನ ತೀರ್ಮಾನಕ್ಕೆ ನ್ಯಾಯಾಲಯದ ಆದೇಶಕ್ಕೆ ಯಾವ ಅರ್ಥವೂ ಇಲ್ಲ. ಇದೊಂದು ರಾಜಕೀಯ ಸಾಮಾಜಿಕ ವಿಷಯ. ಕಳೆದ ಕೆಲವು ವರ್ಷಗಳಲ್ಲಿ ನ್ಯಾಯಾಸ್ಥಾನದ ತೀರ್ಪುಗಳು ಕಾರ್ಮಿಕರ ವಿರೋಧವೇ ಬಂದಿರುವುದು. ಕಾರ್ಮಿಕರು ಒಗ್ಗಟ್ಟಿನಿಂದ ಈ ಕೆಲವು ಮೂಲಭೂತ ಹಕ್ಕುಗಳಿಗಾಗಿ ತ್ವರಿತವಾಗಿ ರಾಷ್ಟ್ರವ್ಯಾಪಿ ಹೋರಾಟ ನಡೆಸುವುದು ಅನಿವಾರ್ಯ. ಅಂಥ ಒಂದು ಹೋರಾಟ ಮಾತ್ರ ಈ ಪ್ರತಿಗಾಮಿ ಶಕ್ತಿಗಳನ್ನು ಸ್ವಲ್ಪವಾದರೂ ಹಿಮ್ಮೆಟ್ಟಿಸಲು ಸಮರ್ಥವಾಗಬಹುದು. ಯೂನಿಯನ್ ಮಾಡಿಕೊಳ್ಳುವ ಹಕ್ಕು, ಭಡ್ತಿ ಹಕ್ಕು, ಕೆಲಸ ಖಾತರಿ ಹಕ್ಕು, ಕನಿಷ್ಠ ವೇತನ ಹಕ್ಕು, ಲಾಕ್ ಔಟ್‌ಗೆ ಮಾಲಿಕನಿಗೆ ನೀಡಲಿರುವ ಹಕ್ಕು, ಅನಿರ್ದಿಷ್ಟ ಕಾಲ ಹೊರ ಗುತ್ತಿಗೆ, ಕಾಂಟ್ರಾಕ್ಟ್ ಕೆಲಸಗಳ ಪದ್ಧತಿ ಇವುಗಳಿಂದಾಗಿ ಹಲವಾರು ದಶಕಗಳ ಹೋರಾಟಗಳ ಫಲವಾದ ಎಲ್ಲಾ ಪ್ರಗತಿಪರ ಕಾರ್ಮಿಕ ನೀತಿಗಳಿಗೂ ಆಪತ್ತು ಒದಗಿಬಂದಿದೆ. ಮಾರುತಿ ಕಾರ್ಮಿಕರಿಗೆ ನೀರು ಊಟ ತಲಪದಂತೆ ಮಾಡುವ ಈ ಸರ್ಕಾರ, ನ್ಯೂಯಾರ್ಕಿನ ಬಂಡವಳಿಗರ ಕೇಂದ್ರ ವಾಲ್‌ಸ್ಟ್ರೀಟ್‌ನ ಪೊಲೀಸರಿಗಿಂತ ಅಸಹ್ಯವಾಗಿದೆ. ನಮ್ಮ ಪ್ರಜಾಪ್ರಭುತ್ವದ ಮೌಲ್ಯಗಳನ್ನೆಲ್ಲಾ ಗಾಳಿಯಲ್ಲಿ ತೂರುತ್ತಿದ್ದಾರೆ. ಕೂಲಿಗೋ ಬಡ್ತಿಗೋ ತುಟ್ಟಿಭತ್ಯಕ್ಕೋ ಅಲ್ಲ ಇಂದಿನ ಹೋರಾಟ. ಇದು ನಮ್ಮ ಮೂಲಭೂತ ಪ್ರಜಾಪ್ರಭುತ್ವದ ವ್ಯವಸ್ಥೆಯ ಪ್ರಶ್ನೆ. ಬುದ್ಧಿಜೀವಿಗಳೆಲ್ಲಾ ಚಿಂತಿಸುವರೋ ಇಲ್ಲವೋ? ಇದು ಕೇವಲ ಕಾರ್ಮಿಕರ ಪ್ರಶ್ನೆ ಅಲ್ಲ. ನಮ್ಮ ದೇಶ ಜಾಗತಿಕ ಬಂಡವಾಳಕ್ಕೆ ಸುಲಭದರದ ಸರಕು ಉತ್ಪಾದಿಸುವ ''ಸ್ವೆಟ್ ಷಾಪ್'' ಆಗಬೇಕೆ? ಚೀನಾದ ಮಿಕ್ಕೆಲ್ಲಾ ಧನಾತ್ಮಕ ನೀತಿಗಳನ್ನು ಬಿಟ್ಟು ಇದನ್ನು ಮಾತ್ರ ಆರಿಸಿಕೊಳ್ಳಬೇಕೆ? ತತ್ವಭ್ರಷ್ಟ ಮೋದಿ ಒಂದು ವೇಳೆ ದೇಶದ ಪ್ರಧಾನಿಯಾದರೆ, ಕಾರ್ಮಿಕರೆ! ಗಮನಿಸಿ, ಇಡೀ ದೇಶವೇ ಆತನ ಫ್ಯಾಸಿ ವರ್ಕ್‌ಶಾಪ್ ಆಗಿಬಿಡುವುದು ಸಾಧ್ಯ. ಈ ಕುರಿತ ಹೋರಾಟವನ್ನು ಬಹಳ ಕಾಲ

ಮುಂದೂಡಲಾಗುವುದಿಲ್ಲ. ಮಾರುತಿ ಪರಿಸ್ಥಿತಿಯೇ ಒಂದು ಮಹಾ ಸಂಗ್ರಾಮದ ಪ್ರಾರಂಭವನ್ನು ನೀಡಬೇಕು. ಕೋರ್ಟುಗಳು ಏಕಪಕ್ಷೀಯವಾಗಿ ಕಾರ್ಮಿಕರಿಗೆ ಮಾತ್ರ ನಿರ್ದೇಶನ ನೀಡುವುದನ್ನು ನಿಲ್ಲಿಸಬೇಕು.

* * *

ಅಕ್ರಮ ವ್ಯವಹಾರ ನಡೆಸಿ, ತಿಂದು ತೇಗಿ, ಆರೋಗ್ಯವಾಗಿ, ಆರಾಮವಾಗಿ ಓಡಾಡಿಕೊಂಡಿರುವ ರಾಜಕಾರಣಿಗಳಿಗೆ ಸಿಕ್ಕುಹಾಕಿಕೊಂಡು ಜೈಲಿಗೆ ಹೋದಾಗ ಎಲ್ಲಿಲ್ಲದ ಖಾಯಿಲೆ ಬಂದುಬಿಡುತ್ತೆ. ಇಂಥವರ ಪಟ್ಟಿಗೆ ಈಗ ಭಾಜಪ ನಾಯಕ ಮಾಜಿ ಮುಖ್ಯಮಂತ್ರಿ ಯಡಿಯೂರಪ್ಪ ಸೇರಿದ್ದಾರೆ. ಲೋಕಾಯುಕ್ತ ವಿಶೇಷ ನ್ಯಾಯಾಲಯದ ತೀರ್ಮಾನವನ್ನು ನಿರೀಕ್ಷಿಸಿದ್ದ ಈತ ಪೊಲೀಸರ ಕೈಗೆ ಸಿಗದೆ ತಪ್ಪಿಸಿಕೊಂಡು ಸಂಜೆ ಕೋರ್ಟಿಗೆ ಹಾಜರಾದರು. ಅಲ್ಲಿಯವರೆಗೆ ಓಡಾಡಿಕೊಂಡಿದ್ದ ಈತನಿಗೆ ಬೆನ್ನು ನೋವಿತ್ತಂತೆ! ಪರಪ್ಪನ ಅಗ್ರಹಾರ ಜೈಲಿನಲ್ಲಿ ಇದ್ದ ಕೆಲವೇ ಗಂಟೆಗಳಲ್ಲಿ ಈತನಿಗೆ ಮಾರಣಾಂತಿಕ ರೋಗ ಆವರಿಸಿಕೊಂಡು ಜಯದೇವ ಆಸ್ಪತ್ರೆಗೆ ದಾಖಲಾದರು. ಅಲ್ಲಿಂದ ವಿಕ್ಟೋರಿಯ ಆಸ್ಪತ್ರೆಗೆ ನಾಟಕೀಯವಾಗಿ ತಲೆಮರೆಸಿಕೊಂಡು ಹೋದರು. ನಂತರ ಏನಾಯಿತೋ, ಈಗ ಜೈಲೇ ವಾಸಿ ಎಂದು ಹೋಗಿದ್ದಾರೆ. ಅವರ ಶಿಷ್ಯ ಕಟ್ಟಾ ಸುಬ್ರಹ್ಮಣ್ಯನೂ ಇದೇ ತಂತ್ರ ಹೂಡಿದ್ದ; ಆದರೆ ಪ್ರಯೋಜನವಾಗಲಿಲ್ಲ. ಹೈದರಾಬಾದಿನ ಉದ್ಯಮಿ ಸತ್ಯಂ ಮಾಲಿಕ ಇದೇ ತಂತ್ರದಿಂದ ಆಸ್ಪತ್ರೆಯಲ್ಲಿ ದಾಖಲಾಗಿದ್ದ. ನ್ಯಾಯಾಲಯ ತರಾಟೆಗೆ ತೆಗೆದುಕೊಂಡ ಮೇಲೆ ಕಾರಾಗೃಹಕ್ಕೆ ತಳ್ಳಲ್ಪಟ್ಟ. ನ್ಯಾಯಾಲಯಗಳು ಇದನ್ನು ಗಮನಕ್ಕೆ ತೆಗೆದುಕೊಂಡು ಇಂಥ ವಂಚಕರ ಮೇಲೆ ಉಗ್ರಕ್ರಮ ಜರುಗಿಸಬೇಕು. ಇವರುಗಳಿಗೆ ಮಾತ್ರ ನಿರ್ದಾಕ್ಷಿಣ್ಯವಾಗಿ ಜಾಮೀನು ನಿರಾಕರಣೆಯಾಗಬೇಕು. ಜನರಿಗೆ ಮೋಸ ಮಾಡಿರುವವರಿಗೆ ಕಠಿಣ ಶಿಕ್ಷೆ ಆಗಬೇಕು. ಬಾಯಿ ತೆರೆದರೆ ಶಿಸ್ತು, ಸಿದ್ಧಾಂತ, ಪರಂಪರೆ ಎಂದು ಅಬ್ಬರಿಸುವ ಭಾಜಪ ನಾಯಕರ ನಡವಳಿಕೆಗೆ ಯಡಿಯೂರಪ್ಪ ನಡತೆಯೇ ಸಾಕ್ಷಿ.

* * *

ಕರ್ನಾಟಕ ಕಂಡ ಅತ್ಯಂತ ಭ್ರಷ್ಟ ಸರಕಾರ ಎಂದರೆ ಭಾಜಪ ಸರಕಾರ. ದಕ್ಷಿಣ ಭಾರತದಲ್ಲಿ ಮೊದಲ ಬಾರಿಗೆ ಅಸ್ತಿತ್ವಕ್ಕೆ ಬಂದ ಸರಕಾರ ತೀರಾ ಕಳಪೆ ಎನಿಸಿಕೊಂಡಿದೆ. ಭಾಜಪ ಸರಕಾರ ಅಸ್ತಿತ್ವದಲ್ಲಿರುವ ಎಲ್ಲ ರಾಜಗಳಲ್ಲೂ ಇದೇ ಪಾಡು ಹೆಚ್ಚು ಕಡಿಮೆ. ಇನ್ನು ಭಾಜಪ ಹೈಕಮಾಂಡ್ ಕೂಡ ಇದಕ್ಕೆ ಹೊರತಲ್ಲ. ಪ್ರಾಯಶಃ ಭ್ರಷ್ಟಾಚಾರ ಭಾಜಪದವರಿಗೆ ಒಂದು ಪರಂಪರೆಯಾಗಿ ಬಂದಿದೆ ಎಂದು ತೋರುತ್ತದೆ. 'ಒಂದು ಶಿಸ್ತಾಗಿ' ಮೊದಲ ಎನ್‌ಡಿಎ ಸರಕಾರದ ಭ್ರಷ್ಟಾಚಾರವೆಲ್ಲ ಹೇಗೋ ಮುಚ್ಚಿಹೋಯಿತು. ವೋಟಿಗಾಗಿ ನೋಟು ಪ್ರಕರಣದಲ್ಲಿ ಸಿಕ್ಕಿಕೊಂಡಿರುವ ಎಂಪಿಗಳು ಕೂಡ ಭಾಜಪದವರೆ! ಅದ್ವಾನಿ ರಥಯಾತ್ರೆ ಸಮಯದಲ್ಲಿ ಉತ್ತರ ಪ್ರದೇಶದಲ್ಲಿ ಪತ್ರಕರ್ತರಿಗೆ ಲಂಚ ನೀಡಿದ್ದ ಪ್ರಕರಣ ಬಯಲಾಗಿದೆ. ಒಳ್ಳೆ ವರದಿ ಪ್ರಕಟಿಸಲು ಪತ್ರಿಕಾಗೋಷ್ಠಿಗೆ ಆಮಂತ್ರಣದ ಜೊತೆಗೆ ರೂ. ೫೦೦, ರೂ. ೧೦೦೦ ನೋಟುಗಳನ್ನು ಇರಿಸಿದ್ದರಂತೆ ಭಾಜಪ ಸ್ಥಳೀಯ ನಾಯಕರು. ಪತ್ರಕರ್ತರಿಗೆ ಕಾರ್ಪೊರೇಟ್‌ಗಳು, ಕಂಪೆನಿಗಳು ಉದಾರವಾಗಿ 'ಗಿಫ್ಟ್'ಗಳನ್ನು ಕೊಡುವುದನ್ನು ಕಂಡಿದ್ದೇವೆ. ಅವರನ್ನು ಒಳ್ಳೆತನದಲ್ಲಿರಿಸಿಕೊಳ್ಳಲು ಭರ್ಜರಿ ಊಟ, ತಿನಿಸುಗಳನ್ನು ಕೊಡುವುದನ್ನು ಕಂಡಿದ್ದೇವೆ. ಈಚಿನ ದಿನಗಳಲ್ಲಿ ಮಾಧ್ಯಮದಲ್ಲಿ ಭ್ರಷ್ಟತೆ ತಾಂಡವಾಡುತ್ತಿರುವ ಕಥೆಗಳನ್ನು ಕೇಳಿದ್ದೇವೆ. ಆದರೆ ರಾಜಕೀಯ ಪಕ್ಷವೊಂದು ನೇರವಾಗಿ 'ನೋಟು'ಗಳನ್ನು ಹಂಚಿರುವುದನ್ನು ಕೇಳುತ್ತಿರುವುದು ಇದೇ ಮೊದಲ ಸಲ. ಅದ್ವಾನಿಯ ಈ ಸಲದ ರಥಯಾತ್ರೆಯಲ್ಲಿ ಇನ್ನೇನು ಕಾದಿದೆಯೋ ನೋಡೋಣ.

* * *

'ಕತ್ತಲಲ್ಲಿ ಕರ್ನಾಟಕ': ಇದು ಮಾಧ್ಯಮಗಳಲ್ಲಿನ ಶೀರ್ಷಿಕೆ. ಈಚಿನ ದಿನಗಳಲ್ಲಿ ರಾಜಧಾನಿ ಬೆಂಗಳೂರಿನ ಜನರೇ ಪುಣ್ಯವಂತರು. ಅವರಿಗೆ ಮಾತ್ರ ಕರೆಂಟ್ ಕಟ್ ಇಲ್ಲ. ಉಳಿದ ಕಡೆಗಳಲ್ಲಿನ ಜನ ಏನು ಪಾಪ ಮಾಡಿದ್ದಾರೋ ಆರೆಂಟು ಗಂಟೆ ಕರೆಂಟ್ ಇರುವುದಿಲ್ಲ. ಅಧಿಕೃತವಾಗಿ, ಕರೆಂಟ್ ಇರುವುದೇ ಅಪರೂಪ. ಪಂಪ್‌ಸೆಟ್ ಇರುವ ರೈತರ ಪಾಡಂತೂ ಹೇಳತೀರದು. ಕರ್ನಾಟಕಕ್ಕೆ ಇದು ಹೊಸ ವಿಷಯವೇನಲ್ಲ; ಮಾಮೂಲಿ. ಈ ಸಲ ಇಲಾಖೆಯವರು ನೀಡಿರುವ ಕಾರಣ ತೆಲಂಗಾಣ ಹೋರಾಟದಿಂದಾಗಿ ಸಿಂಗರೇಣಿ ಗಣಿಗಳಿಂದ ರಾಯಚೂರು ಥರ್ಮಲ್ ಪ್ಲಾಂಟ್‌ಗೆ ಅಗತ್ಯವಾದ ಕಲ್ಲಿದ್ದಲು ಸರಬರಾಜಾಗುತ್ತಿಲ್ಲ ಎಂದು. ಆದರೆ ಇದರ ಹಿಂದೆ ದೊಡ್ಡ 'ವಶೀಲಿ ಬಾಜಿ' ಇದೆ ಎಂದು ತಿಳಿದುಬಂದಿದೆ. ಕರೆಂಟ್ ಖರೀದಿಸು ವುದರಲ್ಲಿ ಕಮೀಶನ್ ತೆಗೆದುಕೊಳ್ಳುವ ದುರಾಸೆಯ ತಂಡವೇ ಇದೆಯಂತೆ! ಇದರಲ್ಲಿ ಸಚಿವೆಗೂ ಪಾಲಿದೆಯೇನೋ? ಯಾವಾಗಲೂ ರಾಯಚೂರಿನಲ್ಲಿ ಇರಬೇಕಾದ ದಾಸ್ತಾನನ್ನು ಇರಿಸಿಕೊಳ್ಳದೆ ಕೃತಕವಾಗಿ ಕೊರತೆ ಸೃಷ್ಟಿಯಾಗಿದೆ. ಭ್ರಷ್ಟಾಚಾರದಿಂದ ಕೂಡಿರುವ ವಿದ್ಯುತ್ ಇಲಾಖೆಯ ಅವ್ಯವಹಾರಗಳ ಕುರಿತು ತನಿಖೆಯಾಗಬೇಕೆಂದು ಒತ್ತಾಯ ತರಬೇಕಾಗಿದೆ.

* * *

ಕಳೆದ ತಿಂಗಳು ಮೈಸೂರು ವಿಶ್ವವಿದ್ಯಾಲಯದ ಘನತೆಯ ಪರಿಚಯವಾಯಿತು, ಈ ತಿಂಗಳು ಬೆಂಗಳೂರು ವಿಶ್ವವಿದ್ಯಾಲಯದ (ವಿ.ವಿ.) ಸರದಿ. ಜಯದೇವ ಹೃದ್ರೋಗ ಆಸ್ಪತ್ರೆಯ ಮುಖ್ಯಸ್ಥರಾಗಿದ್ದ ಡಾ॥ ಪ್ರಭುದೇವ ಆ ಸ್ಥಾನದಿಂದ ದೂರವಾದುದಕ್ಕೆ ಒಂದು ಇತಿಹಾಸವಿದೆ, ಅದರ ಕತೆ ಈಗ ಬೇಡ. ಶ್ರೀಯುತರು ಬೆಂಗಳೂರು ವಿ.ವಿ.ದ ಕುಲಪತಿ ಆದದ್ದು ಸದರಿ ವಿ.ವಿ.ಕ್ಕೆ ಹೃದ್ರೋಗ ಪೀಡೆ ಬಡಿದಂತಾಗಿದೆ. ಇದೇ ಸೆಪ್ಟೆಂಬರ್‌ನಲ್ಲಿ ಅವರು ಬೆಂಗಳೂರಿನ ಅರಮನೆ ಮೈದಾನದಲ್ಲಿ (ಅದ್ದೂರಿಯೆಂದು ಅವರು ಭಾವಿಸಿಕೊಂಡ) ಒಂದು ಪುಸ್ತಕ ಮೇಳ ನಡೆಸಿದರು. ಅದಕ್ಕೆ ಅವರು ಕಂಟ್ರಾಕ್ಟ್ ನೀಡಿದ್ದು ಒಬ್ಬ ಕುಶಲ ಪ್ರದರ್ಶನಕಾರರಿಗೆ. ಮೊತ್ತ ಕೇವಲ ಐದು ಕೋಟಿ ಇಪ್ಪತ್ತು ಲಕ್ಷ! ಒಂದು ವಾರದ ಈ ಮೇಳದಲ್ಲಿ ಎಲ್ಲ ಪ್ರಕಾಶಕರ ಒಟ್ಟು ಮಾರಾಟ ಒಂದು ಲಕ್ಷವನ್ನು ಮೀರಲಿಲ್ಲವಂತೆ, ಅಂಥ ''ಅಮೂಲ್ಯ'' ಪುಸ್ತಕಗಳು ಅಲ್ಲಿದ್ದವು. ಹಲವು ಪ್ರಮುಖ ಪ್ರಕಾಶನ ಸಂಸ್ಥೆಗಳು ಹೇಗೋ ಮೊದಲೇ ಅದರ ಗುಟ್ಟು ತಿಳಿದು ಮೇಳದ ಕಡೆ ತಲೆಹಾಕಲಿಲ್ಲವೆಂದು ತಿಳಿದುಬಂದಿದೆ. ಪ್ರಭುದೇವ ಹೇಳಿದ್ದರಂತೆ, ಮೇಳಕ್ಕೆ ಬಂದ ಪುಸ್ತಕ ಮಾರಾಟಗಾರರಿಂದ ತಲಾ ಇಂತಿಷ್ಟು ಲಕ್ಷ ಬೆಲೆಬಾಳುವ ಪುಸ್ತಕಗಳನ್ನು ಕೊಳ್ಳುವುದಾಗಿ. ಈವರೆಗೆ ಒಂದು ರೂಪಾಯಿನ ಪುಸ್ತಕವನ್ನು ಕೊಂಡಿಲ್ಲದಿರುವುದು ಪ್ರಭುದೇವರ ಪ್ರಾಮಾಣಿಕತೆಗೆ ಒಂದು ದಾಖಲೆ, ಎಂದು ಜನ ತಮ್ಮತಮ್ಮಲ್ಲೇ ಹೇಳಿಕೊಳ್ಳುತ್ತಿದ್ದಾರೆ. ಇಷ್ಟೆಲ್ಲಾ ಹೇಳುವಾಗ ಒಂದಂಶವನ್ನು ಹೇಳಬೇಕು: ನವಕರ್ನಾಟಕ ಪ್ರಕಾಶನವು ಮೇಳದಲ್ಲಿ ಭಾಗವಹಿಸಿರಲಿಲ್ಲ, ಎಂದು. ಪುಸ್ತಕ ಮೇಳವನ್ನು ಕಂಟ್ರಾಕ್ಟರಿಗೆ ವಹಿಸಲು ಬೆಂಗಳೂರು ವಿ.ವಿ. ಏಕೆ ಮುಂದಾಯಿತೆಂಬುದು ಕುತೂಹಲದ ಪ್ರಶ್ನೆ. ಇದಕ್ಕೆ ಸಂಬಂಧಿಸಿರದ ಬೇರಾವುದೋ ಕಾರಣಕ್ಕೆ ವಿ.ವಿ.ದ ರಿಜಿಸ್ಟ್ರಾರ್ (ಕುಲಸಚಿವ) ದೀರ್ಘಕಾಲದ ರಜೆಗೆ ತೆರಳಿದ್ದಾರೆ. ತನಿಖೆ ನಡೆಸ ಬೇಕೆಂದರೆ ಪ್ರಭುದೇವ ಅವರು ಬೇಕಾದಷ್ಟು ಸಾಮಗ್ರಿ ಒದಗಿಸಿದ್ದಾರೆ!

ಪ್ರಭುದೇವರ ಪುಸ್ತಕ ಪ್ರೀತಿಯನ್ನು ಕೆಟ್ಟ ಪುಸ್ತಕಗಳ ದಾಸ್ತಾನು ಮತ್ತು ಅವ್ಯವಹಾರಗಳಿಗೆ ದಿಟ್ಟ ಸಹಕಾರ ಎಂದು ವ್ಯಾಖ್ಯಾನಿಸಬಹುದು. ಸಂಭಾಷಣೆ ಯೊಂದನ್ನು ಅದು ನೆನಪಿಗೆ ತರುತ್ತದೆ: ಯಾರೋ ಒಬ್ಬ ತರುಣ ಸಿಂಹನಿದ್ದ, ಒಂದು ದಿನ ಅವನು ಉದ್ಯಾನವನದ ಮರಗಳನ್ನು ಎವೆಯಿಕ್ಕದೆ ನೋಡುತ್ತಾ ಅಪ್ರತಿಭನಾಗಿ ನಿಂತಿದ್ದ. ಅವನ ಹಿರಿಯ ಸ್ನೇಹಿತ ಅವನ ಬಳಿಗೆ ಸಾರಿ ಕೇಳಿದ, 'ಏನಯ್ಯಾ ಸಿಂಹರಾಜ, ಮರಗಳನ್ನು ನೋಡುತ್ತಾ ನಿಂತೆಯಲ್ಲ' ಎಂದು. ''ಸುಮ್ಮನೆ ನಿಂತಿದ್ದೇನೆಯೆ? ಯಾರು ನಿನಗೆ ಹಾಗೆ ಹೇಳಿದ್ದು? ಕಾಣುವುದಿಲ್ಲವೆ ನಿನಗೆ, ನಾನು ಜಾಗತಿಕ ಪುಸ್ತಕ ದಿನಾಚರಣೆಯ ಅಂಗವಾಗಿ ಪುಸ್ತಕ ಓದುತ್ತಿದ್ದೇನೆ'' ಎಂದು ಸಿಂಹ ಗರ್ಜಿಸಿದ. ''ಪುಸ್ತಕವೆ? ಅದೆಲ್ಲೂ ಕಾಣುತ್ತಿಲ್ಲವಲ್ಲ'' ಎಂದ ಸ್ನೇಹಿತ. ಸಿಂಹ ಹೇಳಿದ: ''ಅಯ್ಯೋ ಮಂಕೆ, ನಿನಗೇನೂ ಕಾಣುವುದಿಲ್ಲ, ಬಿಡು. ಪುಸ್ತಕವು ಇನ್ನೂ ಮರವಾಗಿರುವಾಗಲೇ ನಾನದನ್ನು ಓದುತ್ತಿದ್ದೇನೆ, ಗೆಳೆಯ.'' ಪುಸ್ತಕ ಪ್ರಕಾಶಕರಿಗೆ ಇದೊಂದು ಕಿವಿಮಾತು! ಪರಿಸರವಾದಿಗಳಿಗೆ ಸಿಂಹನ ಮಾತು ಆಪ್ಯಾಯಮಾನ ವೆನಿಸಬಹುದು, ಕೆಟ್ಟ ಪುಸ್ತಕಕ್ಕಾಗಿ ಕಾಗದ ವ್ಯರ್ಥ ಮಾಡಬಾರದೆಂಬ ಸಂದೇಶ ಕೊಡುತ್ತಿದ್ದಾನಲ್ಲ, ಅದಕ್ಕೆ.

* * *

ದೆಹಲಿಯಲ್ಲಿದ್ದರೆ ಪ್ರಮಾದಗಳನ್ನು ಎಣಿಕೆ ಮಾಡಿ ಲೆಕ್ಕವಿಡಲು ಹೇಗೆ ತಾನೆ ಸಾಧ್ಯ! ಮನಮೋಹನ ಸಿಂಗ್ - ಅಹ್ಲುವಾಲಿಯ - ಅದ್ವಾನಿ - ಚಿದಂಬರಂ ಇವರೆಲ್ಲಾ ಸರ್ಕಾರದ ನೀತಿಗಳನ್ನು ರೂಪಿಸುವ ಊರಲ್ಲಿ ಪ್ರಮಾದಗಳಿಗೆ ಕೊರತೆಯೆ? ಜೊತೆಗೆ, ದೆಹಲಿ ವಿಶ್ವವಿದ್ಯಾಲಯದ ಅಕೆಡೆಮಿಕ್ ಕೌನ್ಸಿಲ್ ಸಹ ಇದೆಯಲ್ಲ, ಅದರಲ್ಲಿ ಗುಜರಾತಿನ ಮುಖ್ಯಮಂತ್ರಿ ಮೋದಿಯ ಬೌದ್ಧಿಕ ಸಂತಾನದ್ದು ಮೇಲುಗೈ. ಅಂತಹ ಪ್ರಾಧ್ಯಾಪಕರನ್ನು ಪಡೆದ ಶಿಕ್ಷಣ ಸಂಸ್ಥೆ ಧನ್ಯ, ಅಲ್ಲವೆ? ಶ್ರೀಕೃಷ್ಣ

ಪ್ರಭುವನ್ನು ''ಧನ್ಯ ಧನ್ಯ ವಿಬುಧಮಾನ್ಯ'' ಎಂದು ಶ್ಲಾಘಿಸುವ ನಾಟಕದ ಒಂದು ಗೀತೆ ಇದೆ. ಅವನ ಬದಲಾಗಿ ದೆಹಲಿ ವಿ.ವಿ.ಯನ್ನು ಹಾಗೆ ಹೊಗಳ ಬಹುದೇನೊ! ಕೆಲ ವರ್ಷಗಳ ಹಿಂದೆ ಅದೇ ವಿ.ವಿ.ಯು ಎ. ಕೆ. ರಾಮಾನುಜನ್ ರಾಮಾಯಣವನ್ನು ಕುರಿತು ಬರೆದ ಪ್ರಬಂಧವನ್ನು ಸ್ನಾತಕೋತ್ತರ ವಿದ್ಯಾರ್ಥಿಗಳು ಓದಿ ತಲೆ ಶುದ್ಧ ಮಾಡಿಕೊಳ್ಳಕೂಡ ದೆಂದು ವಿಧಿಸಿತ್ತು. ಈ ಬಾರಿ ಅದನ್ನು ಅಕೆಡೆಮಿಕ್ ಕೌನ್ಸಿಲ್ ಗಹನವಾದ ಚರ್ಚೆಯ ನಂತರ ಮತ್ತೆ ಉಚ್ಚರಿಸಿದೆ. ಅಂತಹ ಮೇಧಾವಿಗಳು ವಿ.ವಿ.ಕ್ಕೆ ಭೂಷಣ ವಲ್ಲವೆ? ಏನನ್ನೂ ಓದಿ ವಿಮರ್ಶಿಸದೆ ಪಾಂಡಿತ್ಯ ಬೆಳೆಸಿಕೊಳ್ಳುವುದು ಸಾಧ್ಯವೆಂದು ತೀರ್ಮಾನಿಸುವ ಅಕೆಡೆಮಿಕ್ ಕೌನ್ಸಿಲ್‌ಗೆ ಕಪಿಲ್ ಸಿಬಲ್ ಒಂದು ಪದಕ ನೀಡಬೇಕು. ಆಗ ಪ್ರಶಾಂತ ಭೂಷಣ್ ಅವರ ಕಚೇರಿಗೆ ನುಗ್ಗಿ ಅವರ ಬಟ್ಟೆ ಹರಿದು ಚರ್ಮ ಸುಲಿಯುವ ದೇಶಪ್ರೇಮಿಗಳು ಹೆಚ್ಚಾಗುತ್ತಾರೆ. ಬೌದ್ಧಿಕ ವಲಯದಲ್ಲಿ ನೈತಿಕತೆ ಹೇಗಿರಬೇಕೆಂದು ಮಾತ್ರವಲ್ಲ, ಯಾವ ರಾಜಕೀಯ ಅಭಿಪ್ರಾಯಗಳನ್ನು ಹೊಂದಿರ ಬೇಕು, ಎಂಬುದನ್ನೂ ವಿಧಿಸುವಂತಹ ರಾಮಸೇನೆ-ರಾವಣಸೇನೆಗಳ ಫ್ಯಾಸಿಸ್ಟ್ ಮನೋಭಾವದ ಯುವಕರನ್ನು ದೆಹಲಿ ವಿ.ವಿ.ದ ಅಕೆಡೆಮಿಕ್ ಕೌನ್ಸಿಲ್ ಚೆನ್ನಾಗಿ ಬೆಳೆಸುತ್ತದೆ. ಅಲ್ಲದೆ, ಅದೇ ಯುವ ಸೇನೆಯು ಶಾಂತಿ ಭೂಷಣ-ಪ್ರಶಾಂತಭೂಷಣ-ಕೇಜ್ರಿವಾಲರ ಭ್ರಷ್ಟಾಚಾರ ವಿರೋಧಿ ಸೇನೆಯಲ್ಲೂ ಅಡಗಿಕೊಳ್ಳುತ್ತದೆ. ದೇಶದ ಬೌದ್ಧಿಕ ಶಿಸ್ತಿಗೆ ಕಡಿವಾಣ ಹಾಕುವ ಅಕೆಡೆಮಿಕ್ ಕೌನ್ಸಿಲ್‌ನ ಶುದ್ಧಶುಂಠಿ ತೀರ್ಮಾನದ ಪರಿಣಾಮ ಫ್ಯಾಸಿಸ್ಟ್ ಯುವಸೇನೆಯ ಜನನ.

*　　*　　*

ದೆಹಲಿ ವಿಶ್ವವಿದ್ಯಾಲಯದ ಅಕೆಡೆಮಿಕ್ ಕೌನ್ಸಿಲ್‌ಗೆ ಸಮನಾದ ಸಂಸ್ಥೆ ಇಲ್ಲದೆಯೂ ಪಾಕಿಸ್ತಾನದಲ್ಲಿ ''ನೈತಿಕ ಪೊಲೀಸರು'' ಬೌದ್ಧಿಕ ಹಲ್ಲೆ ನಡೆಸುತ್ತಾರೆ. ಅದು ದೈಹಿಕ ಹಲ್ಲೆಯಾಗಿಯೂ ಪ್ರಕಟ ಗೊಳ್ಳುತ್ತದೆ. ಧಾರ್ಮಿಕ ಜಡ್ಡುತನದ ಛಾಯೆ ನಮ್ಮಲ್ಲಿ ಕಾಣಸಿಗುವಂತೆ ಪಾಕಿಸ್ತಾನದಲ್ಲೂ ಉಂಟು. ಹೇಗಾದರೂ ಒಂದೇ ಪರಂಪರೆಯವರಲ್ಲವೆ! ಆದರೆ ''ನೈತಿಕ ಪೊಲೀಸರು'' ಯಾವ ಹಂತದಲ್ಲಿ ನೀಚತನ ಪ್ರದರ್ಶಿಸುತ್ತಾರೆಂಬುದರಲ್ಲಿ ಸ್ವಲ್ಪ ವ್ಯತ್ಯಾಸವಿರಬಹುದು. ಪಾಕಿಸ್ತಾನದಲ್ಲಿ ಒಬ್ಬ ಶಾಲಾ ಬಾಲಕಿಯು ಇಸ್ಲಾಂ ಧರ್ಮದ ಪ್ರವಾದಿಯ ಹೆಸರನ್ನು ಬರೆಯುವಾಗ ಕಾಗುಣಿತದ ತಪ್ಪು ಮಾಡಿದಳಂತೆ. ಅದಕ್ಕೆ, ಅವಳನ್ನು ತಿದ್ದುವ ಅಥವಾ ಬೋಧಕರಿಗೆ ಸರಿಯಾಗಿ ಕಲಿಸುವಂತೆ ಹೇಳುವ ಬದಲು ಬಾಲಕಿಯನ್ನು ಶಾಲೆಯಿಂದ ಹೊರದಬ್ಬಿದ ನಂಜಿನ ಕ್ರೌರ್ಯ ವರದಿಯಾಗಿದೆ. ನಮ್ಮಲ್ಲಿ 'ಕೃಷ್ಣ' ಎಂಬುದನ್ನು ಎಷ್ಟೋ ಪ್ರಾಧ್ಯಾಪಕರೇ 'ಕ್ರಿಷ್ಣ' ಎಂದು ಬರೆಯುತ್ತಾರೆ. ಅದಕ್ಕೆ ಅವರ ತಲೆ ತೆಗೆಯಬೇಕೆ? ತಲೆ ಯಾವಾಗಲೂ ತಿರುಗುತ್ತಲೇ ಇರುವುದು ಫ್ಯಾಸಿಸ್ಟರಿಗೆ ಎಂಬುದನ್ನು ಮನವರಿಕೆ ಮಾಡಿಕೊಳ್ಳಬೇಕು.

*　　*　　*

ಲೋಕಾಯುಕ್ತರಾಗಿ ಏನಾದರೊಂದು ಪ್ರಮುಖ ಕಾರ್ಯ ನಿರ್ವಹಿಸುವ ಮೊದಲೇ ನ್ಯಾಯಮೂರ್ತಿ ಪಾಟೀಲ್ ನಿರ್ಗಮಿಸಿದರು. ಈಗ ಇನ್ನೊಬ್ಬ ನ್ಯಾಯಮೂರ್ತಿ ಗುರುರಾಜನ್ ಸಹ ಅದೇ ಹಾದಿ ತುಳಿದಿದ್ದಾರೆ. ಇಬ್ಬರದೂ ಒಂದೇ ಕಾರಣವೋ ಬೇರೆ ಬೇರೆಯೋ ತಿಳಿಯದು. ಪಾಟೀಲರ ಸಂದರ್ಭದಲ್ಲಿ ಪ್ರಶ್ನೆಯೊಂದು ಹಾಗೆಯೇ ಉಳಿದಿದೆ. ಅವರು ಅಥವಾ ಅವರ ಕಡೆಯವರು ಅಕ್ರಮವಾಗಿ ನಿವೇಶನ ಪಡೆದದ್ದು ನಿಜವೆಂಬ ಕಾರಣಕ್ಕೆ ಅವರು ನಿರ್ಗಮಿಸಿದ್ದರೆ ನಿವೇಶನವನ್ನು ಹಿಂದಿರುಗಿಸಬೇಕಲ್ಲವೆ? ಅಂತೆಯೇ, ಅಕ್ರಮಕ್ಕೆ ಕಾರಣವಾದ ಗೃಹನಿರ್ಮಾಣ ಸಂಘದ ವಿರುದ್ಧವೂ ಕ್ರಮ ಜರುಗಿಸಬೇಕಲ್ಲವೆ? ಅದೇಕೋ, ಇದಾವುದೂ ಆಗುವುದಿಲ್ಲ ಮತ್ತು ಆಗಬೇಕೆಂಬ ಆಗ್ರಹವೂ ವ್ಯಕ್ತವಾಗುವುದಿಲ್ಲ. ಲೋಕಾಯುಕ್ತರ ಬಲೆಗೆ ಬಿದ್ದವರ ಕತೆಯೂ ಅದೇ. ಅಂಥವರ ಅಕ್ರಮ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಂಡಿರುವುದು ಉಂಟೆ? ಹಾಗೆ ಮಾಡದಿದ್ದಲ್ಲಿ ಇಷ್ಟೆಲ್ಲಾ ಮಾಡಿ ಏನು ಪುರುಷಾರ್ಥ ಸಾಧಿಸಿದಂತಾಗುತ್ತದೆ?

*　　*　　*

ಚೀಣಾದಲ್ಲಿ ರೈಲುಗಳು ಓಡುತ್ತವೆ, ಅಪಘಾತಗಳು ಕೂಡ ವೇಗವಾಗಿಯೇ ಸಂಭವಿಸುತ್ತವೆ. ಇತ್ತೀಚೆಗೆ ಷಾಂಘೈ ಲೋಕಲ್ ಮೆಟ್ರೊದಲ್ಲಿ ಅಂಥದೊಂದು ಘಟಿಸಿತು. ಎರಡು ತಿಂಗಳ ಹಿಂದೆ ಎರಡು ''ಬುಲೆಟ್ ಟ್ರೇನ್''ಗಳು ಪರಸ್ಪರ ಡಿಕ್ಕಿ ಹೊಡೆದು ಸಾವುನೋವು ಉಂಟಾಗಿತ್ತು. ಅಪಘಾತದಲ್ಲಿ ಮಡಿದವರ ಕುಟುಂಬ ಗಳವರಿಗೆ ಸರಿಯಾಗಿ ಮಾಹಿತಿ ಸಹ ನೀಡಲಾಗಲಿಲ್ಲ ಎಂದು ಚೀಣಾದಲ್ಲಿ ಕೆಲವರು ಹೇಳುತ್ತಾರೆ. ಅಪಘಾತದ ಸ್ಥಳಕ್ಕೆ ಯಾರೂ ಬರದಂತೆ ಮಾಡಿ ಜಾಗ್ರತೆಯಾಗಿ ಶವಗಳನ್ನು ಸಾಗಿಸಿದರು, ಸ್ವಚ್ಛತೆಯ ಕೆಲಸ ತುರ್ತಾಗಿ ಕೈಗೊಂಡರು, ಒಂದು ದಿನದಲ್ಲಿ ಮತ್ತೆ ರೈಲು ಸಂಚಾರ ಆರಂಭಿಸಿದರು. ಇದನ್ನೆಲ್ಲಾ ಗುಟ್ಟಾಗಿ ಮಾಡಿಬಿಟ್ಟರೆಂದು ಕೆಲವು ಕುಟುಂಬಗಳ ಆಕ್ಷೇಪ. ಅದು ಅಲ್ಲಿಯ ಟಿ. ವಿ. ಮಾಧ್ಯಮದಲ್ಲಿ ಚರ್ಚೆಗೆ ಬಂದಿತ್ತೆಂದು ಒಬ್ಬ ಚೀಣೀ ಮಹಿಳೆ ಖುದ್ದಾಗಿ ನಮಗೆ ಹೇಳಿದಳು. ಅದಕ್ಕೆ ಅದೇ ಟಿ.ವಿ.ಯಲ್ಲಿ ಕೊಡಲಾದ ಉತ್ತರ ಹೀಗಿದ್ದಿತಂತೆ: ''ಜಾಗ್ರತೆಯಾಗಿ ಮಾಡಿದ್ದು ತಪ್ಪೆ? ಭಾರತದಲ್ಲೇ ನಾದರೂ ಅಂತಹಾ ಅಪಘಾತ ಜರುಗಿದ್ದರೆ ಎಲ್ಲವನ್ನೂ ಸರಿಪಡಿಸಲು ೧೫ ದಿನ ಸಾಲುತ್ತಿರಲಿಲ್ಲ''. ಚೀಣಾದ ಗುಟ್ಟಾದ ಕಾರ್ಯಾಚರಣೆಗೆ ಸಮರ್ಥನೆಯೇ ಇದು? ಸಂಬಂಧಪಟ್ಟ ಕುಟುಂಬಗಳವರ ಹಕ್ಕನ್ನು ಮಾನ್ಯ ಮಾಡುವುದನ್ನು ಬಿಟ್ಟು ಭಾರತದ ಹೆಸರನ್ನೇಕೆ ಎಳೆದು ತರಬೇಕಾಗಿತ್ತು? ನಮ್ಮ ನಿಧಾನಗತಿಗೆ ಕ್ಷಮೆ ಇರಲಾರದು, ನಿಜ; ಆದರೆ ಅದಕ್ಕೆ ಪರಿಹಾರ ಅಪಘಾತವೇ ನಡೆಯಲಿಲ್ಲವೆಂದು ಹೇಳಲು ಗುಟ್ಟಾಗಿ ಕಾರ್ಯಾಚರಣೆ ನಡೆಸುವುದಲ್ಲ.

## ಬಾಳ ಬಂಗಾರ

**ಬಂ**ತೆಂದರೆ ದಸರಾ
ಬರುವದು ನನಗೆ ಚಳಿಜ್ವರಾ
ಮೈ ನಡುಗುವದು ಥರ ಥರಾ
ತಲೆ ತಿರುಗುವದು ಗರಗರಾ
ಕೊಡಿಸಬೇಕಲ್ಲಾ ನನ್ನಾಕೆಗೆ ಚಿನ್ನದ ಸರಾ
ಸಂಸಾರಕ್ಕೆ ಸಾಕಾಗೊಲ್ಲ ಪಗಾರಾ
ಬಲು ಕಷ್ಟ ಸಾಗಿಸಲು ಸಂಸಾರಾ
ಚಿನ್ನದ ಬೆಲೆ ಇಪ್ಪತ್ತು ಸಾವಿರಾ
ನೆನೆದರೆ ಎದೆಯೆಲ್ಲಾ ಚೂರಚೂರಾ
ದಿನಾ ಮಡದಿ ಓದುವಳು ಪೇಪರಾ
ನೋಡುವಳು ಚಿನ್ನದ ದರಾ
ಮುಖ ಮಾಡುವಳು ಒಂಥರಾ
ಮುಖ ತಿರುಗಿಸಿದಾಗ ತುಂಬಾ ಬೇಸರಾ
ಮಡದಿ ಮೆಲ್ಲನೇ ಬಂದಳು ಹತ್ತಿರಾ
ಮೈ ಬೆವರಿತು ಪೂರಾ
ನಸು ನಗುತ್ತ ಬೇಡಿದಳು ತೋಳಿನ ಆಸರಾ
ನುಡಿದಳು ನೀವೇ ನನ್ನ ಬಂಗಾರಾ
ಇಳಿಯಿತು ತಲೆಯ ಮೇಲಿನ ಭಾರಾ
ಓಡಿತು ಚಿಂತೆ ದೂರ ದೂರಾ
ಉಸುರಿದೆ ನೀ ನನ್ನ ಅಪ್ಸರಾ
ನೀನೇ ನನ್ನ ಬಾಳ ಬಂಗಾರಾ



ಜಿ. ಎಸ್. ಅಗ್ನಿಹೋತ್ರಿ
ಜಿ-೧-೨೦೧, ಮಧುರಾ ಫ್ಲಾಟ್ಸ್, ಮಧುರಾ ಎಸ್ಟೇಟ್ ಕೇಶವಪುರ, ಹುಬ್ಬಳ್ಳಿ - ೫೮೦ ೦೨೩




**ಅಕ್ಟೋಬರ್ ಸಂಚಿಕೆ**

ಸಂಪಾದಕೀಯದಲ್ಲಿ ಮೈಸೂರು ವಿಶ್ವವಿದ್ಯಾಲಯವು ಇನ್ಫೋಸಿಸ್‌ನಲ್ಲಿ ನಡೆಸಿದ ಸಮಾವೇಶದ ಬಗ್ಗೆ ಬರೆದಿದ್ದೀರಿ. ರಾಧಾಕೃಷ್ಣನ್ ಅವರಿದ್ದಂತಹ ವಿಶ್ವಖ್ಯಾತಿಯ ಸಂಸ್ಥೆ ಮೈಸೂರಿನಲ್ಲಿತ್ತೇ, ಎಂದು ಅಚ್ಚರಿಪಡಬೇಕಾದ ಪರಿಸ್ಥಿತಿ ಈಗ ಮೈಸೂರು ವಿಶ್ವವಿದ್ಯಾಲಯದಲ್ಲಿದೆ. ಇದಕ್ಕೆಲ್ಲ ಧನಪಿಶಾಚಿಗಳೇ ಕಾರಣ. ಅಂತೂ ಇಂತೂ ವಿಶ್ವವಿದ್ಯಾಲಯವು ನೀವು ಬರೆದಿರುವಂತೆ ಸುದ್ದಿಯಾಗುತ್ತಿರುತ್ತದೆ; ಒಳ್ಳೆಯ ಕಾರಣಕ್ಕಲ್ಲ ಎನ್ನುವುದು ವಿಷಾದಕರ ಸಂಗತಿ.

ಕುಬಾಳ ಜಗದೀಶ್ ಅವರ 'ಬೇವರ್ಸಿಯೊಬ್ಬನ ಆತ್ಮಚರಿತೆ' ಕಥಾ ತಂತ್ರದಿಂದಾಗಿ ಮನ ಸೆಳೆಯುತ್ತದೆ.

ಕಳೆದ ಸಂಚಿಕೆಗಳಲ್ಲಿ ನಾಪತ್ತೆಯಾಗಿದ್ದ ಕಲಾ ಪ್ರಪಂಚ ಮತ್ತೆ ಮುಖ ತೋರಿದ್ದು ಸಂತಸ ನೀಡಿದೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**

**ಸ್ಪಂದನ**

'ಕುವೆಂಪು ಕಾದಂಬರಿಗಳು...' ಲೇಖನದಲ್ಲಿ ಒಂದೆಡೆ ಚಂದ್ರಶೇಖರ ನಂಗಲಿಯವರು ಕುವೆಂಪು ಕಾದಂಬರಿಗಳನ್ನು 'ಜೇಡರ ಬಲೆ'ಗೆ ಹೋಲಿಸಿದ್ದಾರೆ. ಇದು ಥಾಮಸ್ ಹಾರ್ಡಿಯ ಈ ಹೇಳಿಕೆಯನ್ನು ನೆನಪಿಸಿತು : ''ಮನುಕುಲವೊಂದು ಮಹಾಜಾಲ ಅಥವಾ ನರಮಂಡಲ; ಅದರ ಒಂದು ಬಿಂದುವನ್ನು ಅಲುಗಿಸಿದರೆ, ಪ್ರತಿಯೊಂದು ಭಾಗದಲ್ಲೂ ಅದು ಸ್ಪಂದಿಸುತ್ತದೆ, ಮುಟ್ಟಿದರೆ ಜೇಡಬಲೆ ಹೇಗೊ ಹಾಗೆ.''

ಮೈಸೂರು **ಸಿಪಿಕೆ**

ನಾನು ಕುವೆಂಪು ಅವರೊಡನೆ ಇರುವಾಗ ಒಮ್ಮೆ ಕುವೆಂಪು ಹೇಳಿದ್ದು 'ನನ್ನ ಕಾದಂಬರಿಗಳನ್ನು ಪ್ರಾದೇಶಿಕ ಕಾದಂಬರಿಗಳು ಎಂದು ಸೀಮಿತ ದೃಷ್ಟಿಯಲ್ಲಿ ನೋಡಲಾಗುತ್ತಿದೆ. ಅದು ಸರಿಯಲ್ಲ ಅವು ವಿಶ್ವ ವ್ಯಾಪಕತೆಯನ್ನು ಒಳಗೊಂಡಿರುವ ಕಾದಂಬರಿಗಳು. ನೋಡಿ, ಮಲೆನಾಡಿನ ಮೂಲೆಯಲ್ಲಿ ಪಾದ್ರಿ ಜೀವಂದರಯ್ಯ ಮತಾಂತರಗೊಳಿಸುತ್ತಿರುವ ಮಿಣುಕು ಹುಳುವಾದರೆ ಅದೇ ಕಾಲದಲ್ಲಿ ಅಮೆರಿಕದ ವಿಶ್ವಧರ್ಮ ಸಮ್ಮೇಳನದಲ್ಲಿ ಸ್ವಾಮಿ ವಿವೇಕಾನಂದರು ವಿಶ್ವಕ್ಕೆ ವೇದಾಂತ ತತ್ವವನ್ನು ಸಾರುವ ಸೂರ್ಯನಾಗಿದ್ದರು. ಕಾನೂರು ಹೆಗ್ಗಡಿತಿಯ ಹೂವಯ್ಯನ ಅಧ್ಯಾತ್ಮ ದೃಷ್ಟಿಯೂ ಹಾಗೆಯೆ. ಅವು ಪ್ರಾದೇಶಿಕ ಮಟ್ಟದಲ್ಲೆ ನಿಲ್ಲುವುದಿಲ್ಲ' ಎಂದು.

ಕರ್ನಾಟಕ ಸಾಹಿತ್ಯ ಅಕಾಡೆಮಿ ೧೯೯೩ರಲ್ಲಿ ಹಮ್ಮಿಕೊಂಡ 'ಕನ್ನಡ ಸಾಹಿತ್ಯದ ಪುನರ್ ಮೌಲ್ಯೀಕರಣ' ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದ ಚದುರಂಗರು ''ಕುವೆಂಪು ಕಾದಂಬರಿಗಳು ಪ್ರಾದೇಶಿಕ ವಿವರಣೆಗಳಿಂದ ಸೊಕ್ಕಿ ಬಿಡುತ್ತವೆ; ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ನಾಯಕ ಪಾತ್ರವಾಗಲಿ, ಕೇಂದ್ರ ಬಿಂದುವಾಗಲಿ ಇಲ್ಲ; ಅದು ಕಾದಂಬರಿಯೇ ಅಲ್ಲ ಮುಂತಾದ ವಿಮರ್ಶೆಗಳು, ಟೀಕೆಗಳು ಗಣನೀಯವಾಗಿ ಬಂದುವು. ಆ ಕಾದಂಬರಿ ಪ್ರಕಟವಾಗಿದ್ದು ೧೯೬೭ರಲ್ಲಿ. ಈಗ ಅಂದರೆ ಸುಮಾರು ಮೂರು ದಶಕಗಳ ನಂತರ ಅದನ್ನು ಕಾದಂಬರಿ ಕ್ಷೇತ್ರದ ಅತ್ಯುತ್ತಮ ಲೋಕೋತ್ತರ ಕಾದಂಬರಿ ಎಂದು ಗುರುತಿಸಲಾಗುತ್ತಿದೆ. ಅಂದರೆ ವಿಮರ್ಶಾ ಕ್ಷೇತ್ರ




ವಾಸ್ತವ ಕಣ್ಣು ತೆರೆಯಲು ಮೂವತ್ತು ವರ್ಷಗಳು ಬೇಕಾಯ್ತು'' ಎಂದರು. ಆಗ ನಾನೂ ಅಕಾಡೆಮಿಯ ಸದಸ್ಯನಾಗಿದ್ದೆ.

ಈಗ ವಿ. ಚಂದ್ರಶೇಖರ ನಂಗಲಿ ಅವರು ಕುವೆಂಪು ಕಾದಂಬರಿಗಳು ಹೇಗೆ ಪ್ರಾದೇಶಿಕತೆಯಲ್ಲಿ ಬೇರು ಬಿಟ್ಟು ತಮ್ಮ ಕೊಂಬೆರೆಂಬೆಗಳನ್ನು ವಿಶ್ವದಗಲ ಚಾಚಿಕೊಂಡಿವೆ, ಕಾಲಾತೀತವಾಗಿವೆ ಎಂಬುದನ್ನು ಪ್ರಶ್ನಾತೀತವಾಗಿ ಮನದಟ್ಟು ಮಾಡಿಕೊಡುತ್ತಾರಲ್ಲದೆ ಕುವೆಂಪು, ಚದುರಂಗರ ಅಭಿಪ್ರಾಯವನ್ನೂ ಪುಷ್ಟೀಕರಿಸಿದ್ದಾರೆ.

ಇಂಥ ಅತ್ಯುತ್ತಮ ಒಳನೋಟಗಳನ್ನೊಳಗೊಂಡ ವಿಮರ್ಶಾ ಲೇಖನ ನೀಡಿದ ನಂಗಲಿ ಅವರಿಗೆ, ಪ್ರಕಟಿಸಿದ 'ಹೊಸತು'ವಿಗೆ ತುಂಬು ಹೃದಯದ ಅಭಿನಂದನೆಗಳು.

ಹಾಸನ **ಜ. ಹೊ. ನಾರಾಯಣಸ್ವಾಮಿ**

''ಕುವೆಂಪು ಕಾದಂಬರಿಗಳಿಗೆ ಏಕೈಕವೆನ್ನಬಹುದಾದ ಕ್ರಿಯೆ-ಕಾಲ-ದೇಶಗಳಲ್ಲಿ... ಎನ್ನುವ; ಈ ಕಾದಂಬರಿಗಳಿಗೆ ಪ್ರಾದೇಶಿಕ ಎಂಬ ಹಣೆಪಟ್ಟಿ ಹಚ್ಚಿರುವ ವಿಮರ್ಶೆಯ ವಾಗ್ ವಿಲಾಸಗಳಿಗೆ ಧಿಕ್ಕಾರವಿರಲಿ !'' – ಇದು ಚಂದ್ರಶೇಖರ ನಂಗಲಿ ಕೂಗಿರುವ ಕೂಗು. ಹೀಗೆ ಮೈಮೇಲೆ ದೇವರು ಬಂದದ್ದೇಕೆ ? ಈ ಲೇಖನದಲ್ಲಿ ಮತ್ತು ಅವರ ಹಿಂದಿನ ಬರಹಗಳಲ್ಲಿ ಇದಕ್ಕೆಲ್ಲಾ ಉತ್ತರವಿದೆ. ಬಿ.ಎಂ.ಶ್ರೀ., ಡಿ. ಆರ್. ನಾಗರಾಜ ಇವರುಗಳಾದಿಯಾಗಿ ಕುವೆಂಪು ಶಕ್ತಿಯನ್ನು ಪಾಶ್ಚಾತ್ಯ ವಿಮರ್ಶನಾ ಕ್ರಮದಡಿ ನೋಡಿದ ಕ್ರಮವೇ ಈಗ ಭೂತಕಾಲಕ್ಕೆ ಸೇರಬೇಕಾಗಿದೆ. ''ಕುವೆಂಪು : ಹೊಸ ಓದು ತತ್ವ'' ಬೇಕಾಗಿದೆ. ಅವರದು ಕಾಲ-ದೇಶ ಕ್ರಿಯೆಗಳನ್ನು ದೇಶೀ ಮತ್ತು ಮಾರ್ಗದೊಳು ಕೊಂಡೊಯ್ಯುವ ಮಾರ್ಗಗಳು. ಪಂಪನ ನಿಚ್ಚಂ ಪೊಸತು, ರನ್ನನ ಸಿಂಹಾವಲೋಕನ ಕ್ರಮ, ಅಲ್ಲಮನ ಕಾಲ ಪ್ರವಾಹ, ಕುಮಾರವ್ಯಾಸನ ಸಾಮಗ್ರಿ, ಇವೆಲ್ಲವೂ ಕುವೆಂಪು ಅವರ ವಿಶ್ವಲೀನತೆಯ ಮಾದರಿಗಳು. ಬಡತನವನ್ನೇ ಸಾಹಿತ್ಯದ ಸಾರ್ವಭೌಮತ್ವವಾಗಿ ವಸ್ತುವಿನಲ್ಲಿ ಘನೀಕರಿಸಿದ ಮಾದರಿ ಅವರ ಭೂಮ್ತಾಯ ಜನಪದೀಯ ಮಾದರಿಯದು. ಸೂರ್ಯೋದಯವನ್ನು ಹಳೆಮನೆಯ ಹಂದಿಯೊಡ್ಡಿಯ ಪ್ರಜ್ಞಾಸ್ತರದಲ್ಲಿರಿಸಿ ಆ ಹೆಗಡೆಯನ್ನು ವಿಶ್ವಪ್ರಜೆಯಾಗಿ ಕಾಣುವ ಕುವೆಂಪು, ಕಡಗೋಲು ಗಂಬ, ಮಸೆಕಲ್ಲುಗಳಲ್ಲಿ ಕಾಲ ದೇಶಗಳನ್ನು ಹಿಡಿದಿಡುತ್ತಾರೆ. ಅವರ ಮಲೆಮಗಳು ಕಾದಂಬರಿ ಮುಗಿಯುತ್ತ ಬರುವಾಗಲೂ ಕಾಲಮಾನದಲ್ಲಿ ಒಂದು ರಾತ್ರಿ ಒಂದು ಹಗಲು ಕಳೆದಿರುವುದಿಲ್ಲ. ಇದು ಕಾಲವನ್ನು ನಿಲ್ಲಿಸಿ ಹೇಳುವ ರನ್ನನ ಮಾದರಿ, ಪಂಪನ

ದ. ರಾ. ಬೇಂದ್ರೆ ಕಾವ್ಯಕೂಟವು ಸ್ನಾತಕೋತ್ತರ ಪದವಿ ವಿದ್ಯಾರ್ಥಿಗಳಿಗೆ ಲೇಖನ ಸ್ಪರ್ಧೆ ಆಯೋಜಿಸಿದೆ. ರೂ. ೪೦೦೦, ೩೦೦೦ ಮತ್ತು ೨೦೦೦ದ ಮೂರು ಬಹುಮಾನಗಳಿರುತ್ತವೆ. ಕಾಲೇಜಿನ ಪ್ರಾಧ್ಯಾಪಕರೊಬ್ಬರಿಂದ ಅಧಿಕೃತ ಪರಿಚಯ ಪತ್ರದೊಂದಿಗೆ ೨೫೦೦ ಪದಗಳನ್ನು ಮೀರದ ಲೇಖನ ಕಳಿಸಬೇಕು. ಕಾಲೇಜಿನ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ ಅಗತ್ಯ. ಆಕರಗ್ರಂಥ ಹಾಗೂ ಲೇಖನಗಳ ಪಟ್ಟಿಯನ್ನು ಕೊನೆಯಲ್ಲಿ ಕೊಡಬೇಕು.

**ವಿಷಯ : ಬೇಂದ್ರೆ ಸಾಹಿತ್ಯದಲ್ಲಿ ಶೋಷಿತ ಪರವಾದ ದನಿ**

ವಿಳಾಸ : **ಡಾ|| ಜಿ. ಕೃಷ್ಣಪ್ಪ**
**೨೨, ೧ನೇ ತಿರುವು, ನೇತಾಜಿ ನಗರ**
**ಮತ್ತಿಕೆರೆ, ಬೆಂಗಳೂರು – ೫೬೦ ೦೫೪**
**ದೂರವಾಣಿ : ೦೮೦-೨೩೬೦ ೩೪೦೨**

ನಿಚ್ಚಂ ಪೊಸತು, ವಿಧಾನ. ನಂಗಲಿಯವರು ಹೇಳುವಂತೆ ತೋಪು ವಿಮರ್ಶಕರಿಗೆ 'ಹತ್ತು ಮೀನು ಪರಂಪರೆ' ಅರ್ಥವಾಗುವುದಿಲ್ಲ. ಕುವೆಂಪು ಜಗತ್ತು ಜನಪದೀಯ ಜಗತ್ತು. ತುಂಗಾ ಮೂಲದಿಂದ ನೈಲ್ ನದಿ ಪರಂಪರೆಯ ದೇಶ ದಾಟುವ ಕ್ರಿಯೆ. ಇಂಥ ಜೀವಪ್ರಭೆಯುಳ್ಳ ಕುವೆಂಪು ಸಾಹಿತ್ಯಕ್ಕೆ ನಂಗಲಿ ಯವರು ಹೇಳುವಂತೆ ಅದು ಹೇಗೆ ಮೆಥಡಾಲಜಿ ಐಡಿಯಾಲಜಿಗಳನ್ನು ಹೇರಲಾಗುತ್ತದೆ ? ಅದನ್ನು ಮೀರಲು ಹತ್ತು ಮೀನೆಂದರೆ ಏನೆಂದು ಗೊತ್ತಿರಬೇಕು. ಕುವೆಂಪು ಅವರ ದೇಶಿ-ಮಾರ್ಗ ವಿಧಾನ ಒಮ್ಮೆ ಪಂಪನೆಡೆಗೆ ದಿಕ್ಕು ತೋರಿದರೆ ಮತ್ತೊಮ್ಮೆ ವರ್ಡ್ಸ್‌ವರ್ತನದೋ, ಟಾಲ್‌ಸ್ಟಾಯ್‌ನದೋ ಆಗಿ ಮಾರ್ಪಾಡಾಗುತ್ತದೆ. ಹೀಗಾಗಿ ಅವರ ಸಾಹಿತ್ಯದ ಸಿವಿಕ್ ವಿಸ್‌ಡಂ, ಫೋಕ್ ವಿಸ್‌ಡಂಗಳನ್ನು ಅರಿಯಲು ಯಾರಿಗೆ ಕಣ್ಣಿವೆಯೋ ಅವರಿಗೆ ಮಾತ್ರ ಸಾಧ್ಯ. ಅವರದು ಸಾಗರದ ಓದು. ಕೆರೆ, ಕುಂಟೆ, ಬಾವಿಗಳೆಲ್ಲವೂ ಸಾಗರದೊಳು ಐಕ್ಯ ವಾಗಿರುವ ರೀತಿಯನ್ನು ಅರಿಯಲು ಎಂಟೆರ್ದೆ ಬೇಕು. ಇದೇ ನಂಗಲಿಯವರ, ನಮ್ಮಗಳ ಬಯಕೆ. 'ಅವರ ಕುವೆಂಪು ಕಾದಂಬರಿಗಳು – ಹೊಸ ಓದು ತತ್ವ' ಹೊಸ ವಿಮರ್ಶಾ ಮಾದರಿಯಾಗಿದೆ.

*ಬೆಂಗಳೂರು* **ಡಾ|| ರಾಜೇಗೌಡ ಹೊಸಹಳ್ಳಿ**

''ಭಗವದ್ಗೀತೆ''ಯ ಬಗ್ಗೆ ಬರೆಯುತ್ತ ನೀವು ಒಂದು ಪತ್ರದ ಉತ್ತರದಲ್ಲಿ, ''ಎಡಕ್ಕೆ ಬಲವಿಲ್ಲ ಎಂಬುದು ಬೌದ್ಧಿಕ ವಲಯದಲ್ಲಿ ಅಪ್ರಸ್ತುತ'' ಎಂದು ಬರೆದಿದ್ದೀರಿ. ಅದು ಸರಿ. ಯಾಕೆಂದರೆ ಭಗವದ್ಗೀತೆಯೇ ಚಾತುರ್ವರ್ಣ್ಯದ ಬಗ್ಗೆ ಹೇಳುತ್ತದೆ. ಅದನ್ನು ಮನುವಿಗೆ ಮತ್ತು ಶಂಕರಾಚಾರ್ಯರಿಗೆ ವಿಸ್ತರಿಸಿದರೆ, ಭಗವದ್ಗೀತೆ - ಒಂದು ಬಹುಸಂಖ್ಯಾತ ಶೂದ್ರ ವಿರೋಧಿಯಾಗುತ್ತದೆ. ಇತ್ತೀಚೆಗೆ ಅದನ್ನು ''ಹಿಂದೂ ಧರ್ಮ''ದ ಅಧಿಕೃತ ಧರ್ಮ ಗ್ರಂಥ ಎಂದು ಹೇಳ ಲಾಗುತ್ತಿದೆ. ಒಂದು ಬಹುಸಂಖ್ಯಾತ ಶೂದ್ರವಿರೋಧಿ ಗ್ರಂಥ, ಎಲ್ಲ ಹಿಂದುಗಳ ಧರ್ಮ ಗ್ರಂಥ ಹೇಗಾಗುತ್ತದೆ ? 'ಹಿಂದೂ' ಪದದ ಉಪಯೋಗವನ್ನೇ ಕೆಲವರು ವಿರೋಧಿಸುತ್ತಾರೆ. ಇಷ್ಟೆಲ್ಲ ಗೋಜಲುಗಳು ನಮಗೆ ''ಭಗವದ್ಗೀತೆ'' ಬಗ್ಗೆ ಮಾತನಾಡುವಾಗ ಉಂಟಾಗು ತ್ತದೆ. ನಮ್ಮ ಸಮಸ್ಯೆಗೆ ಪರಿಹಾರವಿಲ್ಲ, ಅಲ್ಲವೆ ?

ರಾಣೆಬೆನ್ನೂರು **ಎ. ಸಿ. ಹಿರೇಬಡೆಯರ್**

## ಸತ್ಯಮೇವ ಜಯತೇ !

**ಭ್ರಷ್ಟಾಚಾರ್ಯರಿಂದ**
**ಲೋಕಾಯುಕ್ತರು**
**ಜಪ್ತಿ ಮಾಡಿದ**
**ನೋಟುಗಳಲ್ಲೇ**
**ಬರೆದಿತ್ತಂತೆ**
**ಸತ್ಯಮೇವ ಜಯತೇ...**
**ಎಂದು !**

**ಪಿ. ಜಿ. ರಾಘವೇಂದ್ರ**
ಮೈಸೂರು

ಅಣ್ಣಾ ಹಜಾರೆ ಜನಲೋಕಪಾಲ ಮಸೂದೆ ಜಾರಿಗಾಗಿ ಹೋರಾಟ ನಡೆಸುವ ಮೊದಮೊದಲು ಯಾರ್‍ಯಾರು ಆ ಮಸೂದೆಯನ್ನು ಬೆಂಬಲಿಸಿದ್ದರೋ ಅವರೆಲ್ಲರೂ ಈಗ ತಣ್ಣಗೆ ಕುಳಿತಿದ್ದಾರೆ.

'ಹೋರಾಟ' ಚಿಗುರುಕೊಳ್ಳುತ್ತಿದ್ದಂತೆ ಈ ಹಜಾರೆ ಏನು ಮಹಾ ಎಂಬಂತೆ ಇದ್ದಕ್ಕಿದ್ದಂತೆ ಹಜಾರೆಗಿಂತಲೂ ದೈತ್ಯಾಕಾರವಾಗಿ ಎದ್ದುನಿಂತು ದೇಶದ ಕಪ್ಪು ಹಣ ವಾಪಾಸು ತರಬೇಕೆಂದು ರಾಮಲೀಲಾ ಮೈದಾನದಲ್ಲಿ ಆರ್ಭಟಿಸಿ ಕಡೆಯಲ್ಲಿ ಕೈಲಾಗದವರಂತೆ ವರ್ತಿಸುತ್ತಾ ತಾನು ದೇಶದಲ್ಲೆಡೆ ಸಶಸ್ತ್ರ ಪಡೆಯ ಯುವಕರ ಗುಂಪನ್ನು ತಯಾರು ಮಾಡುತ್ತೇನೆಂದು ಹೇಳಿದ್ದರು. ಅಂತಹ ಬಾಬಾ ರಾಮದೇವ್ ಎಂಬ ಯೋಗಗುರು ಈ ಹೊತ್ತಿನಲ್ಲಿ ಯಾವ ಸ್ಥಳದಲ್ಲಿ ಯುವಕರಿಗೆ ತರಬೇತಿ ನೀಡುತ್ತಿದ್ದಾರೋ ತಿಳಿಯುತ್ತಿಲ್ಲ!

ಶಸ್ತಾಸ್ತ್ರ ತರಬೇತಿ ನೀಡುತ್ತೇನೆಂದು ಬಹಿರಂಗವಾಗಿ ಹೇಳಿಕೆ ನೀಡಿದ ಬಾಬಾ ರಾಮ್‌ದೇವ್‌ರನ್ನು ಸಶಸ್ತ್ರ ನಿಷೇಧ ಕಾಯ್ದೆಯಡಿಯಲ್ಲಿ ಇನ್ನೂ ಬಂಧಿಸಲು ಸಾಧ್ಯವಾಗಿಲ್ಲವೇಕೆ ? ರಾಮ್‌ದೇವರ ಸಶಸ್ತ್ರ ಪಡೆ ತಮ್ಮ ಮೇಲೆ ದಾಳಿ ಮಾಡಬಹುದೆಂಬ ಆತಂಕದಿಂದ ಸರ್ಕಾರ ಸುಮ್ಮನಿದ್ದಿರಬಹುದೇ ? ಯೋಚನೆ ಮಾಡಿ, ಯಾರೋ ಒಬ್ಬ ಜನಪರ ಹೋರಾಟಗಾರ ಈ ವ್ಯವಸ್ಥೆಯ ವಿರುದ್ಧವಾಗಿ ಇಂಥದ್ದೊಂದು ಹೇಳಿಕೆ ನೀಡಿದ್ದರೆ ಸರ್ಕಾರ ಸುಮ್ಮನಿರುತ್ತಿತ್ತೇ ?

'ಚಳವಳಿ'ಗಾರರ ಮೇಲೆ ಪೊಲೀಸರ ದಾಳಿ ಯಾಗುವಾಗ ಚಳವಳಿಗಾರರನ್ನು ಕೈಬಿಟ್ಟು ಪಲಾಯನ ಗೈದ ಯೋಗಗುರುವಿನ ಹೋ(ಹಾ)ರಾಟ ಅಂತಿಮ ವಾಗುತ್ತಿದ್ದಂತೆ ಮತ್ತೆ ಜಿಗಿದೆದ್ದಂತೆ ಶುರುವಾಯಿತು ಅಣ್ಣಾ ಹಜಾರೆಯ ಹೋರಾಟ !

ಈ ಹೋರಾಟದ ಕಾವು ಕಂಡ ಕೆಲವರಂತೂ ಪ್ರಚಾರದ ಭರಾಟೆಯಲ್ಲಿ ಬೇಕಾಬಿಟ್ಟಿಯಾಗಿ ತಮ್ಮ ತಮ್ಮ ಪಕ್ಷಗಳ, ಸಂಘಟನೆಗಳ ಬಾವುಟಗಳನ್ನು ಎತ್ತಿ ತೋರಿಸುತ್ತಾ ಭಾರೀ ಹೋರಾಟವೆಂಬಂತೆ ಜನತೆಯನ್ನು ನಿದ್ದೆಗೆಡಿಸಿ, ಇನ್ನು ಭ್ರಷ್ಟಾಚಾರಿಗಳಿಗೆ ಉಳಿಗಾಲವೇ ಇಲ್ಲವೇನೋ..., ದೇಶದಲ್ಲೇನೋ ಮಹಾನ್‌ಕ್ರಾಂತಿಯೇ ಆಗಿಹೋಗಲಿದೆ ಯೇನೋ ಎಂಬ ಭಾರೀ ಭ್ರಮೆ ಸೃಷ್ಟಿಮಾಡಿದ್ದರು. ಹೀಗೆ ಭ್ರಮೆ ಸೃಷ್ಟಿಯಾಗಲು ಮಾಧ್ಯಮಗಳ ಪಾತ್ರವೂ ಹೆಚ್ಚಾಗಿತ್ತು.

ಆಳದಲ್ಲಿ ಹಜಾರೆಯ ಹೋರಾಟವನ್ನು ಬೆಂಬಲಿಸಿ ದವರಲ್ಲಿ ಮುಂಚೂಣಿಯಲ್ಲಿದ್ದವರು ಐಟಿ-ಬಿಟಿ ಕಂಪನಿಗಳ ಮಂದಿ. ನಿಜಕ್ಕೂ ಐಟಿ-ಬಿಟಿಗಳಿಗೆ ಈ ದೇಶದಲ್ಲಿ ಅದೆಷ್ಟು ಕೋಟಿ ಜನ ನಿರುದ್ಯೋಗಿಗಳಿದ್ದಾರೆ ಎಂಬುದಾಗಲಿ, ಬಡತನ-ಶೋಷಣೆ-ಅಸಮಾನತೆಗೆ ಸಿಲುಕಿದವರ ಸಂಖ್ಯೆ ಎಷ್ಟಿದೆ ಎಂಬುದಾಗಲಿ ತಿಳಿದಿದೆಯೆ ?

ದೇಶದ ಖನಿಜ ಸಂಪತ್ತನ್ನು ಲೂಟಿ ಮಾಡುತ್ತಲೇ ದೊಡ್ಡ-ದೊಡ್ಡ ಕಂಪನಿಗಳನ್ನಿಟ್ಟ ಮಂದಿಗಳು ಒಂದೆಡೆ ಯಾದರೆ, ಇನ್ನೊಂದೆಡೆ ಸ್ವಾಮೀಜಿಗಳ ವೇಷದಲ್ಲಿದ್ದು ಕೊಂಡು ದೇಶದೊಳಗೂ-ಹೊರಗೂ ಭಾರೀ ಆಸ್ತಿ-ಪಾಸ್ತಿ ಹೊಂದಿ ಸ್ವತಃ ತಾವೇ ಭ್ರಷ್ಟರಾಗಿದ್ದು ಕೊಂಡೇ ಈ ಹೊತ್ತಿನಲ್ಲಿ ದೇಶೋದ್ಧಾರದ ಮಾತಾಡು ತ್ತಿರುವುದು ನಿಜಕ್ಕೂ 'ಬಿಸಿಲಿನ ಬಾಯಲ್ಲಿ ಬೆಳದಿಂಗಳ ಮಾತಿ'ನಂತೆ ಕೇಳಿಸುತ್ತಿಲ್ಲವೇ ?

ಹೀಗೆ ಹಜಾರೆಗಿರಿಯ ಹೋರಾಟ ನೊಂದವ ರಲ್ಲದ, ಶೋಷಣೆಯ ವಿರುದ್ಧದ ಆಕ್ರಂದನವಿಲ್ಲದ, ಬಡತನ ಎಂದರೇನೆಂದು ತಿಳಿಯದ, ಕೇವಲ ಶ್ರೀಮಂತ ವರ್ಗ ಮತ್ತು ಮಧ್ಯಮ ವರ್ಗದ ಜನರ ಹೋರಾಟವಾಗಿ ದೇಶದೆಲ್ಲೆಡೆ ಬಿರುಗಾಳಿಯಂತೆ ಅಪ್ಪಳಿಸಿತು. ಆದರೆ ಸಾಧಿಸಿದ್ದಾದರೂ ಏನು ಎಂಬ ಪ್ರಶ್ನೆ ಉಳಿದಿದೆ. ಭ್ರಷ್ಟಾಚಾರದ ಮುಕ್ತಿಗಾಗಲಿ, ದೇಶದ ಪ್ರಗತಿಗಾಗಲಿ, ಜನಹಿತದ ಯಾವ ಪ್ರಯೋಜನಕ್ಕೂ ಬಾರದ ಅಣ್ಣಾ ಹಜಾರೆಯ ಕೆಲವೇ ಕೆಲವು ದಿನಗಳ ಹೋರಾಟವನ್ನು ಭಾರಿ ಹೋರಾಟವಾಗಿ ಕೈಗೆತ್ತಿ ಕೊಂಡವರು ಮಣಿಪುರ ದಲ್ಲಿ ೧೦ ವರ್ಷಗಳಿಂದಲೂ ಉಪವಾಸ ಮಾಡಿ ಪ್ರತಿಭಟನೆ ಮಾಡುತ್ತಲೇ ಬಿಎಸ್‌ಎಫ್ ಸಶಸ್ತ್ರ ಪಡೆಯನ್ನು ರದ್ದುಮಾಡಬೇಕೆಂದು ಒತ್ತಾಯಿಸುತ್ತಿರುವ ಇರೋಂ ಶರ್ಮಿಳಾ ಎಂಬ ಹೆಣ್ಣುಮಗಳ ಹೋರಾಟಕ್ಕೆ ಹಜಾರೆಗಿರಿಯ ಜನ ಬೆಂಬಲಿಸಲು ಮುಂದಾಗಲಿಲ್ಲವೇಕೆ ?

ಮೂಡಿಗೆರೆ **ಕಿರುಗುಂದ ರಫೀಕ್**

## ಹೊಸತು ಜನವರಿ ಸಂಚಿಕೆ

ಜನವರಿ ೨೦೧೨ರ ಸಂಚಿಕೆಯಲ್ಲಿ 'ಭ್ರಷ್ಟಾಚಾರದ ನಿರ್ಮೂಲನಕ್ಕೆ ನಿರ್ದಿಷ್ಟ ಸೂಚನೆಗಳು' ಎಂಬ ವಿಷಯವನ್ನು ಕುರಿತು ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಓದುಗರಲ್ಲಿ ಮನವಿ ಮಾಡಿಕೊಳ್ಳುತ್ತಿದ್ದೇವೆ. ನವೆಂಬರ್ ೨೦೧೧ರ ಅಂತ್ಯದೊಳಗಾಗಿ ನಿಮ್ಮ ಬರಹವನ್ನು ಕಳಿಸಿ. ಅದು ೨೦೦ ಪದಗಳ ಮಿತಿಯಲ್ಲಿದ್ದರೆ ಒಳ್ಳೆಯದು.

*– ಸಂಪಾದಕ ಮಂಡಲಿ*

# ಮೂರನೇ ಲೋಕದ ಆರ್ತನಾದ

ಮಲಯಾಳಂ ಮೂಲ : ಅರ್ಷಾದ್ ಬತೇರಿ

ಕನ್ನಡಕ್ಕೆ : ಪಾರ್ವತಿ ಜಿ. ಐತಾಳ್

ಇವತ್ತೂ ಮೀರ್‌ಸಾದ್ ಹೊರಟಾಗ ತಡವಾಯಿತು. ಕಾಲಮಾಪನಕ್ಕಾಗಿ ಕಂಡುಹಿಡಿದ ಉಪಕರಣಗಳೆಲ್ಲವನ್ನೂ ದ್ವೇಷಿಸುತ್ತ ಆತ ನಡೆದ. ಎಷ್ಟು ಬೇಗ ಹೊರಟರೂ ಕಾಲದ ಜಿಗಿತವನ್ನನುಸರಿಸಿ ಹೋಗಲಾಗುತ್ತಿಲ್ಲ. ಆದರೆ ತಡವಾಗಿ ತಲಪುವ ಆತನ ಮುಂದೆ ಎರಡು ದಾರಿಗಳಿವೆ. ಒಂದನೆಯದು, ಪೋಸ್ಟಾಫೀಸು ದಾರಿಯ ಓವರ್‌ಬ್ರಿಜ್ ಹತ್ತಿ ಟ್ರಾಫಿಕ್ ಜಂಕ್ಷನ್ ದಾಟಿಹೋಗುವುದು. ಇನ್ನೊಂದು, ರೈಲ್ವೆ ಹಳಿಗಳನ್ನು ನೇರವಾಗಿ ದಾಟುವುದು. ಸುಲಭದಲ್ಲಿ ಹೋಗಿ ತಲುಪಬೇಕಿದ್ದರೆ ಎರಡನೇ ದಾರಿ ಒಳ್ಳೆಯದು.

''ಉಹುಂ, ಆಗಲ್ಲ. ರೈಲ್ವೇ ಹಳಿಗಳನ್ನು ದಾಟುವುದು ಸಾಧ್ಯವಿಲ್ಲ.''

ಅಸಂಖ್ಯ ಜೀವಗಳ ಮಿದುಳನ್ನು ತಿಂದು ರಕ್ತ ಕುಡಿದು ಹೊಟ್ಟೆಯುಬ್ಬಿಸಿಕೊಂಡ ಹಳಿಗಳು. ಅದರ ಯಾವುದೋ ಲೆವೆಲ್ ಕ್ರಾಸಿನಲ್ಲಿ ತಿಂಗಳುಗಳಿಂದ ಮೀರ್‌ಸಾದ್ ಅಹಮದ್ ಸಿಕ್ಕಿಹಾಕಿಕೊಂಡು ಚಡಪಡಿಸುತ್ತಿದ್ದ. ಗಿಡುಗನ ಮುಖದ ಮ್ಯಾನೇಜರ್ ಪ್ರಶ್ನೆಗಳಿಂದ ಚುಚ್ಚುವುದನ್ನೆಣಿಸಿದಾಗ ಆತನಿಗರಿವಿಲ್ಲದಂತೆ ಮೀರ್‌ಸಾದ್ ಈ ದಾರಿಯ ಆಶ್ರಯ ಪಡೆಯುತ್ತಾನೆ. ಕೆಲವು ದಿನಗಳವರೆಗೆ ಅವನಿಗೆ ಅತ್ಯಂತ ಪ್ರಿಯವಾದ ದಾರಿಯಾಗಿತ್ತದು. ತಡವಾಗಿ ಬರುವ ತನಗೆ ಸಹಾಯ ಮಾಡಲೆಂದೇ ಯಾರೋ ಈ ದಾರಿಯನ್ನು ಸೃಷ್ಟಿಸಿದ್ದಾರೆ ಅನ್ನಿಸಿತ್ತು. ಆದರೆ ಇವತ್ತು ಅದು ಸಾಧ್ಯವಿಲ್ಲ. ತನ್ನೆಲ್ಲ ರಕ್ತವನ್ನೂ ಆ ಹಳಿಗಳು ಹೀರಿ ಕುಡಿಯುತ್ತಿವೆ ಎಂಬ ಭಯದಿಂದ ಬಿಡಿಸಿಕೊಳ್ಳಲಾಗುತ್ತಿಲ್ಲ.

''ಓವರ್‌ಬ್ರಿಜ್ ದಾರಿಯಲ್ಲಿ ಹೋಗಲೆ ?''... ಆತ ತನ್ನನ್ನೇ ಪ್ರಶ್ನಿಸಿಕೊಂಡ.

''ಬೇಡ. ತಡವಾದೀತು. ಅದರಿಂದುಂಟಾಗುವ ಅಸ್ವಸ್ಥತೆ ಇವತ್ತಿನ ವ್ಯಾಪಾರವನ್ನು ಪೂರ್ತಿಯಾಗಿ ಹಾಳು ಮಾಡಲು ಸಾಕು.''

''ಆದರೆ ಹಳಿಗಳನ್ನು ನಾನು ಹೇಗೆ ದಾಟಲಿ ?'' ಶಕ್ತಿ ಉಡುಗಿಹೋಗುತ್ತಿರುವ ಮನಸ್ಸು, ದೇಹದ ಎಲ್ಲ ಭಾಗಗಳಲ್ಲಿ ಆತಂಕದಿಂದ ಸಂಚರಿಸಿತು. ಈ ಕೆಲಸವೂ ಕೈಬಿಟ್ಟುಹೋದರೆ ಮತ್ತೆ ಎದ್ದುನಿಲ್ಲುವ ಶಕ್ತಿ ಮೀರ್‌ಸಾದ್ ಅಹಮ್ಮದ್‌ಗಿಲ್ಲ. ಕೆಲಸವಿದೆಯೆಂದು ಹೇಳಿಕೊಳ್ಳಲು ಏನೂ ಇರುವುದಿಲ್ಲ. ಒಂದು ಸಿಗರೇಟು ಕಂಪೆನಿಯ ಜಾಹೀರಾತಿಗಾಗಿ ತಾತ್ಕಾಲಿಕವಾಗಿ ನೇಮಿಸಲ್ಪಟ್ಟವನಾಗಿದ್ದ ಆತ. ಒಂದು ಸಿಗರೇಟು ಪ್ಯಾಕೆಟ್ ಕೊಂಡರೆ ಒಂದು ಲೈಟರ್ ಫ್ರೀ. ಅದನ್ನು ಕೊಳ್ಳುವ ವ್ಯಕ್ತಿಯ ಹೆಸರು-ವಿಳಾಸಗಳನ್ನು ಒಟ್ಟುಮಾಡಲು ಕಂಪೆನಿ ಒಂದು ಫಾರ್ಮು ಕೊಟ್ಟಿದೆ. ಎಲ್ಲವನ್ನೂ ಒಟ್ಟಿಗೆ ಅಂಗಡಿಗಳಿಗೆ ಮಾರದೆ ಸಾಮಾನ್ಯ ಜನರು ಎಷ್ಟು ಕೊಂಡುಕೊಳ್ಳುತ್ತಾರೆ ಎಂಬುದನ್ನು ತಿಳಿಯಲು ಕಂಪೆನಿ ಅಂಥದೊಂದು ನಿರ್ಧಾರ ತೆಗೆದುಕೊಂಡಿತ್ತು. ಭರ್ತಿ ಮಾಡಿದ ಫಾರ್ಮುಗಳನ್ನೂ ಹಣವನ್ನೂ ಸಂಜೆ ಏಳು ಗಂಟೆಯ ಹೊತ್ತಿಗೆ ಆಫೀಸಿಗೆ ಹೋಗಿ ಒಪ್ಪಿಸಬೇಕಿತ್ತು.

ರೈಲ್ವೆ ಹಳಿಯ ಬಳಿ ಜನರ ಗುಂಪು ಮತ್ತು ಗಲಾಟೆ.

''ಯಾವುದಾದರೂ ಗಾಡಿ ಸಮಯ ತಪ್ಪಿ ಬರ್‍ತಾ ಇದೆಯೆ ?''

ಗುಂಪು ಸೇರಿ ನಿಂತವರ ನಡುವಿನಿಂದ ಒಮ್ಮೆಯಷ್ಟೆ ಇಣಿಕಿ ನೋಡಿದ. ತಲೆ ಜಜ್ಜಿಹೋಗಿ ಸುತ್ತಲೂ ರಕ್ತ ಚೆಲ್ಲಿಕೊಂಡು ಬಿದ್ದಿದ್ದ ಯಾರೋ ಒಬ್ಬ. ನೋಟವು ಹಳಿಗಳ ನಡುವಿನ ಜಲ್ಲಿಕಲ್ಲುಗಳ ಮೇಲೆ ಬಿದ್ದು ರಕ್ತದಲ್ಲಿ ಮುಳುಗಿತು.

''ಈ ರಕ್ತವನ್ನೂ ದಾಟಿಹೋಗಬೇಕಲ್ಲ?'' ಕಿವಿಯೊಳಗೆ ಬೆರಳು ಹಾಕಿ ತಿರುಗಿಸಿದ. ಹಲ್ಲುಗಳು ಒಣಗಿದ ತುಟಿಗಳನ್ನು ಕಚ್ಚಿದವು. ತ್ರಾಣ ಕಳೆದುಕೊಂಡು ಪೂರ್ತಿ ಸೊರಗಿಹೋಗುತ್ತಿದ್ದ ಕಾಲುಗಳನ್ನು ಮೀರ್‌ಸಾದ್ ಬಹಳ ಕಷ್ಟಪಟ್ಟು ವಿಕಾರವಾದ ತಾಳದೊಂದಿಗೆ ಹಳಿಗಳಾಚೆ ತಲುಪಿಸಿದ. ಮೀರ್‌ಸಾದನ ನಡೆಯುವ ಶೈಲಿಯನ್ನು ನೋಡಿ ಅಲ್ಲಿದ್ದವರೆಲ್ಲ ನಕ್ಕರು. ತಿರುಗಿನೋಡದೆ ಬೇಗ ಬೇಗ ನಡೆದು ಆಫೀಸಿನ ಬಾಗಿಲು ತಳ್ಳಿ ತೆರೆದು ಮೀರ್‌ಸಾದ್ ಒಳ ಹೊಕ್ಕ.

ಮ್ಯಾನೇಜರ್‌ಗೆ ಮುಖ ಕೊಡದೆ ಮಾರಾಟಕ್ಕಿರುವ ಪ್ಯಾಕೆಟ್ಟುಗಳನ್ನು ಎಣಿಸಿ ತೆಗೆದು ಬ್ಯಾಗಿನಲ್ಲಿಟ್ಟ. ಹೊರಗಿಳಿಯುತ್ತಿದ್ದಂತೆ ಮ್ಯಾನೇಜರ್ ''ಇವತ್ತು ಏಳು ಗಂಟೆಗೆ ಮೊದಲೇ ಬರಬೇಕು,'' ಎಂದರು.

''ಹ್ಞಂ.''

''ತಡ ಮಾಡಕೂಡದು, ಸ್ವಲ್ಪವೂ.''

ಬ್ರಿಜ್‌ನ ಮೇಲ್ಭಾಗ ತಲುಪುವಷ್ಟರಲ್ಲಿ ತಲೆನೋವು ಜೋರಾಯಿತು. ಮೀರ್‌ಸಾದ್ ಕೆಳಗೆ ರಸ್ತೆಯನ್ನು ನೋಡುತ್ತ ನಿಂತ. ಜನರ ಪ್ರವಾಹ. ಅಸಂಖ್ಯ ತಲೆಗಳು. ಎಲ್ಲರೂ ಅವಸರದಲ್ಲಿದ್ದಾರೆ. ಯಾರೂ ಯಾರನ್ನೂ ಗಮನಿಸುತ್ತಿಲ್ಲ. ಯಾರೂ ಯಾರನ್ನೂ ಸ್ಪರ್ಶಿಸುತ್ತಿಲ್ಲ. ಯಾರೂ ಯಾರಿಗಾಗಿಯೂ ಕಾಯುತ್ತಿಲ್ಲ. ಉಕ್ಕಿ ಚೆಲ್ಲುವ ವೇಗ ಮಾತ್ರ. ಇಡೀ ಲೋಕವೇ ವೇಗದ ಗತಿಯಲ್ಲಿದೆ ಎಂಬುದನ್ನು ತಿಳಿಯಬೇಕಾದರೆ ಇಲ್ಲಿ ಬಂದು ನಿಂತರೆ ಸಾಕೆಂದು ತೋರುವಂತಿದೆ. ಬ್ಯಾಗನ್ನು ಕುತ್ತಿಗೆಯಿಂದ ಮೇಲೆ ಎಳೆದುಕೊಂಡು ರೈಲ್ವೆ ಸ್ಟೇಷನ್ ರೋಡಿನತ್ತ ತಿರುಗಿದ. ಸ್ಟೇಷನ್ ಕಳೆದರೆ ಬಸ್‌ಸ್ಟ್ಯಾಂಡ್. ನಂತರ ಬಾರ್. ಮುಖ್ಯವಾಗಿ ವ್ಯಾಪಾರ ನಡೆಯುವುದು ಇಂಥ ಜಾಗಗಳಲ್ಲಿ.

''ಯಾರೂ ಯಾರಿಗಾಗಿಯೂ ಕಾಯದ ಕಾಲ.'' ಒಳಗೆಲ್ಲೋ ಕಿತ್ತುಬೀಳುವ ನೋವಿನ ಭಾರದೊಂದಿಗೆ ರೈಲ್ವೆ ಸ್ಟೇಷನ್ನಿನ ಜನನಿಬಿಡತೆಯತ್ತ... ಕತ್ತಲನ್ನು ಚಪ್ಪರಿಸಿ



ಹೀರುತ್ತಿರುವ ಬೆಳದಿಂಗಳು. ಕೊನೆಯ ಬಸ್ಸಿನಲ್ಲಿ ರಸ್ತೆ ಕವಲಿಗೆ ಬಂದಿಳಿದಾಗ ಗಂಟೆ ಹತ್ತಾಗಿತ್ತು. ನಿರ್ಜನ ಓಣಿ. ಬೇಲಿ ಗಿಡಗಳ ನೆರಳು ದಾರಿಯ ಮೇಲೆ ಬಿದ್ದಿತ್ತು. ನಾಳೆ ಬೆಳಿಗ್ಗೆ ದಾಟಬೇಕಾದ ಸೇತುವೆಯ ನೆನಪು ಬಂತು. ತನಗೇನಾಗುತ್ತಿದೆಯೆಂಬ ಆತಂಕ ತಲೆಯೊಳಗೆ ಸೂಜಿಗಳಾಗಿ ಮೊಳೆತು ಬೆಳೆದವು.

''ನಾಳೆಯಾದರೂ ಬೇಗ ಹೋಗಬೇಕು. ಹಳಿಗಳ ದಾರಿಯಲ್ಲಿ ಸಾಧ್ಯವಿಲ್ಲ.''

ಹಳಿಗಳ ನೆನಪು ಬಂದದ್ದೇ ಎದೆಯೊಳಗಿನ ಸಂಕಟ ಶ್ವಾಸದೊಂದಿಗೆ ಹೊರಬಿತ್ತು. ಮೀರ್‌ಸಾದ್ ಅಹಮ್ಮದ್ ಥಕ್ಕನೆ ನಿಂತ. ಕಾಲುಗಳು ಹಂದಾಡುತ್ತಿಲ್ಲ. ತನಗೆ ಎದುರಾಗಿ ಉದ್ದಕ್ಕೆ ಮಲಗಿದ ಹಳಿಗಳು ನಡು ನಡುವೆ ಒಂಥರಾ ಶಬ್ದದೊಂದಿಗೆ ಕಂಪಿಸುತ್ತಿವೆ. ಹಳಿಗಳ ನಡುವಣ ಕಲ್ಲುಗಳು ಎರಡೂ ಬದಿಗಳಿಗೆ ಹಾರಿಬೀಳುತ್ತಿವೆ.

''ಇಲ್ಲೂ ಹಳಿಗಳು... ಹಳಿಗಳು...'' ಒಳಗೂ ಹೊರಗೂ ಗುಡ್ಡೆ ಕೂಡುತ್ತಿದ್ದ ನಡುಕವನ್ನು ಒತ್ತಿ ತಡೆಹಿಡಿಯಲೆತ್ನಿಸುತ್ತಿದ್ದಂತೆ ಬೆಚ್ಚಗಿನ ನಗುವಿನೊಂದಿಗೆ ಮುಂದೆ ಬಂದು ನಿಂತಿದ್ದ ಜಾವೇದ್ ಆಲಿ ಜೊತೆಗೆ ತೀರ ಅಪರಿಚಿತರಾದ ನಾಲ್ಕು ಮಂದಿ.

''ಹೇಗೆ... ನಾನು ಹೇಗೆ ಇವನನ್ನೊಮ್ಮೆ ದಾಟಿ ಹೋಗಲಿ ?''

''ಏನೋ ಮೀರ್‌ಸಾದ್, ಟೌನಿನಿಂದ ಬರ್ತಿದೀಯಾ ?''

''ಹ್ಞೂಂ.''



''ಅದ್ಯಾಕೆ ಇತ್ತೀಚೆಗೆ ಮಸೀದಿಗೆ ಬರ್‍ತಾ ಇಲ್ಲ ?''

''ಕೆಲಸ ಮುಗಿಸಿ ಬರುವಾಗ ಸಿಕ್ಕಾಪಟ್ಟೆ ಲೇಟಾಗಿರತ್ತೆ.''

''ನೀನು ಧರ್ಮದ ಬಗ್ಗೆ ಏನೋ ಕವಿತೆ ಬರೀತಾ ಇದ್ದೀ ಅಂತ ಕೇಳಿದೆನಲ್ಲ ?''

ಜಾವೇದ್ ಬಹಳ ಹಗುರ ಧ್ವನಿಯಲ್ಲಿ ಕೇಳಿದ್ದನಾದರೂ ಅದರ ಹಿಂದಿದ್ದ ಬೆಂಕಿಯ ಕಿಡಿ ಮೀರ್‌ಸಾದ್‌ನ ಕಣ್ಣಿಗೆ ಬೀಳದಿರಲಿಲ್ಲ.

''ಅದು ಬರೀ ಒಂದು ಕವಿತೆ ಮಾತ್ರ.''

''ಲೋ ಮೀರ್‌ಸಾದ್, ಜನ ನಿನ್ನ ಬಗ್ಗೆ ಬಹಳ ಕೆಟ್ಟದ್ದಾಗಿ ಮಾತನಾಡುತ್ತಾರೆ. ಅದು ಬದಲಾಗಬೇಕು. ನಮ್ಮನ್ನೆಲ್ಲ ಬೇರೆ ನಿಲ್ಲಿಸೋದು ಯಾಕೆ ? ನಮ್ಮ ಸ್ವಂತ ರಕ್ಷಣೆಗೋಸ್ಕರವಾದರೂ ನಾವು ಕೆಲವು ವಿಚಾರಗಳನ್ನು ಅರ್ಥಮಾಡ್ಕೋಬೇಕು.''

''ನಾನು ಬರೋದಿಲ್ಲ ಜಾವೇದ್'' ಮೀರ್‌ಸಾದ್ ಥಕ್ಕನೆ ನುಡಿದ.

''ಬಂದರೇನಾಗತ್ತೆ ? ನೀನು ಬರಬೇಕು'' ಆಜ್ಞೆಯ ಘನತೆಯೊಂದಿಗೆ ಜಾವೇದ್‌ನ ಕೈ ಮೀರ್‌ಸಾದ್‌ನ ತೋಳಿನ ಮೇಲೆ ಬಿತ್ತು. ಅವರು ಓಣಿಯಿಂದ ಬಂದು ರಸ್ತೆ ಸೇರಿದರು. ಮರಗಳ ನಡುವೆಯಿದ್ದ ರಸ್ತೆ ನಿರ್ಜನವಾಗಿತ್ತು. ಮಂಜು ಬಿದ್ದು ಒದ್ದೆಯಾಗಿದ್ದ ಎಲೆಗಳ ಮೇಲೆ ಗಾಳಿ ಬಲವಾಗಿ ಬೀಸಿತು.

''ನೀನು ಯೋಚಿಸುವ ರೀತಿಯೇ ಸರಿಯಿಲ್ಲ ಕಣೋ. ಧರ್ಮಗಳೆಂದರೆ ಸಿಡಿಮದ್ದಿನ ಕಾರ್ಖಾನೆಗಳೆನ್ನುವ ಕವಿತೆಗಳನ್ನು ಇನ್ನುಮೇಲೆ ಬರೀಬೇಡ. ನಾನು ಹೇಳಿಲ್ಲಾಂತ ಬೇಡ.''

''ಯಾಕೋ ಜಾವೇದ್ ಇಷ್ಟೊಂದು ಆತಂಕ ನಿನಗೆ ? ಸಾವಿರಕ್ಕೂ ಮಿಕ್ಕಿ ವರ್ಷಗಳಿಂದ ಬದುಕಿ ಬಂದ ಧರ್ಮವಾದರೂ ಅದನ್ನು ನಂಬಿರುವವರಿಗೆ ಇಷ್ಟೊಂದು ಭಯ ಯಾಕೆ ? ಯಾರಾದರೂ ವಿಮರ್ಶೆ ಮಾಡಿ ಮಾತನಾಡಿದರೆ ದೂರ ಇಡ್ತೀರಾ. ಇಲ್ಲದಿದ್ದರೆ ಕೊಂದುಬಿಡ್ತೀರಾ. ಇದೆಂಥ ನೀತಿ ?''

''ಇಡೀ ಲೋಕವೇ ನಮ್ಮ ವಿರುದ್ಧವಾಗಿದೆ. ನಿನ್ನಂಥವರು ಮಾತ್ರ ಅದು ಗೊತ್ತಿಲ್ಲದಂತೆ ನಟಿಸುವುದು !'' ಜಾವೇದ್‌ನ ಧ್ವನಿಯ ಮೊನಚು ಹೆಚ್ಚಾಯಿತು. ಜೊತೆಯಲ್ಲಿದ್ದ ಒಬ್ಬ ಸೊಂಟದಿಂದ ಏನನ್ನೋ ಹೊರತೆಗೆದ.

''ಜಾವೇದ್, ನಾವು ಯಾರು ? ಒಬ್ಬ ವಿಶ್ವಾಸಿಯೂ ತೀವ್ರವಾದಿಯಾಗಿಲ್ಲ. ಇದನ್ನೆಲ್ಲ ಹುಟ್ಟಿಸಿಬಿಡೋದು ಬೇರೆ ಯಾರೋ, ಅಷ್ಟೆ. ಅಧಿಕಾರ-ಐಶ್ವರ್ಯಗಳಿಗಾಗಿ ನಡೆಸುವ ಸ್ಪರ್ಧೆ ಇದು. ಇದರಲ್ಲಿ ನೀನು ಹೇಳುವ ರಕ್ಷಣೆ ಏನೂ ಇಲ್ಲ, ಜಾವೇದ್, ಮೊದಲು ಅವರೇನೆಂದು ಅರ್ಥ ಮಾಡ್ಕೋ.'' ಜಾವೇದ್‌ನ ಜತೆಗಿದ್ದವರು ಮೀರ್‌ಸಾದ್‌ನ ಸುತ್ತಲೂ ನಿಂತರು. ಕತ್ತಲಲ್ಲಿ ಅವರ ಮುಖಗಳು ಅಸ್ಪಷ್ಟವಾದುವು. ಕಾಲುಗಳು ಸೂತ್ರ ತಪ್ಪಿ ಮುನ್ನುಗ್ಗುತ್ತಿದ್ದುದನ್ನು ಗಮನಿಸುತ್ತ ನಿಂತಿದ್ದ ಮೀರ್‌ಸಾದ್‌ನ ಕಾಲರ್ ಗಟ್ಟಿಯಾಗಿ ಹಿಡಿದ ಜಾವೇದ್.

''ಏಯ್ ಮೀರ್‌ಸಾದ್, ನೀನು ಅಸಂಬದ್ಧವಾಗಿ ಮಾತನಾಡುತ್ತಿದ್ದೀಯಾ.''

''ಖಂಡಿತ ಇಲ್ಲ, ನನ್ನ ಪಾಡಿಗೆ ನನ್ನನ್ನು ಬಿಟ್ಟು ಬಿಡು.'' ಥಕ್ಕನೆ ಒಬ್ಬ ಮೀರ್‌ಸಾದ್‌ನ ಕತ್ತಿನ ಕೆಳಗೆ ಅಮುಕಿ ಹಿಡಿದ.

''ಕೂಳಿಗೆ ಗತಿಯಿಲ್ಲ, ಆದ್ರೂ ಅವನ ನಾಲಿಗೆ...''

''ಹುಟ್ಟಿಲ್ಲಾನ್ಸಿಬಿಡ್ತೀವಿ ಹಂದಿ...'' ಅವರ ಸ್ವರದಲ್ಲಿ ರಕ್ತದ ವಾಸನೆ.

''ಈಗ ನಿನ್ನನ್ನು ಸುಮ್ನೆ ಬಿಡ್ತೀವಿ. ಹೋಗು, ಹ್ಞೂಂ !'' ಅವರು ಕತ್ತಲಲ್ಲಿ ಮರೆಯಾದರು. ಮುಂದಕ್ಕೆ ಬಾಗಿ ನಡೆಯುತ್ತ ಮೀರ್‌ಸಾದ್ ಹೇಗೋ ತನ್ನ ಮನೆಯ ದಾರಿ ಸೇರಿದ. ಮನೆಯ ಮುಂದೆ ತಲುಪಿದ ಮೀರ್‌ಸಾದ್ ದಿಗ್ಭ್ರಮೆಗೊಂಡು ನಿಂತ. ಸುತ್ತಲೂ ತಂತಿಬೇಲಿ ಹಾಕಿದ್ದಾರೆ. ದಾರಿಯಿಲ್ಲ.

''ಮನೆಯೊಳಗೆ ಹೇಗೆ ಹೋಗಲಿ ?'' ಆತ ಅಸಹನೆಯಿಂದ ಬೇಲಿ ಹಿಡಿದು ಕುಲುಕಿಸಿದ.

''ಬೇಡ ಮಗಾ, ಬೇಡ...'' ಉಮ್ಮ ಅಳುತ್ತ ಓಡಿ ಬಂದು ತಡೆದಳು.

''ಹೀಗೆ ಮಾಡಿದ್ದು ಯಾರು, ಉಮ್ಮ ?''

''ಹಾಜಿಯೋರು. ಮತ್ತಿನ್ಯಾರು ?'' ಸುತ್ತ ನೋಡಿದ. ಒಟ್ಟು ಇದ್ದ ಹತ್ತು ಸೆಂಟ್ಸ್ ಜಾಗದಲ್ಲಿ ಸಾಲದಲ್ಲಿ ಮುಳುಗಿಸಿ ಮಾಡಿದ ಮನೆ ತಂತಿಬೇಲಿಯ ಒಳಗಿದೆ. ಮನೆಯನ್ನು ಜಾಗದ ಒಂದು ಮೂಲೆಗೆ ತಳ್ಳಿಬಿಟ್ಟಿದ್ದಾರೆ. ಸ್ವಂತ ಮನೆಗಿರುವ ದಾರಿ ಈಗ ಅನ್ಯವಾಗಿದೆ.

''ಮಗಾ, ನೀನಾಗಿ ಯಾವುದಕ್ಕೂ ಹೋಗಬೇಡ. ಪಟ್ಟೆಯಲ್ಲಿರೋ ದಾರಿ ಅವರ ಕ್ವಾರ್ಟರ್ಸಿನ ಹಿಂದಿನಿಂದ ತಾನೆ ? ಆದ್ದರಿಂದ ಅವರು ಹೀಗೆ ಬೇಲಿ ಹಾಕಿದರು.''

''ಆದರೂ ಹೋಗಲಿಕ್ಕಿರೋ ದಾರೀನ ಹೀಗೆ ಮುಚ್ಚಿಬಿಟ್ಟರಲ್ಲ ?'' ತಿರುಗಿ, ರೋಡಿನ ಆಚೆಗಿದ್ದ ಹಾಜಿಯವರ ಕ್ವಾರ್ಟರ್ಸುಗಳ ಕೊಳಚೆ ನೀರು ಹರಿಯುವ

ಚರಂಡಿಯ ದಂಡೆ ಮೇಲೆ ನಡೆದು ಆತ ಮನೆ ಸೇರಿದ.

''ಈ ಚರಂಡಿ ನಾತ ಸಹಿಸ್ಕೊಂಡು ಇನ್ನು ಈ ಮನೇಗೆ ಯಾರಾದ್ರೂ ಬರ್ತಾರಾ, ಅಯ್ಯೋ ದೇವ್ರೇ. ನನ್ನನ್ನೂ ನನ್ನ ಮಕ್ಕಳನ್ನೂ ಹಾಜಿಯೋರು ಮನುಶ್ರೂ ಅಂತ ಕಾಣಲಿಲ್ಲವಲ್ಲ, ಮಗಾ, ಮಸೀದಿ ಕಮಿಟಿ ಹತ್ರ ಹೋಗಿ ಹೇಳಿದ್ರೆ ಹ್ಯಾಗೆ ?''

''ಉಮ್ಮಾ, ನಿನಗೆ ಗೊತ್ತಿಲ್ಲ, ಕಮಿಟಿ ಪ್ರೆಸಿಡೆಂಟ್ ಹಾಜಿಯೋರೇ ಅಲ್ಲವೆ ?''

''ಓ, ಹಾಗಾದ್ರೆ ಯಾರನ್ನೂ ದ್ವೇಷಿಸದೆ ಇರಬೇಕಲ್ಲ ?''... ಉಮ್ಮ ಅತ್ತಳು.

ಮೀರ್‌ಸಾದ್ ಕೋಣೆಯ ಬಾಗಿಲು ಮುಚ್ಚಿ ಅಗುಳಿ ಹಾಕಿದ. ಕೂದಲನ್ನು ಮುಷ್ಟಿಯೊಳಗೆ ಬಿಗಿಹಿಡಿದು ಮಂಚದ ಮೇಲೆ ಬಿದ್ದ.

''ಮೀರ್‌ಸಾದ್, ಇದು ನಾನು,'' ಅಲ್ಲಿದ್ದ ಅಸಂಖ್ಯ ಮಂದಿಯನ್ನು ಒಳಗೆ ತುರುಕಿಕೊಂಡು ರೈಲುಗಾಡಿ ಮೀರ್‌ಸಾದ್‌ನ ಮುಂದಿನಿಂದ ಮಿಂಚಿನ ವೇಗದಲ್ಲಿ ಮುಂದೋಡುತ್ತಿದೆ. ಅದರೊಳಗಿಂದಲೂ ಜಾವೇದ್ ಆಲಿಯ ಅರ್ಭಟ ಕೇಳಿಸಿತು. ಎಷ್ಟು ಬೋಗಿಗಳನ್ನು ದಾಟಿದರೂ ಮುಗಿಯದ ರೈಲುಗಾಡಿ. ಬೋಗಿಗಳ ಬಾಗಿಲು ತೆರೆದು ಒಂದು ಜನರ ಗುಂಪು ಮೀರ್‌ಸಾದ್‌ನನ್ನು ಸುತ್ತುವರಿದು ನಿಂತಿತು.

''ಏಯ್, ಬಾರೋ. ಏಳೋ ಮೇಲೆ...'' ಅವರು ಒಕ್ಕೊರಲಿನಲ್ಲಿ ಅಬ್ಬರಿಸಿದರು.

''ಬಿಡ್ರೋ... ಬಿಡಿ ನನ್ನನ್ನು...'' ರೈಲಿನ ಬೋಗಿಗಳು ಕುಲುಕಾಡಿದವು. ಹೂಗೆ... ಎಲ್ಲಾಕಡೆ ಹೊಗೆ.

''ಬಿಡಿ ನನ್ನನ್ನು''... ಅಳುತ್ತ ಮೀರ್‌ಸಾದ್ ನಡುಗಿ ಎದ್ದ.

ಅಷ್ಟರಲ್ಲಿ ಕೋಳಿ ಕೂಗುವುದು ಕೇಳಿಸಿತು.

ಇವತ್ತೂ ಮೀರ್‌ಸಾದ್ ಅಹಮ್ಮದ್ ಹೊರಡುವುದು ತಡವಾಯಿತು.

ಉರಿ ಬಿಸಿಲು. ಸಿಗ್ನಲ್ ಸಿಗದೆ ನಿಂತ ಗಾಡಿ.

ತಲುಪಬೇಕಾದಲ್ಲಿಗೆ ತಲುಪಲಾರದೆ ನಿಂತ ಜನರು. ಆತ ಬಹಳ ನಿಧಾನವಾಗಿ ತನ್ನ ಕಾಲುಗಳತ್ತ ದೃಷ್ಟಿ ಹಾಯಿಸಿದ. ''ನನ್ನ ಕಾಲುಗಳು ಕ್ಷೀಣಿಸುತ್ತಿವೆಯೆ ? ಹಳಿಗಳನ್ನು ದಾಟಿ ದಾಟಿ ಹೀಗಾಯಿತೆ ?''

ಗಾಡಿ ಚಲಿಸತೊಡಗಿತು. ಶಾಲೆಯ ಮಕ್ಕಳೂ, ದೊಡ್ಡವರೂ, ಗರ್ಭಿಣಿಯರೂ ಎಲ್ಲರೂ ಹಳಿ ದಾಟಿ ಹೋದರು. ಮೀರ್‌ಸಾದ್‌ನಿಂದ ಮಾತ್ರ ದಾಟಲಾಗಲಿಲ್ಲ.

''ಇಲ್ಲಿ ನಾನು ಬಿದ್ದುಬಿಟ್ಟರೆ ?'' ಕಬ್ಬಿಣದ ಚಕ್ರಗಳು ಉರುಳುರುಳಿ ನಯವಾಗಿ ಬಿಟ್ಟಿದ್ದ ಹಳಿಗಳಲ್ಲಿ ನಿಗೂಢವಾದ ಏನೋ ಆಕರ್ಷಣೆಯಿದೆಯೆಂದು ಅನ್ನಿಸಿತು.

''ನನಗೇನಾಗುತ್ತಿದೆ ? ಹುಚ್ಚು ಹಿಡಿಯುತ್ತಿದೆಯೇ ? ನನ್ನೊಳಗೆ ಎಲ್ಲಿ ಅಡಗಿ ಕುಳಿತಿದೆ ಈ ಹುಚ್ಚು ?'' ಆಳಕ್ಕೆ ಮುಳುಗಿ ಕೈ ಹಾಕಿ ಹುಡುಕಿ ನೋಡಿದರೂ ಯಾವುದೇ ಉತ್ತರ ಸಿಗದೆ ತಿರುಗಿ ನಡೆದ.

ಬ್ರಿಜ್‌ನ ಕೆಳಗೆ ಚಿಕ್ಕದೊಂದು ಜನರ ಗುಂಪಿನ ಮುಂದೆ ನಿಂತು ವ್ಯಾಪಾರ ಶುರು ಹಚ್ಚಿದ. ''ಸ್ನೇಹಿತರೆ, ನೋಡಿ ಒಂದು ಪ್ಯಾಕೆಟ್ ಸಿಗರೇಟು ಕೊಂಡರೆ ಸುಂದರವಾದ ಒಂದು ಲೈಟರ್ ಫ್ರೀ ಸಿಗತ್ತೆ. ಇದು ಕಂಪೆನಿಯ ಜಾಹೀರಾತು. ಕೆಲವೇ ಕೆಲವು ದಿನಗಳು ಮಾತ್ರ.'' ಯಾರೂ ಲಕ್ಷಿಸದಿದ್ದುದನ್ನು ನೋಡಿ ಆ ಜಾಗ ಬಿಟ್ಟ. ಜನಸಂದಣಿಯಿದ್ದ ಎಸ್. ಎಂ. ಸ್ಟ್ರೀಟಿಗೆ ಹೋದ. ರೋಡ್ ದಾಟಲಾಗದೆ ನಿಂತಾಗ ಹಂದಾಡಲಾಗಲಿಲ್ಲ. ಉರಿಬಿಸಿಲು ತಾಗಿ ಸುಟ್ಟಂತಹ ಅಸಂಖ್ಯ ಹಳಿಗಳು ಅತಿ ವೇಗವಾಗಿ ತನ್ನತ್ತ ಓಡಿಬರುತ್ತಿರುವುದು ಕಾಣಿಸಿತು.

ಕೆಲವೆಡೆ ಒಡೆದು ಚೂರಾಗಿ ತನ್ನನ್ನು ಸುತ್ತುವರಿಯಲು ಬರುತ್ತಿದ್ದ ಹಳಿಗಳ ಮುಂದೆ ನಿಂತು ಮೀರ್‌ಸಾದ್ ಗಟ್ಟಿಯಾಗಿ ಕೂಗಿದ :

''ಉಮ್ಮಾ...'' ಸ್ವರ ಹೊರಡಲಿಲ್ಲ. ತೋಳ ಮೇಲೆ ಬಿದ್ದ ಕೈಯನ್ನು ಕಿತ್ತೆಸೆಯಲೂ ಆಗಲಿಲ್ಲ.

''ಏನೋ ಅದು, ಮಿಕಿ ಮಿಕಿ ನೋಡ್ತಾ ಇದ್ದೀ ?'' ಎಲ್ಲ ಹಲ್ಲುಗಳನ್ನು ಪ್ರದರ್ಶಿಸುತ್ತ ನಿಂತಿದ್ದಾನೆ ಕ್ಲೀಟ್ಸ್. ಗತಿಯಿಲ್ಲದ ಯಾವುದಾದರೊಂದು ಚೈನ್ ಮಾರ್ಕೆಟಿಂಗ್ ಕಂಪೆನಿಯ ಸಂಕೋಲೆಯೊಳಗೆ ಕಟ್ಟಬೇಕು ಇವನ ನಗೆಯನ್ನು. ''ಈ ಕ್ಲೀಟ್ಸ್‌ನನ್ನು ದಾಟಿಹೋಗುವುದು ಹೇಗೆ ?'' ಬದುಕಿನ ಒಂದೊಂದು ಕ್ಷಣವೂ ಒಬ್ಬೊಬ್ಬರನ್ನೇ ದಾಟಿಹೋಗಲು ಪ್ರಯತ್ನಿಸುವುದರಲ್ಲೇ ಕೊನೆಗಾಣಬೇಕೆಂಬ ಸತ್ಯವು ಮೀರ್‌ಸಾದ್‌ನನ್ನು ಘಾಸಿಗೊಳಿಸಿತು. ಫಕ್ಕನೆ ಅವರ ಮಧ್ಯದಿಂದ ಜೋರಾಗಿ ಕೂಗುತ್ತ ಒಂದು ಜನರ ಗುಂಪು ಓಡುತ್ತಿದೆ. ಅವರ ಹಿಂದಿನಿಂದ ಕತ್ತಿ-ಕುಡುಗೋಲುಗಳೊಂದಿಗೆ ಒಂದಷ್ಟು ಮಂದಿ.

''ಕಡೀರಿ, ಬಡೀರಿ, ಬಿಡಬೇಡಿ ಅವರನ್ನು...'' ಉದ್ದದ ಕತ್ತಿಗಳನ್ನು ಮೇಲೆತ್ತಿಕೊಂಡು ಓಡುತ್ತಿದ್ದವರಲ್ಲಿ ಅಜಯನನ್ನು ಕಂಡು ಮೀರ್‌ಸಾದ್ ತನ್ನೆಲ್ಲ ನಿಯಂತ್ರಣವನ್ನೂ ಕಳೆದುಕೊಂಡ. ಅಜಯನ ಹಿಂದೆ ಓಡಿದ.

''ನೀನಲ್ಲವೇ... ನಿನ್ನೆ ನನ್ನ ಹತ್ತಿರ ಹೇಳಿದ್ದು ? ರಕ್ತದ ಅಗತ್ಯ ಬಂದಾಗ ಸ್ವಂತ ಜಾತಿಯಿಂದಲೇ ಬೇಕಾಗಿಬರುತ್ತದೆ ಅಂತ ಡಾಕ್ಟರ್‌ಗಳು ಹೇಳುವ ಕಾಲದ ಬಗ್ಗೆ...? ಅಜಯಾ... ಬಲಿಯನ್ನು ಬಿಟ್ಟು ಬಲಿಯನ್ನು ಹಿಡಿಯುವ ವರನ್ನು ಇಲ್ಲವಾಗಿಸಬೇಕು ಅಂದ ನೀನೂ ಜಾವೇದ್‌ನ ಹಾಗೆ...'' ಓಡುವುದರ ಮಧ್ಯೆ ಮೀರ್‌ಸಾದ್ ಎಡವಿಬಿದ್ದ.

''ಅಜಯಾ ನಿಲ್ಲು...''

ಏನೇನೋ ಬೀಳುವ ಶಬ್ದ. ಓಡುತ್ತಿದ್ದಂತೆ ಪೂರ್ತಿಯಾಗಿ ಸುಟ್ಟುಹೋದ ವಾಹನವೊಂದಕ್ಕೆ ಢಿಕ್ಕಿ ಹೊಡೆದ. ಯಾರೋ ಮೀರ್‌ಸಾದ್‌ನನ್ನು ರೆಸ್ಟೋರೆಂಟಿಗೆ ಎಳೆದು ಕೊಂಡು ಹೋದರು. ಷಟ್ಟರ್



## ಗಂಗಾಪಾನ ಬೆವರಿನ ಸ್ನಾನ

ನಾವು ಹೊಲದಲಿ ದುಡಿಯುವ ರೈತರಿಗೆ
ಬಿಸಿಲಾದರೇನು
ಮಳೆಯಾದರೇನು
ಚಳಿಯಾದರೇನು
ಕಾಲ ಯಾವುದಾದರೇನು
ಕಷ್ಟವೊ ಸುಖವೊ
ಲೆಕ್ಕಿಸೆವು ನಾವು
ಗಂಗಾಪಾನ
ಬೆವರಿನ ಸ್ನಾನ
ನಿರಂತರ

ನಾವು ಮಣ್ಣಲಿ ದುಡಿಯುವ ಮಕ್ಕಳಿಗೆ
ತುಸು ನಷ್ಟವಾದರೇನು
ತುಸು ಲಾಭವಾದರೇನು
ಒಸಿ ಕಹಿಯಾದರೇನು
ಒಸಿ ಸಿಹಿಯಾದರೇನು
ರಾಗಿ ಮುದ್ದೆ ಉಪ್ಪಾಗಡ್ಡೆ
ಊಟಣ ಕೊನೆ ತನಕ
ಗಂಗಾ ಪಾನ
ಬೆವರಿನ ಸ್ನಾನ
ನಿರಂತರ

ನಾವು ಬೇಸಾಯದ ಕಾಯಕ ಹೊತ್ತ ಕೃಷಿಕರಿಗೆ
ಸ್ವಲ್ಪ ಬೇಸರ ತಂದರೇನು
ಸ್ವಲ್ಪ ಸಂತಸ ತಂದರೇನು
ಜಾಡ್ಯಕೆ ಬಿಡುವಿಲ್ಲ
ಹೊಲವೇ ಆಸ್ಪತ್ರೆ
ಆಗಸವೇ ಸೂರು
ಸೂರ್ಯನೇ ವೈದ್ಯ
ಗಂಗಾಪಾನ
ಬೆವರಿನ ಸ್ನಾನ
ನಿರಂತರ.

ಟಿ. ರಾಧಾಕೃಷ್ಣ ಭಟ್
ನಂ. ೪-೪-೯೨, 'ಹಯಗ್ರೀವ',
ಭಗತ್‌ಸಿಂಗ್ ರಸ್ತೆ, ಕಿನ್ನಿ ಮೂಲ್ಕಿ
ಉಡುಪಿ - ೫೭೬ ೧೦೧

ಕೆಳಗೆಳೆದರು. ಅದರೊಳಗೆ ನಾಲ್ಕೈದು ಮಂದಿ ಇದ್ದರು. ಷಟ್ಟರ್ ಮೇಲೆ ಭಾರವಾದುದೇನೋ ಬಂದು ಹೊಡೆಯಿತು. ಅದು ಭಯಂಕರ ಸದ್ದು ಮಾಡುತ್ತ ಅಲುಗಾಡಿತು.

''ಅಯ್ಯೋ!'' ಅಂಗಡಿಯ ಒಡೆಯನಿಗೆ ಗಾಬರಿ. ಕರೆಂಟು ಹೋಯಿತು. ಹೊರಗೆ ಗಲಾಟೆ. ಚೀರಾಟ-ಬೊಬ್ಬೆ.

''ಹದಿನೈದು ಉರುಳಿಸಿದ್ರು. ಮತ್ತೆ ಅವರು ಸುಮ್ಮನೆ ನಿಂತಾರಾ ?''

''ಎಲ್ಲಿ?'' ಭಯದಿಂದ ಬಿಳಿಚಿಹೋದ ಮುದುಕ ಕೇಳಿದ.

''ಬೀದಿಯಲ್ಲಿ. ಮುಸ್ಲಿಮರು ಕೊಂದದ್ದು.'' ಮೀರ್‌ಸಾದ್‌ನ ಎದೆಬಡಿತ ಜೋರಾಯಿತು. ಬೆಳಕಿಲ್ಲದ, ಉಸಿರುಗಟ್ಟಿಸುವಂತಿರುವ ಕೋಣೆಯಲ್ಲಿ ಆ ಸಣ್ಣ ಗುಂಪು ಮುದುರಿ ನಿಂತಿತು. ಅವರಲ್ಲೊಬ್ಬ ಮೀರ್‌ಸಾದ್‌ನ ಹತ್ತಿರಕ್ಕೆ ಕತ್ತು ಚಾಚಿದ :

''ನೀವು ಮುಸ್ಲಿಮ್ ಅಲ್ಲವೇ ?'' ಸಿಡಿಮದ್ದಿನ ವಾಸನೆ ತುಂಬಿದ ಪ್ರಶ್ನೆ. ಮೀರ್‌ಸಾದ್ ಮಿಸುಕಾಡದೆ ನಿಂತ. ಮೇಜಿನ ಮೇಲಿದ್ದ ಭರಣಿಯನ್ನು ಯಾರೋ ದೂಡಿಹಾಕಿದರು. ಗುಂಪಿನಲ್ಲಿದ್ದ ಯಾರೋ ಬೆಂಕಿಕಡ್ಡಿ ಗೀರಿದರು. ಸಿಗರೇಟಿನ ಹೊಗೆ ಹಬ್ಬಿತು.

''ಹೆಸರು... ಹೆಸರೇನಂತ ಹೇಳೋ ಮಗನೇ ?''

ಅವರು ಒಟ್ಟಾಗಿ ಮೀರ್‌ಸಾದ್‌ನ ಹತ್ತಿರ ಬಂದು ನಿಂತರು. ಸ್ವಲ್ಪಹೊತ್ತು ಮೌನವು ಭಯದ ಅಡಿಗಲ್ಲುಗಳನ್ನು ಕೋಣೆಯಲ್ಲಿ ನೆಟ್ಟಿತು. ಒಮ್ಮೆ ಕೂಗುವ ಶಕ್ತಿಯನ್ನೂ ಮೌನವು ಮುಚ್ಚಿಹಾಕಿತು. ಮೀರ್‌ಸಾದ್‌ನ ಕಣ್ಣುಗಳು ಆ ಕತ್ತಲೆಯಲ್ಲಿ ಸೀಡಿನ ಉಂಡೆಗಳಾದವು.

''ಕೇಳಿದ್ದು ಗೊತ್ತಾಗಲಿಲ್ವ ? ಹೆಸರು ಹೇಳೋ, ಏಯ್ !'' ಒಬ್ಬ ಕೈಯನ್ನು ಬಲವಾಗಿ ಮೇಜಿನ ಮೇಲೆ ಕುಟ್ಟಿದ. ಮಾಂಸ ಒಮ್ಮೆ ಪೂರ್ತಿಯಾಗಿ ಬಿಸಿ ಬೆವರಿನೊಂದಿಗೆ ಕಿತ್ತುಹೋಗುತ್ತಿದೆಯೇನೋ ಅನ್ನಿಸಿದ ಮೀರ್‌ಸಾದ್ ಅವರೆದುರಿಗೆ ತಿರುಗಿ ನಿಂತ.

''ಏಯ್, ಹೇಳೋ...'' ಒಟ್ಟಾಗಿ ಸೇರಿದ ಎಲ್ಲರ ಅಟ್ಟಹಾಸ. ಕುರ್ಚಿಗಳು ದಡಬಡ ಕವುಚಿ ಬೀಳುತ್ತಿವೆ... ನಂತರ ಮೌನ...

''ಆ ಹುಡುಗನಿಗೆ ಯಾಕೆ ತೊಂದರೆ ಕೊಡ್ತೀರಿ ? ಅವನಲ್ಲವಲ್ಲ ಇದೆಲ್ಲ ಮಾಡಿದ್ದು?'' ಮುದುಕ ಎದ್ದು ಬಂದ. ಆಮೇಲೆ ಯಾರೂ ಏನೂ ಕೇಳಲಿಲ್ಲ.

''ಗಂಟೆ ಎಷ್ಟಾಯ್ತು?'' ಮುದುಕ ಕೇಳಿದ.

''ಒಂಬತ್ತು ಕಳೀತು.''

''ಹೋಗೋಣವಾ ?''

ಷಟ್ಟರ್ ಮೆಲ್ಲನೆ ಎತ್ತಿದರು. ರಸ್ತೆಗಿಳಿದರು. ಆಕಾಶ-ಭೂಮಿಗಳು ಒಂದೇ ರೀತಿ ಕಪ್ಪಾಗಿ ಮಲಗಿವೆ. ಎಲ್ಲರೂ ಅನುಮಾನಿಸುತ್ತ ಒಮ್ಮೆ ಅಡಗಿ ನಿಂತರು.

ಮುರಿದು ಬಿದ್ದಿದ್ದ ಅಂಗಡಿಗಳು.

ವಾಹನಗಳು.

ಒಂದೇ ಒಂದು ಬೀದಿ ದೀಪ ಉರಿಯುತ್ತಿಲ್ಲ.

ಟಯರುಗಳು ಉರಿಯುತ್ತಿರುವ ಶಬ್ದ.

ಓವರ್‌ಬ್ರಿಜ್ ದಾಟಿಯಾದ ನಂತರ ರಸ್ತೆಯ ಎರಡೂ ಭಾಗಗಳಲ್ಲಿ ಜನರ ಚಿಕ್ಕ ಚಿಕ್ಕ ಗುಂಪುಗಳು. ಅವರ ಮಾತುಗಳು ಸ್ಪಷ್ಟವಾಗುತ್ತಿಲ್ಲ. ಇನ್ನಷ್ಟು ಹತ್ತಿರದಿಂದ ಕಿವಿಗೊಟ್ಟು ಆಲಿಸಿದ.

''ಅವರು ನನ್ನನ್ನು ಕದ್ದು ನೋಡುತ್ತಿದ್ದಾರೆಯೆ ? ನನ್ನ ಬಗ್ಗೆ ಏನಾದರೂ ಮಾತನಾಡುತ್ತಿದ್ದಾರೆಯೆ ?'' ಎಷ್ಟು ಒದ್ದಾಡಿದರೂ ಕಾಲುಗಳು ವೇಗ ಪಡೆಯುತ್ತಿಲ್ಲ. ಟ್ರಾಫಿಕ್ ಜಂಕ್ಷನ್ ತಲುಪುತ್ತಿದ್ದಂತೆ ಜನರ ಗುಂಪು ದೊಡ್ಡದಾಯಿತು.

''ಇವರು ನನ್ನನ್ನು ಹಿಡಿದುಹಾಕುತ್ತಾರೆಯೆ ? ಯಾರಾದರೊಬ್ಬ ನನ್ನ ಮೇಲೆ ಹಾರಿಬಿದ್ದಾನೇ ? ಹೆಸರು ಬದಲಾಯಿಸಿ ಹೇಳಲೇ ? ...ನಾಳೆಯೂ ಇದೇ ಬೀದಿಯಲ್ಲಿ...?'' ಭಯದ ಒತ್ತಡದಿಂದ ಉಂಟಾದ ನೋವು. ಪರಿಚಿತವಾದ ಸ್ಥಳಗಳೆಲ್ಲವೂ ಫಕ್ಕನೆ ಅಜ್ಞಾತವಾಗಿ ಬದಲಾದಂತೆ... ತಾನೂ ಒಂದು ಬಲಿಪಶುವಾಗಿಬಿಟ್ಟಿದ್ದೇನೆಂಬ ವೇದನೆಯಲ್ಲಿ ಮೀರ್‌ಸಾದ್ ಕಾಲು ನೀಡಿ ಕುಳಿತ.

''ಯಾರನ್ನೂ ಯಾವುದನ್ನೂ ದ್ವೇಷಿಸದ ನನಗೆ ಈ ಬೀದಿಯಲ್ಲಿ ಭಯವಿಲ್ಲದೆ ನಡೆಯುವ ಕಾಲ ಬಂದೀತೇ ?''

ಬೀದಿಯ ನಿರ್ಜನ ಸ್ಥಳಕ್ಕೆ ಆತ ಬಂದ. ತಲೆಯೊಳಗೆ ಅಪರಿಚಿತ ಶಬ್ದಗಳು. ನೋಡುತ್ತಿರುವುದರಲ್ಲೆಲ್ಲ ಒಂದೇ ರೂಪ ಸಾದೃಶ್ಯ. ತಲೆ ತಿರುಗಿತು. ಮನಸ್ಸು ತುಂಬ ಪರಚಿದ ಗಾಯ. ಅಷ್ಟರಲ್ಲಿ ಅಪಾರವಾದ ಧೈರ್ಯದಿಂದ ಮರಣದೊಂದಿಗೆ ತಣಿದು ತಣಿದು ಜೀವನದೊಂದಿಗೆ ಬೆಂದು ಬೆಂದು ಮೀರ್‌ಸಾದ್ ರೈಲು ಹಳಿಗಳತ್ತ ನಡೆದ. ಎಷ್ಟೋ ಬಾರಿ ದಾಟಲಾಗದೆ ತಿರುಗಿ ನಡೆದ ಹಳಿಗಳ ಮುಂದೆ ಯಾವುದೇ ಏದುಬ್ಬಸವಿಲ್ಲದೆ ಹೋಗಿ ನಿಂತ. ದೂರದಲ್ಲಿ ರೈಲು ಬರುತ್ತಿರುವುದನ್ನು ನೋಡಿದ. ಗಟ್ಟಿಯಾಗಿ ಕೂಗಿ ಹೇಳಿದ.

''ಅದೋ ನೋಡಿ ಗಾಡಿ ಬರುತ್ತಿದೆ. ಒಂದೊಂದು ಬೋಗಿಯಲ್ಲೂ ಪುರೋಹಿತರೂ ಅವರ ಪೈಶಾಚಿಕ ಸಂತಾನಗಳೂ ಇವೆ. ಯಾವುದೇ ಕ್ಷಣದಲ್ಲೂ ಯಾವ ಜಾತಿಯ ಮೃಗವಾಗಲೂ ಸಾಮರ್ಥ್ಯವಿರುವ ಮನುಷ್ಯರು. ಮಾತುಗಳಲ್ಲೇ ಪ್ರೀತಿ ತೋರಿಸುವ ಗೆಳೆಯರಿದ್ದಾರೆ. ನಾನು ಈ ಗಾಡಿಯನ್ನೂ, ಹಳಿಗಳನ್ನೂ ಒಂದೇ ವೇಗದಲ್ಲಿ ದಾಟಬೇಕು.''

ಹಳಿಗಳ ಹತ್ತಿರಕ್ಕೆ ಹೋಗಿ ನಿಂತ. ನಾಗಾಲೋಟದಲ್ಲಿ ಓಡಿ ಬರುತ್ತಿದ್ದ ಗಾಡಿಯನ್ನೂ ಹಳಿಗಳನ್ನೂ ಅಡ್ಡ ದಾಟುತ್ತಿದ್ದಂತೆ ಗಟ್ಟಿಯಾಗಿ, ಬಹಳ ಗಟ್ಟಿಯಾಗಿ ಮೀರ್‌ಸಾದ್ ಅಹಮ್ಮದ್ ಕೂಗಿ ಹೇಳಿದ :

''ಇದೋ ನೋಡಿ ನಾನು ದಾಟುತ್ತಿದ್ದೇನೆ. ಯಾರೂ ಇಲ್ಲದ ಒಬ್ಬ ಅನಾಥ ಸ್ವಯಂಶಕ್ತನಾಗದಿದ್ದರೆ ಸಾಧ್ಯವಿಲ್ಲವಲ್ಲ.''

ಅನುವಾದ : **ಪಾರ್ವತಿ ಜಿ. ಐತಾಳ್**
ಸುರಗಂಗಾ, ಬಸ್ರೂರು ಕ್ರಾಸ್ ರೋಡ್, ಕುಂದಾಪುರ - ೫೭೬ ೨೦೧, ಉಡುಪಿ ಜಿಲ್ಲೆ

# ಹೆಣಕ್ಕೆ ಇಂಜಕ್ಷನ್ ಕೊಟ್ಟು ಕೊಂದ ಪ್ರಸಂಗ !



**ಸು**ಮಾರು ೮೦ರ ದಶಕದ ಪ್ರಥಮಾರ್ಧವಿರಬೇಕು. ನಾನು ಈ ಊರಲ್ಲಿ ವೃತ್ತಿನಿರತನಾಗಿ ಮೂರ್ನಾಲ್ಕು ವರ್ಷಗಳಾಗಿರಬಹುದು. ಒಂದೆರಡು ತಿಂಗಳ ಹಿಂದಷ್ಟೇ ಈ ಊರಲ್ಲಿ ವೃತ್ತಿ ಆರಂಭಿಸಿದ್ದ ಪದವೀಧರ ವೈದ್ಯನೊಬ್ಬ ಅಪರಾತ್ರಿ ೨-೨.೩೦ರ ಸುಮಾರಿಗೆ ನಾನಿದ್ದ ಮನೆಯ ಬಾಗಿಲು ತಟ್ಟಿದ. ವೈದ್ಯರಿಗೆ ಅದರಲ್ಲೂ ಹಳ್ಳಿಯಲ್ಲಿ ವೃತ್ತಿ ನಿರತರಾದ ವೈದ್ಯರಿಗಂತೂ ಇದು ಸಾಮಾನ್ಯವಾದುದರಿಂದ ನನ್ನ ತಮ್ಮ ಗಣಪುವಿಗೆ ಬಾಗಿಲು ತೆರೆಯಲು ಹೇಳಿ, ಹಾಸಿಗೆಯಲ್ಲೇ ಎದ್ದು ಕುಳಿತು ಮೈಮುರಿದು ನೆಟಿಕೆ ತೆಗೆದು ಸುತ್ತಿದ ಲುಂಗಿಯನ್ನು ಸರಿಪಡಿಸಿಕೊಂಡೆ. ಬಂದವರು ವೈದ್ಯ ಮಿತ್ರರೆಂದಾಗ ''ಇದೇಕೆ, ಇವರು ಈ ಅವೇಳೆಯಲ್ಲಿ'' ಎಂದು ಪ್ರಶ್ನಾರ್ಥಕ ಚಿನ್ಹೆಯಲ್ಲಿ ಹುಬ್ಬು ಮೇಲೇರಿದವು. ಅವರ ಮುಖವನ್ನೆಲ್ಲ ಗಾಬರಿ ಆವರಿಸಿಕೊಂಡಿತ್ತು. ಹಣೆಯ ಮೇಲಿನ ಚಿಂತೆಯ ಗೆರೆಗಳ ಮಧ್ಯೆ ಮುತ್ತಿನ ಹನಿಗಳು ಮಿಂಚುತ್ತಿದ್ದವು. ಕೈಕಾಲುಗಳು ಥರಥರಗುಟ್ಟುತ್ತಿದ್ದುದು ಮೇಲ್ನೋಟಕ್ಕೆ ತೋರಿಬರುತ್ತಿತ್ತು.

''ಯಾಕ್ರೀ ಡಾಕ್ಟರೆ, ಏನಾಯ್ತು? ಮನ್ಯಾಗ ಎಲ್ಲಾರು ಅರಾಮ ಅದಾರಲ್ಲ'' ಎಂದು ದುಗುಡದಿಂದ ಕೇಳಿದೆ. ''ಅಂಥಾದೇನಿಲ್ರೀ. ಈಗ ಸದ್ಯ ನೀವ ನನ್ನ ದವಾಖಾನೆಕ ಬರಬೇಕು'' ಎಂದರು. ಆಗ ನಾನು ''ಆಯ್ತು ಹೋಗೋಣ ಬಿಡ್ರೀ. ಆದರ ಆದದ್ದಾದರೂ ಏನು ?'' ಎಂದಾಗ, ನಮ್ಮ ಮನೆಯ ತೆರೆದ ಮುಂಬಾಗಿಲಿನಿಂದ ಕತ್ತು ಹೊರಚಾಚಿ ಅತ್ತಿತ್ತ ದೃಷ್ಟಿ ಹಾಯಿಸಿ ಮೆಲುದನಿಯಲ್ಲಿ ''ಈಗ ಒಂದ ಪೇಷಂಟ್ ಚಕ್ಕಡ್ಯಾಗ ಹಾಕ್ಕೊಂಡ ಬಂದ್ರೀ. ಉಸಿರಾಡ್ಯಾಕ ತ್ರಾಸ ಆಗಕ್ ಹತ್ತೈತಿ. ಲಗೂಽ ಇಂಜಕ್ಷನ್ ಕೊಡ್ರಿ ಅಂತ ಗಡಬಿಡಿ ಮಾಡಾಕ ಹತ್ತಿದರು ಅಂತ ಡೆರಿಫೈಲಿನ್ ಇಂಜಕ್ಷನ್ ಕೊಟ್ಟನ್ರಿ. ಅಮ್ಯಾಲ ಅವನ ತಪಾಸಣಿ ಮಾಡಬೇಕಂದ್ರ ಅಷ್ಟರೊಳಗ ಅಂವ ಸತ್ತಿದ್ದನ್ರೀ. ಅದನ್ನ ನೋಡಿ ಅವರೆಲ್ಲ ಎಂಥಾ ಇಂಜಕ್ಷನ್ ಕೊಟ್ಟ್ಯೋ. ಅವನ ಕೊಂದಬಿಟ್ಟೆ. ಈಗ ನಾವ ಪೊಲೀಸ್ ಸ್ಟೇಷನ್‌ಗ ಹೋಗ್ತೀವು ಅಂತ ಏನೋನೋ ಹಲ್ಕಟ್ ಬೈಗಳಾ ಬೈಯಕ ಹತ್ತಿದ್ರಿ.'' ಇಷ್ಟು ಹೇಳುವಷ್ಟರಲ್ಲಿ ಅವರ ಗಂಟಲ ನರಗಳು ಉಬ್ಬಿ ಬಂದಿದ್ದವು. ನಾನು ಬಟ್ಟೆ ತೊಡುವಷ್ಟರಲ್ಲಿ ಈ ವೈದ್ಯಮಿತ್ರರು ನಾಲ್ಕಾರು ಸಲ ಕತ್ತನ್ನು ಮುಂಬಾಗಿಲಿನ ಹೊರಗೆ ಹಾಕಿ ಹಣಿಕಿ ನೋಡಿದರು. ನನಗೋ ಎಲ್ಲವೂ ವಿಚಿತ್ರವಾಗಿ ಕಾಣುತ್ತಿತ್ತು. ''ಮರಣೋನ್ಮುಖನಾದ ರೋಗಿಯ ಕೊನೆಯ ಕ್ಷಣದಲ್ಲಿ ಬದುಕಿಸುವುದು ಅಸಾಧ್ಯ. ಅದರಲ್ಲೂ ಉಸಿರುಗಟ್ಟಿದ ರೋಗಿಯಲ್ಲಿ ಡೆರಿಫೈಲಿನ್‌ದಿಂದ ಒಂದಿನಿತಾದರೂ ಪ್ರಯೋಜನವಾಗಬಲ್ಲದೇ ಹೊರತು ದುಷ್ಪರಿಣಾಮ ವಾಗದು. ಹಾಗೆ ಕೇಳಿದರೆ ಯಾವುದೇ ವ್ಯಕ್ತಿಯಲ್ಲಿ, ಎಂಥದೇ ಸಂದರ್ಭದಲ್ಲಿ ಡೆರಿಫೈಲಿನ್ ಸಾವನ್ನು ತರಲು ಸಾಧ್ಯವೇ ಇಲ್ಲ. ಆದ್ದರಿಂದ ಇಷ್ಯಾಕೆ ಗಾಬರಿ ?'' ನನ್ನ ಮನದ ಕುತೂಹಲ ತಣಿಯದಾಗಿತ್ತು.

ಬಟ್ಟೆ ಬದಲಿಸಿ ವೈದ್ಯ ಮಿತ್ರನನ್ನು ಹಿಂಬಾಲಿಸಿದೆ. ನಮ್ಮ ಮನೆಯ ಹೊಸ್ತಿಲು ದಾಟಿ ಕಟ್ಟೆಯ ಮೇಲೆ ಕಾಲಿರಿಸಿದುದೇ ತಡ ಮಬ್ಬುಗತ್ತಲೆಯಲ್ಲಿ ಕಂಬಳಿ ಹೊದ್ದ ಆಕೃತಿಯೊಂದು ಗೋಡೆಯ ಬದಿಗೆ ಸರಿದು ಮರೆಯಾಯಿತು. ನನಗದೆಲ್ಲ ಮತ್ತೆ ಅಯೋಮಯವಾಗಿ ತೋರಿತು.

ಗೆಳೆಯ ಮತ್ತು ನಾನು, ಇಬ್ಬರೂ ಆತನ ದವಾಖಾನೆ ಸೇರಿದೆವು. ದವಾಖಾನೆಯ ಎದುರಿಗೇನೇ ರಸ್ತೆಯ ಒಂದು ಬದಿಗೆ ಚಕ್ಕಡಿಯೊಂದು ನಿಂತಿದ್ದನ್ನು ಗಮನಿಸಿದೆ. ದವಾಖಾನೆಯ ಬೇಂಚ್ ಮೇಲೆ ನಾಲ್ಕು ಜನ ಕಟ್ಟುಮಸ್ತಾದ ಆಳುಗಳೂ ಕುಳಿತಿದ್ದವು. ನನಗೆ ವಿಚಿತ್ರವಾಗಿ ತೋರಿದ್ದೆಂದರೆ ಅವರಾರ ಮುಖದಲ್ಲೂ ದುಃಖ, ವಿಷಾದ ಕಾಣುತ್ತಿರಲಿಲ್ಲವಷ್ಟೇ ಅಲ್ಲ, ಆ ಜಾಗದಲ್ಲಿ ದರ್ಪ ಮನೆ ಮಾಡಿತ್ತು. ನಾನು ಸೀದಾ ಹೋದವನೇ ರೋಗಿಯ ದೇಹವನ್ನು ಮಲಗಿಸಿದ್ದ ಟೇಬಲ್ ಬಳಿ ಹೋದೆ. ನನ್ನ ವೈದ್ಯಮಿತ್ರ ತನ್ನ ಪುಷ್‌ಬ್ಯಾಕ್ ಕುಷನ್ ಕುರ್ಚಿಯ ಮೇಲೆ ಧೊಪ್ಪೆಂದು ಕುಸಿದು ಕುಳಿತ. ನಾನು ರೋಗಿಯ ದೇಹವನ್ನು ನಖ-ಶಿಖಾಂತ ಪರೀಕ್ಷಿಸುತ್ತಿರುವಾಗ ನನ್ನ ಹಿಂದೆ ಗುಸು ಗುಸು ಪಿಸಿ ಪಿಸಿ ಮಾತು ಹಿಮ್ಮೇಳದಂತೆ ಪ್ರಾರಂಭವಾಗಿತ್ತು. ''ಅಯ್ಯೋ ನಮ್ಮ ಮಾಮಾನ ಕೊಂದ ಬಿಟ್ನಲ್ಲೋ ಈ ಡಾಕ್ಟರಾ, ಇನ್ನೂ ಸಣ್ಣ ಸಣ್ಣ ಮಕ್ಕಳು, ನಮ್ಮ ಅಕ್ಕಗ ನಾ ಹೇಂಗರೆ ಮುಖಾ ತೋರಿಸಲೋ ಯಪ್ಪಾ'' ಎಂದು ರಾಗಬದ್ಧವಾಗಿ ಪ್ರಲಾಪಿಸತೊಡಗಿದ ಅವರೆಲ್ಲರಲ್ಲಿ ಚಿಕ್ಕವನಂತೆ ಕಾಣುತ್ತಿದ್ದ ಕುಡಿ ಮೀಸೆಯ ಯುವಕ. ನಾನೇನೂ ತಲೆಕೆಡಿಸಿಕೊಳ್ಳದೇ ಕೂಲಂಕಷವಾಗಿ ದೇಹವನ್ನೆಲ್ಲ ಪರಿವೀಕ್ಷಿಸುತ್ತಿದ್ದೆ. ನಾಡಿ, ಗುಲ್ಲಾಗಿತ್ತು. ಹೃದಯ ಬಡಿತ ಮಂಗಮಾಯವಾಗಿತ್ತು. ಕಣ್ಣು ಪಾಪೆ ಕಿಸಿದಿತ್ತು. ಕೈಕಾಲುಗಳನ್ನ ಮಡಚಿ ನೋಡಿದರೆ ಸೆಡವು ಪ್ರಾರಂಭವಾಗಿತ್ತು.

''ಎಷ್ಟ ಟೈಮ್ ವೇಸ್ಟ್ ಮಾಡಾಕ್ಹತ್ತಿದೀರಿ ! ಲಗೂನ ಏನದು ಹೇಳ್ರೀ. ನಾವಿನ್ನಾ ಭಾಳ ದೂರ ಹೋಗಬೇಕು'' ಎಂದು ಆಗಿನಿಂದಲೂ ಮೀಸೆ ಹುರಿ ಮಾಡುತ್ತಿದ್ದವ ಅಸಹನೆಯ ಧ್ವನಿಯಲ್ಲಿ ಹೇಳಿದ. ನಾನೊಮ್ಮೆ ಅವರೆಲ್ಲರ ಕಡೆ ನೋಡಿ, ಡಾಕ್ಟರ್ ಕಡೆ ನೋಡಿದೆ. ತಮ್ಮ ಎರಡೂ

ಡಾ|| ಅನಿಲ ಕಮತಿ




ಬೀಗದ ಎಸಳು ಸದಾ ಬೀಗುತ್ತಿರುತ್ತದೆ
ಬೀಗಕ್ಕಿಂತ ಎರಡು ಪಟ್ಟಲ್ಲ
ಹತ್ತು ಪಟ್ಟು ಸಣ್ಣದಿದ್ದರೂ
ನಾನಿಲ್ಲದೆ ಬೀಗವ ಹಾಕಲಾಗಲಿ
ತೆಗೆಯಲಾಗಲಿ ಆಗುವುದಿಲ್ಲವೆಂದು.
ಎಸಳಿಗೆ ತಿಳಿಸಬೇಕು ನಾವು
ಅದಕಾಗಿ ನೀ ಬೀಗಬೇಡ ಎಂದೂ
ಬೀಗದ ಎಸಳು ಸಣ್ಣದು ನಿಜ
ಆದರೆ ಅದರ ಕಾರ್ಯ ಸಣ್ಣದಲ್ಲ
ಅದಕಾಗಿ ಎಸಳು ಬೀಗ ಬೇಕಿಲ್ಲ
ಎಸಳಿಗೆ ಗೊತ್ತಿಲ್ಲ ಬೀಗವಿಲ್ಲದಿರೆ
ಎಸಳಿಗೆ ಬೆಲೆಯಿಲ್ಲವೆಂದು
ತಿಳಿಸಿಕೊಡಬೇಕು ನಾವು
ಎಸಳಿಗೆ ಇದನ್ನೂ
ಬೀಗ ಹಾಕಿರಲಿ ಹಾಕದಿರಲಿ
ಯಾವತ್ತೂ ಬೀಗುವುದಿಲ್ಲ, ಇದ್ದೆಡೆಯೆ
ಬಿದ್ದಿರುತ್ತದೆ ಸದ್ದುಗದ್ದಲವಿಲ್ಲದೆ ತುಟಿಪಿಟಕ್ಕೆನ್ನದೆ
ಅದರ ದಡ್ಡತನದಿಂದಲ್ಲ
ದೊಡ್ಡತನದ ಗಾಂಭೀರ್ಯದಿಂದ
ತಿಳಿಸಿಕೊಡಬೇಕು ನಾವು
ಎಸಳಿಗೆ ಇಂಥ ಗಾಂಭೀರ್ಯವನ್ನು
ಎಸಳು ಸದಾ ಜಂಬ ಬಡಿಯುತ್ತದೆ
ಬೀಗದ ಹಾಗೆ ನಾ ಬಂಧಿಯಲ್ಲವೆಂದು
ಮನೆಯವರೊಟ್ಟಿಗೆ ಎಲ್ಲೆಡೆ
ಸುತ್ತುವ ಸ್ವಾತಂತ್ರ್ಯವಿದೆಯೆಂದು
ತಿಳಿಸಿ ಹೇಳಬೇಕು ನಾವು
ಎಸಳಿಗೆ ಅದು ಸ್ವಾತಂತ್ರ್ಯವಲ್ಲವೆಂದು

ಡಾ|| ಕೂಡ್ಲೂರು ವೆಂಕಟಪ್ಪ
ಕನ್ನಡ ಉಪನ್ಯಾಸಕರು
ಎಸ್.ಎಲ್.ಎನ್. ಕಾಲೇಜು, ಕೋಟಿ
ಬೆಂಗಳೂರು - ೫೬೦ ೦೦೨

ಮೊಣಕೈಗಳನ್ನು ಟೇಬಲ್ ಮೇಲೆ ಊರಿ ತಲೆ ಹಿಡಿದುಕೊಂಡು ಕುಳಿತಿದ್ದ ಡಾಕ್ಟರು ಕೆಳಗೆ ಹಾಕಿದ ತಲೆ ಮೇಲೆತ್ತಲಿಲ್ಲ.

ನಾನು ಆ ನಾಲ್ಕು ಧಡಿಯರನ್ನುದ್ದೇಶಿಸಿ ಕೇಳಿದೆ: ''ಇದೆಲ್ಲ ಹೇಗೆ, ಏನಾಯ್ತು? ಒಮ್ಮೆ ಸವಿಸ್ತಾರವಾಗಿ ಹೇಳಿ.'' ಅವನ ದನಿಯಲ್ಲಿ ಅಸಹನೆ ಇತ್ತಾದರೂ ಕೊಂಚ ಮೃದು ಧ್ವನಿಯಲ್ಲಿ ಚಿಗುರು ಮೀಸೆಯವ ಹೇಳತೊಡಗಿದ – ''ಇವರು ನಮ್ಮ ಮಾವ, ಅಕ್ಕನ ಗಂಡ. ಬಹಳ ದಿನಗಳ ನಂತರ ನಮ್ಮೂರಿಗೆ ನಿನ್ನೆ ತಾನೇ ಬಂದಿದ್ದ. ಆದ್ದರಿಂದ ನಾವೆಲ್ಲ ಸೇರಿ ರಾತ್ರಿ ಪಾರ್ಟಿ ಮಾಡಿ, ಅದೂ ಇದೂ ಮಾತನಾಡುತ್ತ ಕುಳಿತಿದ್ದೆವು. ಇನ್ನೇನು ಮಲಗಬೇಕು ಎನ್ನುವಷ್ಟರಲ್ಲಿ ನಮ್ಮ ಮಾವ ಯಾಕೋ ನನಗೆ ಉಸಿರಾಡಲು ತೊಂದರೆಯಾಗುತ್ತಿದೆ ಎಂದ ಕೂಡಲೆ ಗಾಡಿ ಹೂಡಿ ಇಲ್ಲಿಗೆ ಕರೆತಂದೆವು. ಬರುವಾಗ ದಾರಿಯುದ್ದಕ್ಕೂ ಆತ ತಳಮಳಿಸುತ್ತಿದ್ದನಾದರೂ ನಮ್ಮೆಲ್ಲರೊಂದಿಗೆ ಏನೇನೋ ಮಾತನಾಡುತ್ತಲೇ ಇದ್ದ. ಇಲ್ಲಿ ತಂದು ಮಲಗಿಸಿ ಇಂಜಕ್ಷನ್ ಕೊಟ್ಟು ನಾಲ್ಕೈದು ನಿಮಿಷಗಳಲ್ಲೇ ಗೋಣು ಚೆಲ್ಲಿದ. ಮುಂದಿನದೆಲ್ಲ ನಿಮಗೇ ಗೊತ್ತೇ ಇದೆ'' ಎಂದು ಮಾತು ಮುಗಿಸಿದ.

''ಮುಂದೇನಾಯ್ತು ಡಾಕ್ಟರೇ!'' ಎಂದು ನಾನು ವೈದ್ಯಮಿತ್ರರನ್ನು ಪ್ರಶ್ನಿಸಿದಾಗ, ಅವರು ತಗ್ಗಿಸಿದ ತಲೆ ಮೇಲೆತ್ತದೇ, ''ಇವರೆಲ್ಲ ಗಾಡಿಯಿಂದ ಪೇಶಂಟ್ ಎತ್ತಿ ತಂದು ಟೇಬಲ್ ಮೇಲೆ ಹಾಕಿದವರೇ – 'ಡಾಕ್ಟರ್ ಆವಾಗಿಂದ ಇವಂಗ ಉಸಿರು ತೋಡ್ತಾಕ ಹತ್ತೆದರಿ, ಉಸಿರಾಟದ ತೊಂದರಿ ಸಲುವಾಗಿ ಮೊದಲೊಂದ ಇಂಜಕ್ಷನ್ ಕೊಡ್ರೀ, ಆಮ್ಯಾಲ ಉಳಿದಿದ್ದೆಲ್ಲ ನೋಡೀರೆಂತ' ಎಂದು ಅವಸರಿಸಿದ್ದರಿಂದ ಡೆರಿಫೈಲಿನ್ ಇಂಜಕ್ಷನ್ ಕೊಟ್ಟು, ತಪಾಸನಿ ಮಾಡೋದರಾಗ ಎಲ್ಲಾ ಮುಗದಿತ್ತು. ಆಮ್ಯಾಲ ನಿಮ್ಮನ್ನ ನಾ ಕರಿಯಾಕ ಬಂದದ್ದು'' ಎಂದು ಹೇಳಿ ಮುಗಿಸುವಷ್ಟರಲ್ಲಿ ಅವರು ಏದುಸಿರು ಬಿಡುತ್ತಿದ್ದರು.

''ಈಗ ಹೆಂಗ್ ಮಾಡೂದು!'' ನಾನು ಎಲ್ಲರನ್ನುದ್ದೇಶಿಸಿ ಕೇಳಿದೆ.

ಮೀಸೆ ಹುರಿಗೊಳಿಸುತ್ತಿದ್ದವ ಹುರಿಗೊಳಿಸುತ್ತಲೇ ಹೇಳಿದ – ''ನೋಡ್ರಿ ಸಾಹೇಬ್ರ, ಅವರಿಗೂ ಮೂರ ಸಣ್ಣು ಸಣ್ಣು ಮಕ್ಕಳದಾವ. ಇನ್ನು ಮೂವತ್ತ ತೀರೋದ್ರೊಳಗ ರಂಡಿ ಮುಂಡಿ ಆದ ಇವನ್ಹೆಂಡ್ತಿ ಕೂಲಿನಾಲಿ ಮಾಡಿಸಿ ಈ ಬಾಲ ಬಚ್ಚ್ಯಾಗೋಳ ಹೊಟ್ಟಿ ತುಂಬಿಸಬೇಕು. ಕೋರ್ಟ್ ಕಚೇರಿ ಮಾಡಿದರ ನಾಲ್ಕೈದ ಲಕ್ಷಕ್ಕೇನ ಕಡಿಮೆ ಬರುದುಲ್ಲಾ ಅಂತ ನಮಗೂ ಗೊತ್ತು, ನಿಮಗೂ ಗೊತ್ತು. ನೋಡ್ರಿ ನಾವು ನೀವು ದಿನಾ ಬೆಳಗಾಗೆದ್ರ ಒಬ್ಬರಿಗೊಬ್ಬರು ಮುಖ ನೋಡ್ವರು ಯಾತಕ್ಕೀ ಕೋರ್ಟ್ ಭಾನಗಡಿ? ನಿಮಗೂ ತೊಂದರಿ ಆಗಿರಬಾರದು. ಇವನ ಹೆಂಡ್ತಿ ಮಕ್ಕಳೂ ಬೀದಿಗೆ ಬಿದ್ದಿರಬಾರದೂ ಹಂಗ ಒಂದೆರಡ ಲಕ್ಷದಾಗ ಮುಗಿಸಿಬಿಡುನು.''

ನಾನು ತೆರೆದ ಬಾಯಿ ತೆರೆದಂತೆಯೇ ಕೇಳಿದೆ – ''ಎರಡ ಲಕ್ಷಾ? ಏನ್ ಹೇಳಾಕತ್ತೀರಿ ನೀವು. ರೊಕ್ಕ ಏನ ಗಿಡಕ ಹತ್ತತಾವೇನು?''

''ಇಲ್ರೀ ಸಾಹೇಬ್ರs ನಿಮ್ಮ ಮಾತ ನಾವ ಮೀರಾಂಗಿಲ್ಲ, ಒಂದೈವತ್ತ ಸಾವಿರ ಕಮ್ಮಿ ಮಾಡ್ರೀ'' ಮೀಸೆ ಮಾತನಾಡಿತು.

''ಥೇ, ಅದೇನ ಆಗೂ ಹೋಗೂ ಮಾತಲ್ಲ ಬಿಡ್ರೀ'' ನನ್ನ ಬಿಚ್ಚುನುಡಿ.

''ನೋಡ್ರಿ ಇದಕ್ಕಿಂತ ಹೆಚ್ಚ ಜಿಕೇರಿ ಮಾಡಬ್ಯಾಡ್ರಿs. ಇದು ಕಡೀ ಮಾತ. ಒಪ್ಪೋದಾದ್ರ ಒಂದ ಲಕ್ಷಕ್ಕ ಒಪ್ಪಕೊಳ್ಳಿ ಇಲ್ಲಾ ಬಿಟ್ಟುಬಿಡ್ರೀ ನಮ್ಮ ಹಾದೀ ನಮಗs, ನಿಮ್ಮ ಹಾದಿ ನಿಮಗ'' ಮೀಸೆ ಗಡುಸಾಯಿತು.

ಡಾಕ್ಟರೆಡೆಗೆ ನಾನೊಂದು ನೋಟ ಬೀರಿದೆ. ಶೂನ್ಯದಲ್ಲಿ ನೆಟ್ಟಿದ್ದ ಅವರ ದೃಷ್ಟಿ ಅತ್ತಿತ್ತ ಅಲ್ಲಾಡಲಿಲ್ಲ.

''ಈ ಅಪರಾತ್ರ್ಯಾಗ ಲಕ್ಷ ಎಲ್ಲಿಂದ ತರೋದು ನನ್ನ ತರದೂದು.''

''ನೀವ ನಡವ ಅದೀರಿ ಅಂದ ಮ್ಯಾಲ ನಮಗ್ಯಾತರ ಚಿಂತಿರೀ ಸಾಹೇಬ್ರ. ಈಗ ಸದ್ಯಾ ಅವನನ್ನ ಕಾಗವಾಡ ದಾಟಿಸಿ ಅವನೂರಿಗಿ ಒಯ್ದು ಕ್ರಿಯಾ ಕರ್ಮ ಮುಗಸಾಕಂತ ಒಂದ ಹತ್ತ ಸಾವಿರ ಮುಂಗಡ ಕೊಡ್ರೀ. ಉಳಿದದ್ದು ಒಂದ ವಾರದಾಗ ಮುಟ್ಟಸ್ತೀವ್ರ ಅಂತ ನೀನ ಮಾತ ಕೊಟ್ರ ಸಾಕು. ಸದ್ದ್ಯಾ ಹತ್ತ ಸಾವಿರ ಜತಿ ಒಂದ ಮರಣ ದಾಖಲಾ ಕೊಟ್ಟಬಿಡ್ರೀ ಸಾಕು.'' ಮೀಸೆಯ ಮಿಸುಕಾಟ. ಮರಣ ದಾಖಲಾ ಅಂದಕೂಡಲೇ ನನ್ನ ಕಿವಿಗಳೂ ನಿಮಿರಿದವು.

'ಮರಣ ದಾಖಲಾ ಪತ್ರ ಯಾತಕ್ಕ?' ನನ್ನ ಪ್ರಶ್ನೆ.

''ಅಗsss ನಿಮಗ ಹೇಳಿದವಲ್ರೀ, ಇವನೂರು ಕಾಗವಾಡದ ಆಚೇಕಡೆ ಹತ್ತ ಮೈಲಿ. ಅಲ್ಲಿಗಿ ಟ್ಯಾಕ್ಸಿ ಮಾಡಿ ಇವನ್ನ ಒಯ್ಯುಮುಂದ ನಡಬದಕ ದಾರ್‍ಯಾಗ ಸುಮ್ನ ಪೊಲೀಸರು ಅಡಚಣ ಮಾಡಬಾರದು ಅಂತ ಮುಂಜಾಗ್ರತಾ ಅಷ್ಟರೀ.''



''ನೋಡ್ರೀ, ದುಡ್ಡಿನ ವಿಷಯ ಆಮ್ಯಾಲ ಮಾತಾಡೂನು. ಡೆತ್ ಸರ್ಟಿಫಿಕೇಟ ಮಾತ್ರ ನಾಂವ ಕೊಡಾಂಗಿಲ್ಲ.'' ನನ್ನ ಧ್ವನಿಯಲ್ಲಿ ನಿಷ್ಠುರತೆ ಇತ್ತು.

''ಅಲ್ರೀ, ಇವ್ರ ಇಂಜಕ್ಷನ್ ಕೊಟ್ಟ, ಇವ್ರ ಕೊಂದ ಪೆಶಂಟಿಗೆ ಡೆತ್ ಸರ್ಟಿಫಿಕೇಟ ಕೊಡುದುಲ್ಲಾ ಅಂದ್ರ ಹೆಂಗ್ರೀ'' ಮೀಸೆಯ ಏರಿದ ಧ್ವನಿಯಲ್ಲಿ ಧಮಕಿಯ ಛಾಯೆ ಎದ್ದು ಕಾಣುತ್ತಿತ್ತು.

''ನೋಡ್ರೀ, ನಾನು ಈ ಡಾಕ್ಟರು ಕೂಡಿ ಮಾತಾಡಕೊಂತ ಕೂತಿದ್ವಿ. ಸುಮಾರು ೨ ಗಂಟೆ ಸುಮಾರಿಗೆ ಇಬ್ಬರೂ ಎದ್ದು ಇನ್ನು ಮಲಗಲು ಹೋಗಬೇಕು ಅನ್ನೋದರಾಗ ನೀವೆಲ್ಲಾರು ಸೇರಿ, ಈ ಬ್ಹಾಡಿ ತಂದು ಈ ಟೇಬಲ್ ಮ್ಯಾಲ ಹಾಕಿದಿರಿ. ಇವಂಗ ಉಸಿರಾಟದ ತೊಂದ್ರಿ ಬೇಗ ಇಂಜಕ್ಷನ್ ಕೊಡ್ರೀ ಅಂತ ಗಡಿಬಿಡಿ ಮಾಡಿದಿರಿ. ಇವಂಗ ಏನಾಗೇತಿ ? ಯಾವ ಇಂಜಕ್ಷನ್ ಕೊಡ್ಬೇಕು ಅಂತ ಇವನ ತಪಾಸಣೆ ಮಾಡಿ, ಇಲ್ಲಾ ಇವನ ಕಥಿ ಮುಗದ್ಯೆತಿ, ಬ್ಹಾಡಿ ತಗೊಂಡ ಹೋಗ್ರಿ ಅಂತ ಈ ಡಾಕ್ಟ್ರು ನನ್ನೆದುರಿಗೆ ನಿಮಗೆಲ್ಲಾ ಹೇಳ್ಯಾರು'' ಎಂದು ನಾನು ಮಾತು ಮುಗಿಸುವುದ ರೊಳಗೆ ಇಬ್ಬರು-ಮೂವರು ಎದ್ದು ಡಾಕ್ಟರ್ ಎದುರಿನ ಟೇಬಲ್ ಗುದ್ದುತ್ತ – ''ಯಾಕ್ರೀ ಡಾಕ್ಟ್ರ, ಇವಂಗ ನೀವು ಇಂಜಕ್ಷನ್ ಕೊಟ್ಟದ್ದು ಸುಳ್ಳೇನು ?'' ಎಂದು ದಬಾಯಿಸಿದರು.

ನಾನು ಅಷ್ಟೇ ತಣ್ಣಗಿನ ದನಿಯಲ್ಲಿ – ''ಎಲಾ ಇವ್ರ. ಅವಾಗಿಂದ ಈ ಡಾಕ್ಟರ ಜತೀನ ಇದ್ದಾಂವ ನಾನ ಹೇಳಾಕತ್ತೀನಲ್ಲ ಇವಂಗ ಯಾರೂ ಇಂಜಕ್ಷನ್ ಕೊಟ್ಟಿಲ್ಲಂತ.''

ಈಗ ಅವ್ರ ರೋಷ ನನ್ನ ಮೇಲೆ ತಿರುಗಿತ್ತು. ಮೀಸೆ ನನ್ನ ಮೇಲೆ ಏರಿ ಬರುತ್ತಿದ್ದಂತೆಯೇ ಇನ್ನುಳಿದವರಿಬ್ಬರು ಅವನ ರಟ್ಟೆ ಹಿಡಿದು ಹಿಂದೆ ಜಗ್ಗಿದರು.

''ಡಾಕ್ಟರ ಸಾಹೇಬ್ರ, ದುಡ್ಡಿನ ವಿಷಯ ಏನರೆ ಆಗವಾಲ್ತ್ಯಾಕ. ಈಗ ನಮಗ ಇಂವ ಹಾರ್ಟ್ ಅಟ್ಯಾಕ್ ಆಗಿ ತೀರಕೊಂಡಾನಂತ ಸರ್ಟಿಫಿಕೇಟ ಅಷ್ಟ ಕೊಡ್ರೀ. ನಾವು ಹೋಗಿಬಿಡ್ತೇವು'' ಎಂದು ಮಧ್ಯಸ್ಥನೊಬ್ಬ ರಾಜಿಕಬೂಲಿಗೆ ಬಂದ.

''ಇಲ್ಲ, ಇವರನ ಬಿಡೋದ ಬ್ಯಾಡಾ. ಇವರಿಬ್ಬರ ವಿರುದ್ಧ ಎಂಥದೋ ಇಂಜಕ್ಷನ್ ಕೊಟ್ಟು ಕೊಂದಿದಾರು ಅಂತ ಪೊಲೀಸರಿಗೆ ಕಂಪ್ಲೇಂಟ್ ಕೊಡೋಣ'' ಎಂದು ಅರಚಾಡುತ್ತ ಮೀಸೆ ಎಗರಾಡಗೊಡಗಿತು.

''ಅಷ್ಟಽ ಮಾಡ್ರೀ ನಮಗೂ ಅದಽ ಬೇಕಾಗ್ಯದ. ನೀವಿದನ ಲಗೂನ ಮಾಡಲಿಲ್ಲಾ ಅಂದ್ರ ನಾಂವ ಮಾಡಬೇಕಾಗ್ಯೆತಿ'' ಎಂದು ಮೇಜಿನ ಮೇಲಿದ್ದ ಫೋನನ್ನು ನನ್ನೆಡೆ ಎಳೆದುಕೊಂಡೆ.

ಹೊರಗೆ ಜೋಡೆತ್ತಿನ ಚಕ್ಕಡಿಯನ್ನು ತಿರುಗಿ ಹಚ್ಚುವಲ್ಲಿ ಕಂಬಳಿಯೊಳಗಿನ ಆಕೃತಿ ನಿರತವಾಗಿತ್ತು.

''ಡಾಕ್ಟರ್ ಯಾಕ್ರೀ ನಮ್ಮ ಹೊಟ್ಟಿ ಮ್ಯಾಲ ಕಾಲ ತರತೀರಿ'' ಎಂದ ಮಧ್ಯಸ್ಥ ಮೃದು ದನಿಯಲ್ಲಿ.

''ಅಲ್ಲಪಾ, ನಿಮ್ಮ ಹೊಟ್ಟಿಮ್ಯಾಲ ಕಾಲ ತರೂದ ಬ್ಯಾಡಾ ಅಂತ ಈ ಡಾಕ್ಟರನೇನು ನಾಲ್ಕು ವರ್ಷ ಕಾಳಾಪಾನಿಗೆ ಕಳಸಬೇಕಂದದೀರೇನು'' ನನ್ನ ಧ್ವನಿಯಲ್ಲಿ ದೃಢತೆ ಇತ್ತು.

ಇವರ ಅರಚಾಟ ಕೇಳಿ ನೆರೆಹೊರೆಯ ಜನ ಒಬ್ಬೊಬ್ಬರಾಗಿ ಆಸ್ಪತ್ರೆ ಎದುರಿಗೆ ಸೇರತೊಡಗಿದ್ದರು. ಜನ ಜಮಾಯಿಸತೊಡಗಿದ್ದನ್ನೂ, ನನ್ನ ದೃಢ ನಿಲುವನ್ನೂ ನೋಡಿ ಇವರೆಲ್ಲರ ಎಗರಾಟ ತಣ್ಣಗಾಯಿತು. ಮೀಸೆ ಮೂಲೆ ಸೇರಿ ತಣ್ಣಗೆ ಕುಳಿತುಕೊಂಡಿತು.

ನಾನು ಆಸ್ಪತ್ರೆಯ ಮುಂಬಾಗಿಲು ಮುಟ್ಟಿ ಬಂದು ಅವರಿಗೆ ವಿವರಿಸತೊಡಗಿದೆ. ''ನೋಡ್ರೀ, ಎರಡೂ ವರೆಗೆ ನಾನು ಬಂದು ನೋಡಿದಾಗಲೇ ಈ ಹೆಣದ ಸ್ನಾಯುಗಳು ಸೆಟೆದುಕೊಳ್ಳಲು ಪ್ರಾರಂಭಿಸಿದ್ದವು. ಇದರರ್ಥ ಇವನು ಕನಿಷ್ಠ ಎರಡರಿಂದ ಮೂರು ತಾಸು ಮೊದಲು ಸತ್ತಿದ್ದಾನೆಂಬುದು ಖಾತ್ರಿಯಾಯಿತು. ಅಂದರೆ ಪೊಲೀಸರ ತನಕ ಹೋಗಿ ನಾಳೆ ಪೋಸ್ಟಮಾರ್ಟಂ ಆದರೂ ನಮ್ಮ ಡಾಕ್ಟರು ರಾತ್ರಿ ೨ ಗಂಟೆಗೆ ಇಂಜಕ್ಷನ್ ಕೊಟ್ಟಿದ್ದಾರೆ ಎಂದು ನಾಳೆ ಕೋರ್ಟಿನಲ್ಲಿ ನೀವು ಸಾಕ್ಷಿಗಳಿಂದ ಸಾಧಿಸಿ ತೋರಿಸಿದರೂ ಇವನ ಮರಣದ ಸಮಯ ರಾತ್ರಿ ಹನ್ನೊಂದು ಮತ್ತು ಹನ್ನೆರಡರ ಮಧ್ಯೆ ಎಂದು ಪೋಸ್ಟಮಾರ್ಟಂ ಹೇಳುವುದರಿಂದ ನಮ್ಮ ಡಾಕ್ಟರನೇನೂ ಯಾರೂ ಏನೂ ಮಾಡುವಂತಿಲ್ಲ.

''ಇನ್ನು ಉಳಿದ ವಿಷಯ. ಇವನ ಕೈಗಳ ಎರಡೂ ಮುಷ್ಟಿಗಳು ಹೇಗೆ ಗಟ್ಟಿಯಾಗಿ ಬಿಗಿದುಕೊಂಡಿವೆ ನೋಡಿ. ಇದರರ್ಥ ಈತ ಜೀವ ಬಿಡುವಾಗ ತುಂಬ ಮಿಸುಕಾಡಿದ್ದಾನೆಂದೂ, ಯಾವುದೋ ಎದುರಿನ ಶಕ್ತಿಯ ವಿರುದ್ಧ ಹೋರಾಡಿದ್ದಾನೆಂದೂ ಆಯಿತು. ಇದು ಯಾವುದೇ ಇಂಜಕ್ಷನ್ನಿನಿಂದ ಸಂಭವಿಸಿದ ಸಾವಿನಲ್ಲಿ ಸಾಧ್ಯವಿಲ್ಲದ ಮಾತು.

''ಇನ್ನು ಇವನ ಕುತ್ತಿಗೆ ನೋಡಿ. ಕುತ್ತಿಗೆಯ ಎರಡೂ ಕಡೆಗೆ ಬೆರಳ ಗುರುತುಗಳು ಸ್ಪಷ್ಟವಾಗಿ ಕಾಣಿಸುತ್ತಿವೆ. ಇವನ ಬಲಗಡೆಯ ಕಟವಾಯಿಯಿಂದ ಒಂದೆರಡು ಹನಿ ರಕ್ತ ಒಸರಿದೆ. ಇದು ಇವನನ್ನು ಕುತ್ತಿಗೆ ಹಿಸುಕಿ ಕೊಲ್ಲಲಾಗಿದೆ ಎಂಬುದನ್ನು ಸಾಬೀತು ಪಡಿಸುತ್ತದೆ. ಇನ್ನೂ ಒಂದು ವಿಶೇಷ ನಿಮಗೆ ಹೇಳಬೇಕೆಂದರೆ ಇವನ ಕುತ್ತಿಗೆಯ ಎಡಬಾಜುವಿನಲ್ಲಿ ಕೈಯ ಹೆಬ್ಬೆರಳಿನ ಗುರುತೂ, ಬಲಗಡೆಗೆ ೨-೩ ಬೆರಳುಗಳ ಗುರುತೂ ಕಾಣಿಸುತ್ತಿವೆ. ಇದರರ್ಥ ಇವನನ್ನು ಕುತ್ತಿಗೆ ಹಿಸುಕಿ ಕೊಂದವರು ರೊಡ್ಡರು (ಎಡಚರು) ಎಂದು. ಈಗ ಏನು ಮಾಡೋಣ ಹೇಳಿ ಪೊಲೀಸರನ್ನು ನೀವು ಕರೆಯುತ್ತೀರೋ ? ನಾವು ಕರೆಯೋಣವೋ ?''

ರಾತ್ರಿಯ ನೀರವತೆ, ಬದಿಗೊಂದು ಹೆಣ – ಅದೂ ಅಸ್ವಾಭಾವಿಕ ಸಾವಿನದು. ಕಾಳರಾತ್ರಿಯ ಗಾಢತೆ ಹೆಚ್ಚಿಸುವಂಥ ಹೆಪ್ಪುಗಟ್ಟಿದ ಮೌನ. ಈ ಮೌನವನ್ನು ಹೊರಗೆ ಗಾಡಿಗೆ ಕಟ್ಟಿದ್ದ ಎತ್ತುಗಳ ಕೊರಳೊಳಗಿನ ಗಂಟೆಗಳ ನಿನಾದ ಆಗಾಗ ಮುರಿಯಲು ಪ್ರಯತ್ನಿಸುತ್ತಿದ್ದವು. ಬೆಂಚಿನ ಮೇಲೆ ಕುಳಿತಿದ್ದ ನಾಲ್ವರು ಕೊಣಪರ ಬಾಯಿಂದ ಬರುತ್ತಿದ್ದ ಮದಿರೆಯ ದುರ್ವಾಸನೆ ಈಗ ಬಾಗಿಲು ಮುಚ್ಚಿದ್ದರಿಂದ ಕೋಣೆ ಯನ್ನೆಲ್ಲ ಆವರಿಸಿತ್ತು.

ಕಣ್ಸನ್ನೆಯಲ್ಲೇ ಮಾತನಾಡಿಕೊಂಡ ಈ ನಾಲ್ವರು ಕೊಣಪರೊಳಗಿನವನೊಬ್ಬ ಮೆಲ್ಲನೆದ್ದು ಬಾಗಿಲು ತೆರೆದ. ಉಳಿದ ಮೂವರು ಮೃತದೇಹವನ್ನೆತ್ತಿ ಚಕ್ಕಡಿಗೆ ಹಾಕಿದರು.

ಗಾಡಿ ಹೊರಟಿತು. ಜಮಾಯಿಸಿದ್ದ ಜನ ಮನೆಗೆ ಮರಳಿದರು. ಗಾಡಿ ದೂರ ದೂರ ಹೋದಂತೆ ಎತ್ತುಗಳ ಕೊರಳೊಳಗಿನ ಗಂಟೆಗಳ ನಾದ ಮಸುಕು ಮಸುಕಾಗುತ್ತ ಕೊನೆಗೊಮ್ಮೆ ಮಾಯವಾಯ್ತು.

ನನ್ನ ವೈದ್ಯಮಿತ್ರರನ್ನು ಮನೆಗೆ ತಲುಪಿಸಿ, ನಾನೂ ಮನೆ ಸೇರಿ ನಿದ್ರೆಗೆ ಶರಣಾದೆ.

(ಪ್ರಕಟಣಾ ಹಂತದಲ್ಲಿರುವ 'ಡಾಕ್ಟರ್ಸ್ ಡೈರಿಯಿಂದ' ಎಂಬ ಪುಸ್ತಕದಿಂದ...)

**ಡಾ॥ ಅನಿಲ ಕಮತಿ**
'ಯಕ್ಸಂಬಾ', ಬೆಳಗಾವಿ ಜಿಲ್ಲೆ, ಯಕ್ಸಂಬಾ - ೫೯೧ ೨೪೪

# ನೆಲೆನಿಂತ ಅಲೆಮಾರಿಗಳು

'**ಮಾ**ದೇವನೇ... ದಯೆ ಬಾರದೇ! ಕೈಹಿಡಿದು ಕಾಪಾಡಯ್ಯ!'

ಇಂಪಾದ ಹಾಡು, ಕ್ಯಾಸೆಟ್‌ನಿಂದ ಬಂದದ್ದಲ್ಲ. ಶ್ರುತಿ ಪೆಟ್ಟಿಗೆಯ ನಾದದೊಂದಿಗೆ ದಂಬಡಿ ವಾದ್ಯದ ತಾಳ. ಇಂಪಾಗಿ ಬೆರೆತ ಗಂಡು-ಹೆಣ್ಣಿನ ದನಿ. ದೂರದಿಂದ ಕೇಳಿಸುತ್ತಿದ್ದ ಹಾಡು ಮನೆಯ ಮುಂದೆ ಹರಿದಾಡತೊಡಗಿತ್ತು! ನಗರವಾಸಿಗಳಿಗೆ ಲಭಿಸದ ಅನುಭವ.

ಹೊರಗೆ ಇಣಕಿದ ನಾನು ಮತ್ತೆ ಸ್ವಲ್ಪ ಹೊತ್ತು ಹಾಡುವಂತೆ ಕೈ ಸನ್ನೆ ಮಾಡಿದಾಗ ಹಾಡು ಮುಂದುವರಿಸಿದರು. ಅವರ ಬಗ್ಗೆ ತಿಳಿದುಕೊಳ್ಳುವ ಅಪೇಕ್ಷೆ ವ್ಯಕ್ತಪಡಿಸಿದಾಗ ಸಂತೋಷದಿಂದ ಸಮ್ಮತಿಸಿದರು.

ಮಾತು ಪ್ರಾರಂಭಿಸುವ ಮುಂಚೆ ''ನಿಮ್ಮಂಥವರ ದಯೆ ನಮ್ಮ ಮೇಲಿರಲಿ!'' ಎಂದು ಇಬ್ಬರೂ ದನಿಗೂಡಿಸಿದರು.

ಇಬ್ಬರೂ ತೆಳ್ಳಗಿನ ಶರೀರದವರು. ಇಬ್ಬರದೂ ಇಂಪಾದ ಕಂಠ. ಅವರು ಗೊಂಬೆ ರಾಮ ದಂಪತಿಗಳಾದ ರಾಮ ಮತ್ತು ಪುಟ್ಟಮ್ಮ. ಕಳೆದ ಇಪ್ಪತ್ತು ವರ್ಷಗಳಿಂದ ಅಣಸಾಲೆ ಗ್ರಾಮದಲ್ಲಿ ನೆಲೆ ನಿಂತಿದ್ದಾರೆ.

ಅಲೆಮಾರಿಗಳಾದ ಗೊಂಬೆ ರಾಮರಿಗೆ ತಮ್ಮದೆಂದು ಹೇಳಿಕೊಳ್ಳುವ ಊರಾಗಲಿ, ತಲೆಯಮೇಲೆ ಒಂದು ಸೂರಾಗಲಿ ಇರಲಿಲ್ಲ. ವರ್ಷಪೂರ್ತಿ ಊರಿಂದೂರಿಗೆ ಅಲೆದಾಡುತ್ತ ಜೀವನ ಸಾಗಿಸುತ್ತಿದ್ದರು. ಪರಂಪರೆ ಅಲೆಮಾರಿಗಳು. ಊರಿನ ಹೊರಚ್ಚಿನಲ್ಲಿ ಅಥವಾ ಪಾಳು ಬಿದ್ದ ದೇವಾಲಯಗಳಲ್ಲಿ ಬೀಡು ಬಿಡುತ್ತಿದ್ದರು. ಮನೆ ಮನೆ ಮುಂದೆ ಹಾಡು ಹೇಳುತ್ತ ಭಿಕ್ಷೆ ಬೇಡುವುದು



ಅವರ ವೃತ್ತಿ. ಕೆಲವು ಊರುಗಳಲ್ಲಿ ಹಬ್ಬ ಹರಿದಿನಗಳ ಸಂದರ್ಭದಲ್ಲಿ ಗೊಂಬೆರಾಮರ ನಾಟಕಗಳನ್ನು ಏರ್ಪಡಿಸುತ್ತಿದ್ದರು. ಹಣ, ದವಸಧಾನ್ಯ, ಬಟ್ಟೆಗಳ ಉಡುಗೊರೆ ನೀಡುತ್ತಿದ್ದರು. ಅಷ್ಟಾದರೆ ತಮ್ಮ ಬದುಕು ಸಾರ್ಥಕವಾಯಿತೆಂಬ ತೃಪ್ತಿ ಅವರಿಗೆ.

ಕೆಲ ದಿನಗಳ ನಂತರ ಮತ್ತೊಂದು ಊರಿಗೆ ವಲಸೆ. ಸಂತೆ ನಡೆಯುವ ಊರಾದರೆ ಸಂಪಾದನೆ ಹೆಚ್ಚು.

ಇದು ಇಪ್ಪತ್ತು ವರ್ಷಗಳ ಹಿಂದಿನ ಮಾತಾಯಿತು. ಇಂಥ ಅಲೆಮಾರಿಗಳಿಗೆ ಗರೀಬಿ ಸೈಟುಗಳನ್ನು ಹಂಚುವ ಮೂಲಕ ಸರಕಾರ ಅವರು ಒಂದು ಕಡೆ ನೆಲೆನಿಲ್ಲುವಂತೆ ಮಾಡಲು ಪ್ರಯತ್ನಿಸಿದೆ. ಪ್ರತಿಯೊಂದು ಊರಿನಲ್ಲಿ ಒಂದೆರಡು ಕುಟುಂಬಗಳಂತೆ ಗರೀಬಿ ಸೈಟುಗಳಲ್ಲಿ, ಬೇರೆ ಬೇರೆ ಊರುಗಳಲ್ಲಿ ಅವರು ನೆಲೆಸಿದ್ದಾರೆ.

ಗೊಂಬೆರಾಮ ದಂಪತಿಗಳಿಗೆ ಸಿಕ್ಕಿದ ಸಣ್ಣ ಸೈಟಿನಲ್ಲಿ ಅವರು ಒಂದು ಗುಡಿಸಲು ಕಟ್ಟಿಕೊಂಡಿದ್ದಾರೆ. ದಿನ ಭಿಕ್ಷೆ ಕಾಯಕ ಮುಂದುವರಿದಿದೆ. ಒಂದು ಕಡೆ ನೆಲೆ ನಿಂತ ಪರಿಣಾಮವಾಗಿ ಅವರ ಮಕ್ಕಳು ಅಕ್ಷರ ಕಲಿಯಲು ಸಾಧ್ಯವಾಗಿದೆ. ಅವರ ಎರಡು ಮಕ್ಕಳ ಪೈಕಿ ಆಶಾಳನ್ನು ದೂರದ ಬೆಸಗರ ಹಳ್ಳಿಗೆ ಮದುವೆ ಮಾಡಿ ಕೊಟ್ಟಿದ್ದಾರೆ. ಮಗ ಶಶಿಕುಮಾರ ಎಸ್ಸೆಸ್ಸೆಲ್ಸಿವರೆಗೆ ಓದಿ ಮಂಡ್ಯದ ಬೇಕರಿಯೊಂದರಲ್ಲಿ ಕೆಲಸದಲ್ಲಿದ್ದಾನೆ. ಮಕ್ಕಳ ಅಭಿವೃದ್ಧಿಯ ಬಗ್ಗೆ ತಂದೆ ತಾಯಿಗೆ ಸಂತೋಷ. ತಾವು ಜೀವಿಸಿರುವವರೆಗೆ ತಮ್ಮ ವೃತ್ತಿಯನ್ನು ಮುಂದುವರಿಸುತ್ತೇವೆ, ಮಕ್ಕಳು ತಮ್ಮ ಹಾಗೆ ಅಲೆಮಾರಿಗಳಾಗಬಾರದು ಎಂಬ ಆಶಯ ಅವರದು.

ಹಬ್ಬಹರಿದಿನಗಳ ಸಂದರ್ಭದಲ್ಲಿ ಅಲೆದಾಟ ಹೆಚ್ಚು. ಊರಿಂದೂರಿಗೆ ಬಿಸಿಲಿನಲ್ಲಿ ಪಯಣ ಮಾಡಬೇಕು. ಕೆಲವು ಕಡೆ ಬಸ್ಸಿನಲ್ಲಿ ಹೋಗುವುದೂ ಉಂಟು. ಕೆಲವು ಮನೆಗಳವರು ಇವರನ್ನು ಪಡಸಾಲೆಯಲ್ಲಿ ಕುಳ್ಳಿರಿಸಿ ಹಾಡು ಹೇಳಿಸುವುದುಂಟು. ರಾಮಾಯಣ, ಮಹಾಭಾರತದ ಕೆಲವು ಪ್ರಕರಣಗಳು, ಪಾರ್ವತಿ ಪರಮೇಶ್ವರ, ಬೆಟ್ಟದ ಚಾಮುಂಡಿ, ಮಲೆಯ ಮಾದಪ್ಪ – ಇತ್ಯಾದಿ ಪ್ರಸಂಗಗಳನ್ನು ಹಾಡಿನ ರೂಪದಲ್ಲಿ ಪ್ರಸ್ತುತಪಡಿಸುತ್ತಾರೆ. ಜನಪದ ಸಾಹಿತ್ಯದ ಮೌಖಿಕ ಪರಂಪರೆಗೆ ಇವರ ಕೊಡುಗೆಯೂ ಉಂಟು. ಆದರೆ ಇತ್ತೀಚೆಗೆ ಹಳ್ಳಿಯವರಿಗೆ ಯಾವುದನ್ನೂ ಪೂರ್ತಿಯಾಗಿ ಕೇಳುವ ವ್ಯವಧಾನವಿರುವುದಿಲ್ಲ. ಮೊಬೈಲು ಹಾಡುಗಳ ಗುಂಗು ಹಳ್ಳಿಯವರಿಗೆ ಇರಬಾರದೆಂದಿಲ್ಲವಲ್ಲ.

ಹಬ್ಬದ ಸಂದರ್ಭದಲ್ಲಿ ಧಾನ್ಯ ಹಣ್ಣು ಹಂಪಲು, ತಿಂಡಿ ಜೊತೆಗೆ ಹಳ್ಳಿಗರು ಹಣವನ್ನು ನೀಡುತ್ತಾರೆ. ಈ ದಂಪತಿಗಳು ಕೆಲವೊಮ್ಮೆ ದಿನಕ್ಕೆ ೨೦೦ ರೂ. ಸಂಪಾದನೆ ಮಾಡಿರುವುದುಂಟು. ಮನೆ ಭದ್ರಪಡಿಸುವುದು, ಮಗನಿಗೆ ಮದುವೆ ಮಾಡಿಸುವುದು ಮುಂತಾದವು ಇವರ ಮುಂದಿರುವ ಕನಸುಗಳು. ಮಕ್ಕಳು ಹಾಡು ಹೇಳುತ್ತ ತಂದೆ ತಾಯಿಯ ಹಿಂದೆ ಅಲೆಯುವವರಲ್ಲ.

ಮುಂದಿನ ಮನೆಯತ್ತ ಹೊರಡುವ ಮುನ್ನ ''ನಿಮ್ಮಂಥವರ ದಯ ನಮ್ಮ ಮೇಲಿರಲಿ ಸ್ವಾಮಿ!'' ಎಂದು ಹೇಳುವುದನ್ನು ಅವರು ಮರೆಯಲಿಲ್ಲ.

**ಕೆ. ಪಿ. ಸ್ವಾಮಿ**
ನಂ. ೧೬೭, ೧೦ನೇ ಮುಖ್ಯರಸ್ತೆ, ೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ, ಬೆಂಗಳೂರು - ೫೬೦ ೦೫೮

**ಕೆ. ಎಸ್. ಪಾರ್ಥಸಾರಥಿ**

# ಬಂಡವಾಳದ ಬಿಕ್ಕಟ್ಟು

**ಅಮೆರಿಕದ ಅರ್ಥನೀತಿ ವಿಫಲವಾಗಿದೆ;** ಜನತೆ ಕಷ್ಟಪಡುತ್ತಿದ್ದಾರೆ. ಇದಕ್ಕೆ ಕೆಲವು ಕಾರಣಗಳು : ಅಲ್ಲಿಯ ಮಧ್ಯಮವರ್ಗದವರಿಗೆ ಉದ್ಯೋಗವನ್ನು ನೀಡುತ್ತಿದ್ದ ಹಲವಾರು ಉದ್ಯಮಗಳನ್ನು ಅಲ್ಲಿಯ ಉದ್ಯಮಪತಿಗಳು ಹೊರದೇಶಗಳಿಗೆ ಚೀನಾ, ಭಾರತ, ಬಾಂಗ್ಲಾದೇಶ, ಬ್ರೆಜ಼ಿಲ್ ಹೀಗೆಲ್ಲಾ ಪಲ್ಲಟಗೊಳಿಸಿದರು. ಅಲ್ಲಿಯ ಸರ್ಕಾರಗಳ ನೀತಿ, ಕಾರ್ಮಿಕರಿಗೆ ನೀಡುವ ಯಃಕಶ್ಚಿತ್ ಕೂಲಿ ಇವೆಲ್ಲ ಆ ಉದ್ಯಮಗಳಿಗೆ ಅಪಾರ ಲಾಭ ತಂದುವು. ಮನೆಯಲ್ಲಿ ನಿರುದ್ಯೋಗ ಉಂಟಾಯ್ತು. (೨) ನೀತಿ ನಿರೂಪಣೆ ಮಾಡುವ ಸರ್ಕಾರ, ಸರ್ಕಾರೀ ಸಂಸ್ಥೆಗಳ ಎಲ್ಲ ವಿಧದ ನಿಯಂತ್ರಣಗಳನ್ನು ಸಡಿಲಗೊಳಿಸಿ, ಆರ್ಥಿಕ ಕ್ಷೇತ್ರದಲ್ಲಿ ಸುಗಮವಾದ ಸಾಲ, ವಂಚನೆ, ಭ್ರಷ್ಟಾಚಾರ, ಸಟ್ಟಾ, ಜೂಜು. ಊಹಾಪೋಹದ ಮಾರುಕಟ್ಟೆಗಳಿಗೆ ಮುಕ್ತ ಮಾರ್ಗ ಕಲ್ಪಿಸಿದರು. (೩) ಇದರಿಂದ ಹಣಕಾಸು ಕ್ಷೇತ್ರದಲ್ಲಿ ತೀವ್ರ ಬಿಕ್ಕಟ್ಟು ಉಂಟಾಯ್ತು. ಮತ್ತೆ ಅದೇ ನೀತಿ ನಿರೂಪಕರ ಪ್ರವೇಶ. ಇದನ್ನು ಸರಿಪಡಿಸಲು ಕೈಗೊಂಡ ಕ್ರಮಗಳು : ಜನರ ಮೇಲೆ, ಕಡಿಮೆ ಖರ್ಚು ಮಾಡುವ, ಕಡಿತ ಮಾಡುವ ಮುಗ್ಗಟ್ಟಿನ ನೀತಿಯನ್ನು ಹೇರಿದರು. ಅದೇ ಕೇಂದ್ರ ಬ್ಯಾಂಕಿನ ಅಂದರೆ ಅಮೆರಿಕದ ಫೆಡರಲ್ ಬ್ಯಾಂಕಿನ ಮುದ್ರಣಾಲಯಗಳು ಹೆಚ್ಚು ಕೆಲಸ ಮಾಡಿ, ಹೆಚ್ಚು ನೋಟುಗಳನ್ನು ಅಚ್ಚುಮಾಡಿ, ಭ್ರಷ್ಟಾಚಾರದಿಂದ ಮುಳುಗುತ್ತಿದ್ದ ಬ್ಯಾಂಕುಗಳಿಗೆ ನೆರವು ನೀಡಿ, ನಷ್ಟ ತಪ್ಪಿಸಿ ಅವನ್ನು ಬದುಕಿಸಿದುವು. ಈ ದಾಂಧಲೆಗೆ ಸಂಬಂಧಪಡದ ಸಾಧಾರಣ ಜನತೆಗೆ, ರಾಷ್ಟ್ರದ ಆರ್ಥಿಕತೆಗೆ, ಇದರಿಂದಾದ ಅನರ್ಥವನ್ನು ಅವರು ಗಣನೆಗೇ ತೆಗೆದುಕೊಳ್ಳಲಿಲ್ಲ.

ಕಳೆದ ದಶಕದಲ್ಲಿ ಅಮೆರಿಕದಲ್ಲಿ ಸುಮಾರು ೫೪,೬೨೧ ಕೈಗಾರಿಕೆಗಳು ನೆಲಕಚ್ಚಿದವು. ಇದರಿಂದ ಉಂಟಾದ ನಿರುದ್ಯೋಗ ಸುಮಾರು ೫೦ ಲಕ್ಷ. ಹಿರಿಯ, ಮಧ್ಯಮ ಮುಂತಾಗಿ ಸೊರಗಿದ ಕೈಗಾರಿಕೆಗಳ ಸಂಖ್ಯೆ ಹೀಗಿದೆ :

೧೦೦೦ಕ್ಕಿಂತ ಹೆಚ್ಚು ಕಾರ್ಮಿಕರ ಕಾರ್ಖಾನೆ ೪೦% ಮುಚ್ಚಿದ್ದು

| | |
|---|---|
| ೫೦೦ - ೧೦೦೦ | ೪೪% |
| ೨೫೦ - ೫೦೦ | ೩೭% |
| ೧೦೦ - ೨೫೦ | ೩೦% |

ಕಾರ್ಮಿಕರ ವೇತನವನ್ನು ಗಂಟೆಗೆಷ್ಟು ಸರಾಸರಿ ಎಂದು ಗಮನಿಸಿದರೆ ಇದು ಅಮೆರಿಕದಲ್ಲಿ ಸಂಬಳ + ಆರೋಗ್ಯ ವಿಮೆ + ಸಾಮಾಜಿಕ ಇವುಗಳನ್ನು ಸೇರಿಸಿ

ಒಂದು ವೇಳೆ ಗ್ರೀಸ್ ಸರ್ಕಾರ ಈ ಷರತ್ತುಗಳಿಗೆ ಒಪ್ಪದಿದ್ದರೆ, ಯೂರೋಪಿಯನ್ ಯೂನಿಯನ್ ಅದರ ಒಕ್ಕೂಟದ ನೀತಿಯಂತೆ ಮುಂದುವರಿದು ಕೆಲವು ಕ್ರಮಗಳನ್ನು ಜರುಗಿಸುತ್ತದೆ. ಗ್ರೀಸ್ ಸರ್ಕಾರ ಈ ಸಾಲ ಬೇಕೆಂದರೆ, ಮತ್ತು ಈ ಷರತ್ತುಗಳನ್ನು ಕಾರ್ಯಗತಗೊಳಿಸಲು ಅಸಮರ್ಥವಾದರೆ, ಆಗ ಆ ದೇಶದ ಕೇಂದ್ರ ಬಜೆಟ್ಟನ್ನು ಯೂರೋ ಯೂನಿಯನ್ನೇ, ಅದರ ಕೇಂದ್ರ ಬ್ಯಾಂಕಿನ ಅಧೀನದಲ್ಲಿ ತಯಾರಿಸಿ, ಕಾರ್ಯಗತಗೊಳಿಸುತ್ತದೆ. ಇದು ಆ ದೇಶದ ಸಾರ್ವಭೌಮತೆಯನ್ನು ಕಡೆಗಾಣಿಸುತ್ತದೆ ! ಬಂಡವಾಳದ ಜಾಗತಿಕ ಸ್ವರೂಪದಲ್ಲಿ ಇದಕ್ಕೆಲ್ಲ ಬೆಲೆ ಇಲ್ಲ. ಕೇವಲ ಸಾಮಾನ್ಯ ಕರೆನ್ಸಿ ಯೂರೋ ಮಾಡಿಕೊಂಡಾಕ್ಷಣ, ಯೂನಿಯನ್- ಒಕ್ಕೂಟ ಹೇಗಾಗುತ್ತದೆ ? ಅವುಗಳ ಉತ್ಪಾದನಾ ವ್ಯವಸ್ಥೆ, ಮಾರುಕಟ್ಟೆ, ವಿದೇಶಾಂಗ ನೀತಿ ಇವೆಲ್ಲಾ ಆದರೆ ತಾನೆ ? ಆದ್ದರಿಂದ ಇದೇನೂ ಸಾರ್ವಭೌಮತೆಯ ವಿಷಯವಲ್ಲ ಬಿಡಿ ಎನ್ನೋಣವೆ ?






ಗಂಟೆಗೆ ೨೩.೦೩ ಡಾಲರುಗಳು. ಚೀನಾದಲ್ಲಿ ಇದು ಸುಮಾರು ೧.೩೬ ಡಾಲರು. ಭಾರತದಲ್ಲಿ ಇದಕ್ಕಿಂತ ತುಸು ಕಡಿಮೆ. ಹಾಗೆಂದು ಅಮೆರಿಕದ ಕಾರ್ಮಿಕ ಜಗತ್ತಿನಲ್ಲಿ ಅತಿ ಹೆಚ್ಚು ಕೂಲಿ ಪಡೆಯುತ್ತಾನೆಯೇ ಅಂದರೆ ಇಲ್ಲಿ ಮುಂದುವರಿದ ಅರ್ಥವ್ಯವಸ್ಥೆಯಲ್ಲಿ ಅಮೆರಿಕದ ಕೂಲಿ ೧೪ನೆಯ ಮಟ್ಟದ್ದು. ಇದು ನಾರ್ವೆಯಲ್ಲಿ ೫೫.೪೯, ಡೆನ್‌ಮಾರ್ಕ್‌ನಲ್ಲಿ ೪೯.೫೬, ಜರ್ಮನಿಯಲ್ಲಿ ೪೮.೦೪. ಅಂದರೆ ಅಮೆರಿಕದ ಕಾರ್ಪೊರೇಟ್‌ಗಳು ತಮ್ಮ ಕಾರ್ಖಾನೆಗಳನ್ನು ಹೊರದೇಶಗಳಿಗೆ ತೆಗೆದುಕೊಂಡುಹೋದ್ದರಿಂದ ಹೇಗೆ ಅಪಾರ ಲಾಭ ಗಳಿಸುತ್ತವೆ ಎಂದು ತಿಳಿಯುತ್ತದೆ. ಇದಿಷ್ಟೆ ಅಲ್ಲ. ಚೀನದಲ್ಲಿ ಅಮೆರಿಕದ ಕಂಪನಿ ತಯಾರಿಸುವ ಬಳಕೆದಾರರ ಸರಕು ಬಹಳ ಸುಲಭದರದ್ದು; ಅದು ಅಮೆರಿಕದ ಮಾರುಕಟ್ಟೆಗೇ ಮಾರಲು ಬಂದರೆ ಆಗ ಏನಾಗುತ್ತದೆ? ಅಲ್ಲಿ ಅಳಿದುಳಿದ ಕಾರ್ಖಾನೆಗಳು ಈ ಪೈಪೋಟಿಯಲ್ಲಿ ಸೋತು ಕದಮುಚ್ಚಿಕೊಳ್ಳುತ್ತವೆ. ಅದೂ ನಿರುದ್ಯೋಗವಾಗುತ್ತದೆ. ಅದೇ ಸಮಯ ಅಮೆರಿಕದ ಕೈಗಾರಿಕೋದ್ಯಮಿಗಳಿಗೆ ವಿದೇಶೀ ವ್ಯಾಪಾರದಿಂದ ಲಾಭಕ್ಕೇನೂ ಕಡಿಮೆ ಇಲ್ಲ. ಆದರೆ ಇದು ಹಲವು ರೀತಿಯಲ್ಲಿ ಸರ್ಕಾರದ ಆದಾಯವನ್ನು ಕಡಿತಗೊಳಿಸುತ್ತದೆ. ಜಿಡಿಪಿ ಬಂದರೂ ಜನಕ್ಕೇನೂ ಪ್ರಯೋಜನವಿಲ್ಲದ ಪರಿ ಇದು.

ಅಂದಿನ ಟ್ರೆಜರಿ ಸೆಕ್ರೆಟರಿ ಮಾಯಗಾರನೆಂದೇ ಹೆಸರಾದ ಅಲೆನ್ ಗ್ರೀನ್‌ಸ್ಪಾನ್ ಮಾಡಿದ್ದೇನು? ಮನೆ ಕೊಳ್ಳಲು ಸಾಲದ ಬಡ್ಡಿ ಕಡಿಮೆ ಮಾಡಿ, ಅನೇಕ ನಿಯಂತ್ರಣಗಳನ್ನು ತೆಗೆದುಹಾಕಿದ. ಪರಿಣಾಮ ಸಾಕಷ್ಟು ಆದಾಯದ ಸಾಮರ್ಥ್ಯವಿಲ್ಲದವರೂ ಮನೆ ಕೊಳ್ಳಲು ಧಾವಿಸಿದರು. ಬೇಡಿಕೆ ಹೆಚ್ಚಿ, ಮನೆಗಳ ಬೆಲೆಯೂ ಹೆಚ್ಚಿತು. ದೇಶವೆಲ್ಲಾ ಬೆಳೆಯುತ್ತಿರುವ ಭ್ರಾಂತಿ ಉಂಟಾಯ್ತು. ಹಣಕಾಸು ಸಂಸ್ಥೆಗಳೂ ಮನೆಯ ಸಾಲಪತ್ರಗಳನ್ನು ನಂಬಬಹುದಾದ ಹೂಡಿಕೆ ಎಂದು ಹೂರಣವಿಟ್ಟು ಜಗತ್ತಿಗೆಲ್ಲ ಮಾರಿದವು, ಯೂರೋಪಿಗೂ ಮಾರಿದವು. ಕೆಲವೇ ವರ್ಷಗಳಲ್ಲಿ ಸಮಸ್ಯೆ ಬಂತು. ಕೊಟ್ಟ ಸಾಲ ಹಿಂದೆ ಬರಲಿಲ್ಲ. ನಿರುದ್ಯೋಗಿಗಳಿಗೆ, ಆದಾಯವಿಲ್ಲದವರಿಗೆ ಮನೆ ಉಳಿಸಿಕೊಳ್ಳಲಾಗಲಿಲ್ಲ. ಬ್ಯಾಂಕುಗಳು ಮನೆಯನ್ನು ಹರಾಜು ಹಾಕಿದರೆ ಕೊಳ್ಳುವವರೆ ಬರಲಿಲ್ಲ. ಅದಕ್ಕೆ ಸಂಬಂಧಪಟ್ಟ ಸಾಲ ಪತ್ರಗಳು, ಆಧಾರ ಪತ್ರಗಳು ಬೆಲೆ ಕಳೆದುಕೊಂಡು, ವಿಶ್ವಾಸ ಕಳೆದುಕೊಂಡು ಅಮೆರಿಕದಲ್ಲಲ್ಲದೆ ಜಾಗತಿಕವಾಗಿ ಹಣಕಾಸಿನ ಬಿಕ್ಕಟ್ಟಾಯ್ತು, ಷೇರುಪೇಟೆಯ, ದಳ್ಳಾಳಿಗಳ, ಬ್ಯಾಂಕುಗಳ ಒತ್ತಾಯಕ್ಕೆ ಮಣಿದ ಸರ್ಕಾರ ಭ್ರಷ್ಟ ಕಂಪನಿಗಳನ್ನು ಸಾಯಲು ಬಿಡದೆ, ಉಳಿಸಲು ಸಾರ್ವಜನಿಕ ಹಣ ನೀಡಿತು. ಅದರ ವೆಚ್ಚವನ್ನು ಸಾಧಾರಣ ಜನರ ಹೆಗಲಿಗೆ ಹಲವು ರೂಪದಲ್ಲಿ ವರ್ಗಾಯಿಸಲಾಯಿತು. ಅಮೆರಿಕದ ಶಾಲೆಗಳು, ಶಿಕ್ಷಣ ಸಂಸ್ಥೆಗಳು, ನ್ಯಾಷನಲ್ ಪಾರ್ಕು, ಆರೋಗ್ಯ ವ್ಯವಸ್ಥೆ, ಸಾರಿಗೆ, ಪೌರಾಡಳಿತ ಮುಂತಾದುವೆಲ್ಲ ಸರ್ಕಾರದ ಹಣದ ಬೆಂಬಲವಿಲ್ಲದೆ ಸೊರಗಿದವು. ಎತ್ತಿಗೆ ಜ್ವರ ಬಂದರೆ ಎಮ್ಮೆಗೆ ಬರೆ ಹಾಕಿದರು.

ಮತ್ತೊಂದು ಮಜಲಿನಲ್ಲಿ, ಸ್ಥಳೀಯ ಅಮೆರಿಕನ್ನರು ತಾಂತ್ರಿಕ ಉನ್ನತ ವಿದ್ಯಾಸಂಸ್ಥೆಗಳಿಗೆ ಪ್ರವೇಶ ಪಡೆಯುವುದು ಕಡಿಮೆ ಆಯ್ತು. ಶಿಕ್ಷಕರಿಗೆ ಅಲ್ಲಿ ಕೆಲಸವೇ ಇಲ್ಲದ ಪರಿಸ್ಥಿತಿ. ತಾಂತ್ರಿಕ ಉದ್ಯಮಗಳಿಗೆ ಸಾಕಷ್ಟು ಸ್ಥಳೀಯರು ಇಲ್ಲದ ಪರಿಸ್ಥಿತಿ. ಅದೇ ಸರ್ಕಾರ ವರ್ಷ ವರ್ಷವೂ ಹತ್ತು ಲಕ್ಷ ಜನ ಉನ್ನತ ಶಿಕ್ಷಣ ಪಡೆದವರನ್ನು ಹೆಚ್೧.ಬಿ. ವೀಸಾ ಮೂಲಕ ಆಮದು ಮಾಡಿಕೊಳ್ಳುತ್ತದೆ ಈಗ. ಸಮಾನ ಕೆಲಸ ಸಮಾನ ವೇತನದ ಹೆಸರಿನಲ್ಲಿ ಅಮೆರಿಕದವರಿಗೆ ನೀಡುವ ವೇತನವನ್ನೇ ಇವರಿಗೂ ನೀಡಬೇಕಾಯ್ತು. ಆದರೂ ಅಗತ್ಯಬಿದ್ದ ತಾಂತ್ರಿಕ ಮಟ್ಟದ ವಿದ್ಯಾವಂತರು ಸ್ಥಳೀಯವಾಗಿ ಸಿಗದೆ ಹೊರಗಿನಿಂದ ಕರೆಸಿಕೊಳ್ಳುವ ಅನಿವಾರ್ಯತೆ ಇದು. ಇದೂ ಒಂದು ಮುಖ್ಯ ಕಾರಣ ಅಮೆರಿಕದ ಅಪಾರ ನಿರುದ್ಯೋಗಕ್ಕೆ.

**ಅಮೆರಿಕದ ನಿರುದ್ಯೋಗ ಪರಿಸ್ಥಿತಿ ಹೀಗಿದೆ:** ಅದು ಶೇ. ೯-೧೦ ಎಂದು ಸರ್ಕಾರ ಹೇಳುತ್ತದೆ. ಆದರೆ ನಿರುದ್ಯೋಗ ಭತ್ಯೆ ಪಡೆಯುವವರ ಸಂಖ್ಯೆಯನ್ನು ಇದಕ್ಕೆ ಸೇರಿಸಿದರೆ ಅದೇ ಶೇಕಡ ೧೬ ರಷ್ಟಿದೆ. ಹೀಗಾಗಿ, ಅರೆಕೊರೆ ಉದ್ಯೋಗಿಗಳನ್ನು ಸೇರಿಸಿದರೆ, ವಾಸ್ತವ ನಿರುದ್ಯೋಗ ಶೇ. ೨೨ರಷ್ಟೇ ಆಗುತ್ತದೆ. ರಿಪಬ್ಲಿಕನ್ ಪಕ್ಷ ಅವರನ್ನು ಶೋಂಬೇರಿಗಳು, ಸರ್ಕಾರದ ಸವಲತ್ತುಗಳನ್ನು ಅನುಭೋಗಿಸುತ್ತಾ ನಿದ್ದೆ ಮಾಡುತ್ತಾರೆ, ನಿರುದ್ಯೋಗಿಗಳ ಸವಲತ್ತುಗಳನ್ನು ನಿಲ್ಲಿಸಿ ಎನ್ನುತ್ತದೆ. ವಾಸ್ತವ ಸಂಗತಿ ಅಂದರೆ ಅಲ್ಲಿಯ ಆರ್ಥಿಕ ವ್ಯವಸ್ಥೆ ದುರ್ಬಲವಾಗಿದೆ. ಸಾಕಷ್ಟು ಉದ್ಯೋಗ ನೀಡುವ ಸಾಮರ್ಥ್ಯವೇ ಇಲ್ಲ. ಅದಕ್ಕೆ ಅಲ್ಲಿಯ ಸರ್ಕಾರದ ನೀತಿಗಳೇ ಕಾರಣ. ಅದಕ್ಕೂ ಕಾರಣ ಅದು ವಾಲ್‌ಸ್ಟ್ರೀಟ್‌ಗೆ ಅಡಿಯಾಳಾಗಿರುವುದು.

**ಯೂರೋಪಿನಲ್ಲಿ ಏನಾಗುತ್ತಿದೆ? ನಮಗೇಕೆ ಅದರ ಇರಾದೆ?**

ಅದೇ ಬಂಡವಳಿಗ ನೀತಿ ಅನುಸರಿಸುವ ಯೂರೋಪಿನಲ್ಲಿ, ತಕ್ಷಣಕ್ಕೆ ಒದಗಿದ ಕಾರಣ: ಯೂರೋಪಿನ ಬ್ಯಾಂಕುಗಳು ಅಮೆರಿಕದ ಸಾಲ ಪತ್ರಗಳನ್ನು ಕೊಂಡುಕೊಂಡಿದ್ದವು. ಅಂದರೆ ಅದೊಂದು ಲಾಭದಾಯಕ ಹೂಡಿಕೆ ಅಂತ ಅಮೆರಿಕದ ಸಾಲ ಪತ್ರಗಳು ಆಕರ್ಷಕವೆಂದು ನ್ಯೂಯಾರ್ಕಿನ ವಾಲ್‌ಸ್ಟ್ರೀಟ್ ಎಂಬ ದಲ್ಲಾಳಿ ಪೇಟೆಯ ಕುಖ್ಯಾತ ಕ್ರೆಡಿಟ್ ರೇಟಿಂಗ್ ಸಂಸ್ಥೆ ಸ್ಟ್ಯಾಂಡರ್ಡ್ ಅಂಡ್ ಪೂರ್ ಹೇಳಿತ್ತು. ಅಮೆರಿಕದ ಸರ್ಕಾರದ ಕ್ರೆಡಿಟ್ ರೇಟಿಂಗನ್ನು ಎಎಎ ಎಂಬ ಅತ್ಯುನ್ನತಮಟ್ಟದಿಂದ ಎಎ+ ಎಂಬ ಒಂದು ಮೆಟ್ಟಿಲು ಕೆಳಗೆ ಇಳಿಸಿ ಇಡೀ ಜಾಗತಿಕ ಷೇರುಪೇಟೆಗಳ ತಲ್ಲಣ ಉಂಟು ಮಾಡಿತಲ್ಲ ಅದೇ ಸಂಸ್ಥೆ. ಆದರೆ ಇದಕ್ಕೆ ಮುಂಚೆಯೇ ಅದರ ಮಾತು ನಂಬಿ ಯೂರೋಪಿನ ಬ್ಯಾಂಕುಗಳು ತಮ್ಮ ಹೂಡಿಕೆ ಮಾಡಿದ್ದು. ಈಗ ಅಮೆರಿಕದ ಆರ್ಥಿಕತೆ, ದಳ್ಳಾಳಿ ಪೇಟೆ ಕುಸಿದಂತೆಯೇ, ಅದರ ಬೆನ್ನಿಗೆ ಯೂರೋಪಿನ ಬ್ಯಾಂಕುಗಳೂ ತಮ್ಮ ಹೂಡಿಕೆಯಲ್ಲಿ ಅಪಾರ ನಷ್ಟ ಅನುಭವಿಸಿ, ವಿಪರೀತ ಸೊರಗಿದವು. ಈಗ ಯೂರೋಪಿಯನ್ ಯೂನಿಯನ್ ನಡೆಸುವವರು ತಮ್ಮ ಬ್ಯಾಂಕುಗಳನ್ನು ರಕ್ಷಿಸಬೇಕು. ಸಾಮಾನ್ಯವಾಗಿ ದೇಶಗಳ ರಿಸರ್ವ್ ಬ್ಯಾಂಕುಗಳು ಒಂದಿಷ್ಟು ಹೊಸ ನೋಟು ಅಚ್ಚು ಹಾಕಿ, ಅದನ್ನು ಈ ಬ್ಯಾಂಕುಗಳ ಸಾಲ ಪತ್ರವನ್ನು ಕೊಂಡು, ಅವನ್ನು ತಾತ್ಕಾಲಿಕವಾಗಿ ರಕ್ಷಿಸುವುದು ವಾಡಿಕೆ. ಅಮೆರಿಕದ ಫೆಡರಲ್ ರಿಸರ್ವ್ ಅದೇ ಕೆಲಸ ಮಾಡಿತ್ತು. ಬ್ರಿಟಿಷ್ ಸರ್ಕಾರಕ್ಕೆ ತನ್ನದೇ ರಿಸರ್ವ್ ಬ್ಯಾಂಕ್ ಇದೆ. ಆದರೆ ಯೂರೋಪಿಯನ್ ಯೂನಿಯನ್ನಿನಿಂದಾಗಿ ಆಯಾಯ ರಾಷ್ಟ್ರಗಳ ಕೇಂದ್ರ ಬ್ಯಾಂಕುಗಳು ಪ್ರತ್ಯೇಕವಾಗಿ ನೋಟುಗಳನ್ನು ಅಚ್ಚು ಮಾಡುವಂತಿಲ್ಲ. ಇವುಗಳ ಸಾಮಾನ್ಯ ನಾಣ್ಯ ಈಗ 'ಯೂರೋ'. ಇದನ್ನು ಯೂರೋಪಿಯನ್ ಕೇಂದ್ರ ಬ್ಯಾಂಕು ಮಾತ್ರ ಮಾಡಬಹುದು. ಎಲ್ಲ ದೇಶದ ಎಲ್ಲ ವಿಧದ ಕೇಂದ್ರ ಬ್ಯಾಂಕುಗಳೂ ತಮ್ಮ ತಮ್ಮ ಸರ್ಕಾರದ ದಿವಾಳಿತನವನ್ನು ನೀಗಿಸುವುದಕ್ಕೋಸ್ಕರ ನೋಟು ಅಚ್ಚು ಹಾಕುವುದು ಕೂಡದು ಎನ್ನುವುದು ಬಂಡವಾಳ ವ್ಯವಸ್ಥೆಯ ಮೂಲನೀತಿ. ಆದರೆ ಈಗ ಅಮೆರಿಕದ ಫೆಡರಲ್ ರಿಸರ್ವ್, ಬ್ರಿಟನ್ನಿನ ರಿಸರ್ವ್ ಬ್ಯಾಂಕೂ ಈ ಕೆಲಸ ಮಾಡಿವೆ. ಮುಂದುವರಿದು ಯೂರೋಪಿಯನ್ ಕೇಂದ್ರ ಬ್ಯಾಂಕು ಇದೇ ಕೆಲಸ ಮಾಡುತ್ತಿದೆ. ಬಂಡವಾಳ ವ್ಯವಸ್ಥೆಯ ಮೂಲಕ್ಕೆ ಪೆಟ್ಟು ಬಿದ್ದಿದೆ. ಅದರ ಸ್ವಧರ್ಮ ಕೈಬಿಟ್ಟಿದೆ! ಶ್ರೇಯಸ್ಸೆಲ್ಲಿ ಬಂತು?

ಯೂರೋಪಿನಲ್ಲಿ ಪಿಗ್ಸ್ ದೇಶಗಳು ಅಂದರೆ ಪೋರ್ಚುಗಲ್ (ಪಿ), ಐರ್ಲೆಂಡ್ (ಐ), ಇಟಲಿ (ಐ), ಗ್ರೀಸ್ (ಜಿ), ಸ್ಪೈನ್ (ಎಸ್)ಗಳು ಸಾಲದ ಭಾರದಿಂದ ತತ್ತರಿಸುತ್ತಿವೆ. ಪಿಗ್ಸ್ ಅಂದರೆ ಹಂದಿಗಳು. ಅದು ಅನ್ವರ್ಥವೇ ಎಂದು ಗಮನಿಸುವುದು ಸದ್ಯದ ಉದ್ದೇಶವಲ್ಲ! ಅಲ್ಲಿಯ ಸರ್ಕಾರಗಳು ದಿವಾಳಿಯಾಗಿವೆ. ಅಲ್ಲಿಯ ಬ್ಯಾಂಕುಗಳು ಕಾರ್ಪೊರೇಟ್ ಪರ ನೀತಿಯಿಂದ ಮಾತ್ರವಲ್ಲದೆ, ಅಮೆರಿಕದ ಷೇರುಪೇಟೆಯ ಸಂಪರ್ಕದಿಂದ ರೋಗಗ್ರಸ್ತವಾಗಿವೆ. ಇವು ಬದುಕಬೇಕಾದರೆ ಯೂರೋಪಿಯನ್ ಕೇಂದ್ರ ಬ್ಯಾಂಕು ನೋಟು ಅಚ್ಚಿಸಿ, ಆ ಬ್ಯಾಂಕುಗಳಿಗೆ ಸಾಲ ನೀಡಬೇಕು. ಯೂರೋಪಿಯನ್ ಯೂನಿಯನ್ನಿನ ರಾಷ್ಟ್ರಗಳ ಆಂತರಿಕ ಪಾರ್ಲಿಮೆಂಟುಗಳು ಈ ಕ್ರಮಕ್ಕೆ ಬಹುಮತದಿಂದ ಒಪ್ಪಬೇಕು. ಸರ್ಕಾರಗಳ - ಸಾರ್ವಭೌಮ ಸಾಲಕ್ಕಾಗಿ, ಆರ್ಥಿಕ ನೀತಿಯನ್ನು ಕೈಬಿಟ್ಟು, ನೋಟು ಅಚ್ಚಿಸಿ ಸಾಲ ನೀಡಬೇಕು. ಇದು ಆಗುತ್ತದೆ. ಮೊದಲಿಗೆ ಈ ಪ್ರಕ್ರಿಯೆ ಗ್ರೀಸ್ ದೇಶಕ್ಕೆ ಸಂಬಂಧಪಟ್ಟಂತೆ ಆಗುತ್ತಿದೆ. ಮಿಕ್ಕವು ಒಂದೊಂದಾಗಿ ಕಾಣಿಸಿಕೊಳ್ಳುತ್ತವೆ. ಈಗಾಗಲೆ ಇಟಲಿ ಸರ್ಕಾರದ ಕ್ರೆಡಿಟ್ ರೇಟಿಂಗ್ ಅನ್ನು 'ಎಎ' ಮಟ್ಟದಿಂದ 'ಎ+' ಮಟ್ಟಕ್ಕೆ ಅದೇ ತುಡುಗ ಕ್ರೆಡಿಟ್ ರೇಟಿಂಗ್ ಕಂಪನಿ 'ಸ್ಟ್ಯಾಂಡರ್ಡ್ ಅಂಡ್ ಪೂರ್' ಇಳಿಸಿ, ಇಟಲಿಯ ದಿವಾಳಿತನದತ್ತ ಓಟಕ್ಕೆ ಪ್ರಾರಂಭ ನೀಡಿದೆ. ಯೂರೋಪಿನ ಷೇರುಪೇಟೆಗೆ ಮತ್ತೊಂದು ಪೆಟ್ಟು ನೀಡಿದೆ.

ಗ್ರೀಸ್ ದೇಶದಲ್ಲಿ ಒಲಿಂಪಿಕ್ಸ್ ಆಟ ಅದ್ಭುತವಾಗಿ ನಡೆಯಿತು ಹನ್ನೆರಡು ವರ್ಷಗಳ ಹಿಂದೆ. ಜ್ಞಾಪಕವಿದೆಯಲ್ಲ? ನಮಗೆಲ್ಲ ವಿಸ್ಮಯ ಈ ಒಂದು ಪುಟ್ಟ ದೇಶ ಅದನ್ನು ಮಾಡಿತಲ್ಲ, ನಾವೆಂಥವರು ಎಂದುಕೊಂಡಿದ್ದೇವಲ್ಲವೆ! ಈ ಒಲಿಂಪಿಕ್ ಎಂಬ ಮಹಾಸ್ಪರ್ಧೆ ವಾಸ್ತವದಲ್ಲಿ ಕಾರ್ಪೊರೇಟ್ ಜಗತ್ತು ತನ್ನ ವಿಜಯವನ್ನು ಸಾರುವ ದೊಡ್ಡ ಹಬ್ಬ. ಚೀನಾ ಅದನ್ನೇ ಪ್ರದರ್ಶಿಸಿದ್ದು. ಹೆಸರಿಗೆ ಸೋಷಿಯಲಿಸ್ಟ್ ಎಂದು ಹೆಸರಿಟ್ಟುಕೊಂಡು ಅಧಿಕಾರಕ್ಕೆ ಬರುವ ಯೂರೋಪಿನ ಪಕ್ಷಗಳು ಅವುಗಳ ವಿರೋಧಿ ಪಕ್ಷಗಳಿಗಿಂತ ಏನೂ ಭಿನ್ನವೇ ಅಲ್ಲ.



ಈಗಲೂ ಗ್ರೀಸ್‌ನಲ್ಲಿ ಸೋಷಿಯಲಿಸ್ಟ್ ಪಕ್ಷವೇ ಅಧಿಕಾರದಲ್ಲಿರುವುದು. ಫ್ರಾನ್ಸಿನ, ಜರ್ಮನಿಯ, ನೆದರ್‌ಲ್ಯಾಂಡಿನ ಬ್ಯಾಂಕುಗಳೇ ಬಹಳ ಪ್ರಬಲವಾದ ಯೂರೋಪಿನ ಹಾಗೂ ಜಾಗತಿಕ ಮಟ್ಟದ ಬ್ಯಾಂಕುಗಳು. ಇವುಗಳ ಉದ್ಯಮಿಗಳೇ ಗ್ರೀಸ್‌ನಲ್ಲೂ ಬಂಡವಾಳ ಹೂಡಿ, ಅದರ ಆರ್ಥಿಕತೆಯನ್ನು ಬೆಳೆಸಿದ್ದು. ಜಾಗತಿಕವಾದ ಆರ್ಥಿಕ ಕುಸಿತದ ಹಿನ್ನೆಲೆಯಲ್ಲಿ ಒಲಿಂಪಿಕ್ಸ್ ನಡೆಸಿದ ವಿದೇಶೀ ಬಂಡವಾಳಾಧಾರಿತದ ಸ್ಥಳೀಯ ಆರ್ಥಿಕತೆ ಅನಾಮತ್ತಾಗಿ ಕುಸಿದು, ಗ್ರೀಸಿನ ಸರ್ಕಾರ ದಿವಾಳಿಯಾಗಿದೆ. ಆರ್ಥಿಕತೆ ಸತ್ತಿದೆ. ಅದರ ವಿದೇಶೀ ಬಂಡವಾಳದ ತೊತ್ತಿನ ಬ್ಯಾಂಕುಗಳು ನೆಲ ಕಚ್ಚಿವೆ. ಸರ್ಕಾರದ ಸಾಲ ಅದರ ಜಿಡಿಪಿಗಿಂತ ಹೆಚ್ಚಿದೆ. ಈಗ ಯೂರೋಪಿಯನ್ ಕೇಂದ್ರ ಬ್ಯಾಂಕು (ಇಸಿಬಿ) ಸಾಲ ನೀಡಿ ಸರ್ಕಾರವನ್ನು ಬದುಕಿಸಬೇಕಾದರೆ ಅದು ಷರತ್ತುಗಳನ್ನು ವಿಧಿಸುತ್ತದೆ. ಸರ್ಕಾರದ ದುಂದುವೆಚ್ಚವನ್ನೆಲ್ಲಾ ಕೂಡಲೆ ನಿಲ್ಲಿಸಬೇಕು. ಅದರ ವರಮಾನ ಹೆಚ್ಚಿಸುವ ಮಾರ್ಗ ಹಿಡಿಯಬೇಕು. ಹಾಗೆಂದರೇನು? ನಮ್ಮ ದೇಶದಲ್ಲಿ ಸಬ್ಸಿಡಿಗಳನ್ನು ಕಡಿಮೆ ಮಾಡಿ, ನಿಲ್ಲಿಸಿ, ಕಾರ್ಮಿಕರ ಸಂಬಳ ಹೆಚ್ಚಿಸಬೇಡಿ, ಕಡಿಮೆಮಾಡಿ, ನಿಧಾನಮಾಡಿ, ಬಾಕಿ ಉಳಿಸಿ, ಪಿಂಚಣಿ ಹಣವನ್ನು ಮಾರುಕಟ್ಟೆಗೆ ನೀಡಿ, ಜೀವವಿಮೆ ಹಣ ಪಾವತಿ ನಿಧಾನ ಮಾಡಿ, ಸರ್ಕಾರಿ ಆಸ್ಪತ್ರೆ, ಶಾಲೆ, ಸಾರಿಗೆ ಮುಚ್ಚಿ ಖಾಸಗೀಕರಣಗೊಳಿಸಿ, ಉದ್ಯೋಗ ಖಾತರಿ ನಿಲ್ಲಿಸಿ, ವೃದ್ಧಾಪ್ಯ ವೇತನ ನಿಲ್ಲಿಸಿ ಮುಂತಾದುವೆಲ್ಲ ಒಟ್ಟಿಗೆ ಬಂದು ತದಕಿದರೆ ಹೇಗೆ? ಸೇಲ್ಸ್ ಟ್ಯಾಕ್ಸ್, ಸರ್ವೀಸ್ ಟ್ಯಾಕ್ಸ್ ಮುಂತಾಗಿ ಸಾಮಾನ್ಯ ಬಳಕೆಯ ಎಲ್ಲ ಸರಕುಗಳ ಮೇಲೂ ತೆರಿಗೆ ಹೆಚ್ಚಿಸಿ ಎಂದರೆ ಹೇಗಿರುತ್ತದೆ? ಸೊರಗಿರುವ ಬ್ಯಾಂಕುಗಳಿಗೆ ಕೇಂದ್ರ ಬ್ಯಾಂಕು ಬಡ್ಡಿ ಇಲ್ಲದೆ, ಅಥವಾ ಕನಿಷ್ಠ ಬಡ್ಡಿಯಲ್ಲಿ ಅಗತ್ಯವಿದ್ದಷ್ಟು ಸಾಲ ನೀಡಿ, ಅವರು ಉದ್ಯಮಗಳಿಗೆ ಸಾಲ ನೀಡಿ, ಉದ್ಯಮಗಳ ಸಾಲ ಮನ್ನಾ ಮಾಡಿ ಅಂದರೆ ಹೇಗಿರುತ್ತದೆ? ಅರ್ಥಾತ್ ಬಂಡವಾಳ ವ್ಯವಸ್ಥೆ ಸಮಾಜವಾದೀಯ ಸರ್ಕಾರ ಬರುವುದನ್ನು ತಪ್ಪಿಸಲು ಸುಕ್ಷೇಮ ಸರ್ಕಾರ – ವೆಲ್‌ಫೇರ್ ಸ್ಟೇಟ್ ಅಂತ ಪರ್ಯಾಯ ಸೂಚಿಸಿತ್ತಲ್ಲ? – ಅದರ ಎಲ್ಲ ಲಕ್ಷಣಗಳನ್ನು ಒಂದೇ ಏಟಿಗೆ ತೊಡೆದುಹಾಕಲು, ಕಡಿದು ಹಾಕಲು ಮುಂದಾಗುತ್ತಿದೆ ಬಂಡವಾಳ ವ್ಯವಸ್ಥೆ. ಅದೇ ಕಾರಣ ಗ್ರೀಸಿನ ಜನ ರೊಚ್ಚಿಗೆದ್ದಿದ್ದಾರೆ; ಬೀದಿಯಲ್ಲಿ ನೆರೆದಿದ್ದಾರೆ, ಮಲಗಿದ್ದಾರೆ, ತಮ್ಮ ಸರ್ಕಾರವನ್ನು ವಿರೋಧಿಸುತ್ತಿದ್ದಾರೆ. ಪೊಲೀಸರಿಂದ ಹೊಡೆಸಿಕೊಳ್ಳುತ್ತಿದ್ದಾರೆ. ಇದೇನೂ ಮಾನವ ಹಕ್ಕುಗಳ ಉಲ್ಲಂಘನೆಯಲ್ಲ ಬಿಡಿ!

ಒಂದು ವೇಳೆ ಗ್ರೀಸ್ ಸರ್ಕಾರ ಈ ಷರತ್ತುಗಳಿಗೆ ಒಪ್ಪದಿದ್ದರೆ ಯೂರೋಪಿಯನ್ ಯೂನಿಯನ್ ಅದರ ಒಕ್ಕೂಟದ ನೀತಿಯಂತೆ ಮುಂದುವರಿದು ಕೆಲವು ಕ್ರಮಗಳನ್ನು ಜರುಗಿಸುತ್ತದೆ. ಗ್ರೀಸ್ ಸರ್ಕಾರ ಈ ಸಾಲ ಬೇಕೆಂದರೆ, ಮತ್ತು ಈ ಷರತ್ತುಗಳನ್ನು ಕಾರ್ಯಗತಗೊಳಿಸಲು ಅಸಮರ್ಥವಾದರೆ, ಆಗ ಆ ದೇಶದ ಕೇಂದ್ರ ಬಜೆಟ್ಟನ್ನು ಯೂರೋ ಯೂನಿಯನ್ನೇ, ಅದರ ಕೇಂದ್ರ ಬ್ಯಾಂಕಿನ ಅಧೀನದಲ್ಲಿ ತಯಾರಿಸಿ, ಕಾರ್ಯಗತಗೊಳಿಸುತ್ತದೆ. ಇದು ಆ ದೇಶದ ಸಾರ್ವಭೌಮತೆಯನ್ನು ಕಡೆಗಾಣಿಸುತ್ತದೆ! ಬಂಡವಾಳದ ಜಾಗತಿಕ ಸ್ವರೂಪದಲ್ಲಿ ಇದಕ್ಕೆಲ್ಲ ಬೆಲೆ ಇಲ್ಲ. ಕೇವಲ ಸಾಮಾನ್ಯ ಕರೆನ್ಸಿ ಯೂರೋ ಮಾಡಿಕೊಂಡಾಕ್ಷಣ, ಯೂನಿಯನ್-ಒಕ್ಕೂಟ ಹೇಗಾಗುತ್ತದೆ? ಅವುಗಳ ಉತ್ಪಾದನಾ ವ್ಯವಸ್ಥೆ, ಮಾರುಕಟ್ಟೆ, ವಿದೇಶಾಂಗ ನೀತಿ ಇವೆಲ್ಲಾ ಆದರೆ ತಾನೆ? ಆದ್ದರಿಂದ ಇದೇನೂ ಸಾರ್ವಭೌಮತೆಯ ವಿಷಯವಲ್ಲ ಬಿಡಿ ಎನ್ನೋಣವೆ?

ಈ ಯೂರೋಪಿಯನ್ ಯೂನಿಯನ್ ನೀತಿಯನ್ನು ಜಾರಿಗೊಳಿಸುವುದರಿಂದ ವಾಸ್ತವದಲ್ಲಿ ಆಗುವುದೇನು? ಜರ್ಮನಿಯ, ಫ್ರಾನ್ಸಿನ, ನೆದರ್‌ಲ್ಯಾಂಡಿನ ಪ್ರಬಲ ಬ್ಯಾಂಕುಗಳ ಸಾಲ ಬಾಕಿ ವಸೂಲಾಗುತ್ತದೆ ಅಷ್ಟೆ. ಅಮೆರಿಕದಲ್ಲೂ ಕೇಂದ್ರ ಸರ್ಕಾರದ ಆದಾಯದಿಂದ ಅಲ್ಲಿಯ ಸಾಯುತ್ತಿದ್ದ ಬ್ಯಾಂಕುಗಳಿಗೆ ಜೀವ ತುಂಬಲಾಯ್ತು. ಇಲ್ಲೆಲ್ಲ ಬಳಸುವ ಒಂದು ಪದ ''ಟೂ ಬಿಗ್ ಟು ಫೇಯಿಲ್'' – ''ಅವುಗಳು ತೀರ ದೊಡ್ಡವು, ಅವನ್ನು ಸಾಯಲು ಬಿಡಬಾರದು'' ಎನ್ನುತ್ತದೆ ಈ ನೀತಿ. ಹಾಗಾದರೆ ಬಂಡವಾಳದ ಸ್ವಭಾವವೇ ಆದ ಏಕಸ್ವಾಮ್ಯವೇ ಈ ಟೂ ಬಿಗ್ ಆಗಿ ಬೆಳೆಯುವುದಕ್ಕೆ ಕಾರಣವಾದರೆ ಪುನಃ ಪುನಃ ಟೂ ಬಿಗ್‌ಗಳು ಬೆಳೆಯದಂತೆ ನೋಡಿಕೊಳ್ಳಬೇಡವೆ? ಪ್ರಜಾಪ್ರಭುತ್ವವೇ ಬಂಡವಾಳ ವ್ಯವಸ್ಥೆಯ ಅಂತರಂಗ ಎಂದು ಬೊಗಳುವವರಿಗೆ ಒಂದು ಸವಾಲು – ಏಕಸ್ವಾಮ್ಯ ಪ್ರಜಾಪ್ರಭುತ್ವ ವಿರೋಧಿ – ನಿಮಗೆ ಪ್ರಜಾಪ್ರಭುತ್ವ ಬೇಕೋ, ಏಕಸ್ವಾಮ್ಯ ಬೇಕೋ ಆರಿಸಿಕೊಳ್ಳಿ. ಆ ಆಯ್ಕೆಗೆ ತಕ್ಕಂಥ ಬದಲಾವಣೆಗಳನ್ನು ತನ್ನಿರಲ್ಲ! ವೆಲ್‌ಫೇರ್ ಸ್ಟೇಟ್, ಕೀನ್ಸ್‌ನ ಅರ್ಥಶಾಸ್ತ್ರ ಇವೆಲ್ಲ, ಸಮಾಜವಾದದ ಸವಾಲಿಗೆ, ಆತ್ಮರಕ್ಷಣೆಯ ಅಸ್ತ್ರವಾಗಿ ಉದಿಸಿದ್ದು, ಇವೆಲ್ಲ ಈಗ ಸೋತಿರುವುದರ ಸೂಚನೆ ಇಂದಿನ ಅಂತರ ರಾಷ್ಟ್ರೀಯ ಬಂಡವಾಳ ಲೋಕದ ತತ್ತರ. ಬಂಡವಾಳ ವ್ಯವಸ್ಥೆ ಕಳಿತು, ಕೊಳೆತು, ಕಳಚಿ ಬೀಳುವುದರಲ್ಲಿದೆಯೆ? ಮಾರುಕಟ್ಟೆಗಳು, ಉದ್ಯೋಗ ಅವಕಾಶಗಳು ಜಾಗತಿಕವಾಗಿಲ್ಲ. ಆದರೆ ಸಾಮಾನ್ಯ ಜನತೆಯ ಸಂಕಷ್ಟ ಸರಮಾಲೆ ಸಂಪೂರ್ಣ ಜಾಗತಿಕವಾಗಿದೆ ಇಂದು. ಬಂಡವಾಳದ ಅಸಮಾನ ಜಾಗತೀಕರಣವೂ ಇದಕ್ಕೆ ಕಾರಣ.

ಗ್ರೀಸಿನ ಸಾಮಾನ್ಯ ಜನ ಏನು ಬಯಸುತ್ತಾರೆ? ಅವರು ಹೇಳುವುದು: ಉದ್ಯಮ ಲೋಕದ ಸಾಯುವ ಸಂಸ್ಥೆಗಳನ್ನು ಸಾಯಲು ಬಿಡಿ. ಅದು ಅವುಗಳ ಸಹಜ ಸಾವು. ನಮ್ಮ ಆರ್ಥಿಕತೆ ಬಿದ್ದುಹೋಗುತ್ತದೆಯೆ? ಬೀಳಲಿ ಬಿಡಿ. ಹೇಗೂ ಅದು ನಮ್ಮ ಬಹುಜನರಿಗೆ ಹಿತಕರವಲ್ಲ. ನಾವು ಪುನಃ ನಮ್ಮ ಸ್ವತಂತ್ರ ಸರಳ ಜೀವನಕ್ರಮವನ್ನು ನಿರೂಪಿಸಿ ಕೊಳ್ಳುತ್ತೇವೆ. ಅದರಲ್ಲಿ ಅತಿ ಶ್ರೀಮಂತರಿರುವುದಿಲ್ಲ ಅಷ್ಟೆ. ನಾವೆಲ್ಲರೂ ಸಾಕಷ್ಟು ಜೀವನ ಸೌಕರ್ಯಗಳನ್ನು ಕಲ್ಪಿಸಿಕೊಂಡು ನೆಮ್ಮದಿಯ ಜೀವನ ಈ ಹಿಂದೆಯೂ ನಡೆಸುತ್ತಿದ್ದೆವು. ನೀವು ಅದನ್ನು ಹಾಳುಗೆಡಹಿದಿರಿ. ಈಗ ಹಿಂದೆ ಸರಿಯಿರಿ. ನಮ್ಮ ಕೆಲಸ ನಾವೇ ನಡೆಸಿ ಕೊಳ್ಳುತ್ತೇವೆ. ಅದು ಅಲ್ಲಿಯ ಜನತೆಯ ನಿಲುವು. ಯೂರೋಪಿಯನ್ ಯೂನಿಯನ್ ಚದುರಿಹೋಗುವುದಲ್ಲ ಅಂತೀರಾ? ಅದರಿಂದೇನು ಜನತೆಗೆ ಪ್ರಯೋಜನ? ಯೂರೋಪಿನ ಕೆಲ ರಾಷ್ಟ್ರಗಳ ಬೃಹದುದ್ಯಮಿಗಳ ಸಂಘವಷ್ಟೆ ಅದು. ಶತಮಾನಗಳ ಕಾಲ ಈ ಎಲ್ಲ ದೇಶದ ಬೃಹದುದ್ಯಮಿಗಳೂ ಪರಸ್ಪರ ಕಾದಾಡಿದರು. ಮಹಾಯುದ್ಧಗಳನ್ನು ಮಾಡಿದರು. ಅದಕ್ಕೆ ದೇಶಪ್ರೇಮದ ಇತರ ಪ್ರೇಮಗಳ ಮಂಕುಬೂದಿ ಎರಚಿದ್ದರು. ಸತ್ತು ಸುಣ್ಣವಾದ ಉದ್ಯಮಿಗಳು, ಈಗ, ಪರಸ್ಪರ ಸ್ವಾರ್ಥ ವ್ಯವಸ್ಥೆಯ ರಕ್ಷಣೆಗೆ ಯೂನಿಯನ್ ಪ್ರಯೋಗ ಮಾಡುತ್ತಿದ್ದಾರೆ. ಇದು ಕುಸಿದುಬಿಟ್ಟರೆ ಸಾಮಾನ್ಯ ಜನತೆಗೆ ಏನಾಗಬೇಕು? ನಿಮ್ಮಿಂದ ಅಂತೂ ಹರಿಯಲಿಲ್ಲ, ನಾವು ಏನಾದರೂ ಮಾಡ್ಕೊತೀವಿ ಬಿಡಿ ಎನ್ನುವ ನಿಲುವು ಇದು. ಇಸ್ರೇಲ್, ಬ್ರಿಟನ್, ವಾಲ್‌ಸ್ಟ್ರೀಟ್, ಪಶ್ಚಿಮ ಏಷ್ಯಾ, ಭಾರತ, ಗ್ರೀಸ್, ಸ್ಪೇಯಿನ್ ಎಲ್ಲೆಲ್ಲೂ ದಾರಿಕಾಣದ ಸಾಮಾನ್ಯಜನ ಉದ್ದೇಶ ಸ್ಪಷ್ಟವಿಲ್ಲದೆಯೂ ಬೀದಿಗೆ ಬಿದ್ದು ಪ್ರತಿಭಟಿಸುತ್ತಿದ್ದಾರೆ.

**ನಮಗೇಕೆ ಇದರ ಉಸಾಬರಿ?**

ಬಂಡವಳಿಗ ವ್ಯವಸ್ಥೆಯ ಉತ್ಪಾದನಾ ವ್ಯವಸ್ಥೆ, ಲಾಭ ಗಳಿಸುತ್ತಿದ್ದರೂ ಉತ್ಪಾದನೆ ಏಕೆ ಪದೇ ಪದೇ ಕುಸಿಯುತ್ತದೆ, ದಿವಾಳಿಯಾಗುತ್ತದೆ? ಅದು ತಿಳಿದರೆ, ಏಕೆ ಈ ವ್ಯವಸ್ಥೆ ಸರಿಯಾದ ಮಾದರಿಯಲ್ಲ ಎಂದು ತಿಳಿದರೆ, ಅದಕ್ಕೆ ಪರ್ಯಾಯ ಚಿಂತಿಸುವುದು ಸಾಧ್ಯ. ಅದು ಅನಿವಾರ್ಯ, ಕರ್ಮ, ಬೇರೆ ದಾರಿ ಇಲ್ಲ ಎಂದು ಸಹಿಸಿಕೊಂಡರೆ ಅದೂ ಒಂದು ಮಾರ್ಗವೆ! ಶೋಷಣೆಯೂ ಶೋಷಕರೂ ಸಹಜವೇ ಎಂದು ಹಾಯಾಗಿರಬಹುದು. ಸ್ವಾಮೀಜಿ ಬಳಿಗೆ ಧಾವಿಸಬಹುದು ಮನಃಶಾಂತಿಗೆ. ಅವನು ವ್ಯವಸ್ಥೆಯನ್ನು ಕಾಪಾಡಲು ನೀಡುವ ಪ್ರಸಾದ ಸ್ವೀಕರಿಸಿ ಪದೇ ಪದೇ ನಯವಂಚನೆಗೆ ಒಳಗಾಗಬಹುದು. ಯಾವುದರಲ್ಲೇ ಆಗಲಿ, ಸರಿಯಾದ ತಿಳುವಳಿಕೆಯನ್ನು ಪಡೆಯುವುದು ಬದಲಾವಣೆ ಬಯಸುವವರಿಗೆ ಅಗತ್ಯ. ನಮಗೇಕೆ ಈ ಎಲ್ಲದರ ಉಸಾಬರಿ ಅಂತೀರಾ? ಕಾರಣ ನಮ್ಮ ನಾಯಕರೂ ಅದೇ ದಾರಿ ಹಿಡಿದಿದ್ದು, ಅದೇ ಪರಿಣಾಮ ನಮ್ಮೆಲ್ಲರ ಮೇಲೆ ಆಗುವುದರಲ್ಲಿದೆ. ಭ್ರಷ್ಟಾಚಾರದ ಗಲಾಟೆ ಕೇವಲ ಬಂಡವಳಿಗರ ಮಧ್ಯದ ಹಂಚಿಕೆಯ ಜಗಳವಷ್ಟೆ. ಭಾಜಪಕ್ಕೆ ಮನಮೋಹನರನ್ನೇ ಪ್ರಧಾನಿಯಾಗಿ ಸ್ವೀಕರಿಸಲೂ ಅಡ್ಡಿಯಿರುವುದಿಲ್ಲ, ಕಾರಣ ಅವರು ಕಾಂಗ್ರೆಸ್ ಪಕ್ಷದ ಆರ್ಥಿಕ ನೀತಿಯನ್ನು ವಿರೋಧಿಸುತ್ತಿಲ್ಲ. ನಮ್ಮ ಬೂರ್ಷ್ವಾ ಪಕ್ಷಗಳು ಬಂಡವಳಿಗರ ಪರವಾದ ಕೇವಲ ಲಾಬಿಗಳಷ್ಟೆ. ಹಾಗಾದರೆ ಜನತೆಯ ಪರವಾದ ರಾಜಕೀಯ ಸಂಘಟಿಸುವುದು ಹೇಗೆ? ಅದೇ ನಮ್ಮ ಮುಂದಿನ ಸಮಸ್ಯೆ.



ಕೆ. ಎಸ್. ಪಾರ್ಥಸಾರಥಿ
#೨೯೭, 'ಬೆಳಕು', ವನಸಿರಿ ಬಡಾವಣೆ,
ವಿದ್ಯಾನಗರ, ಬೆಟ್ಟಹಲಸೂರು ಅಂಚೆ,
ಬೆಂಗಳೂರು-೫೬೨ ೧೫೭



ನಭಾವಲೋಕನ

# ಪೂರ್ವದಲ್ಲೊಂದು; ಪಶ್ಚಿಮದಲ್ಲೊಂದು

ಇದೀಗ ಸಂಜೆಯ ಆಕಾಶದಲ್ಲಿ ಚುಕ್ಕೆಗಳ ಸಂಭ್ರಮ; ಪಶ್ಚಿಮದಲ್ಲಿ ಕಾಣುವ ಶುಕ್ರ ಗ್ರಹವನ್ನು ಗುರುತಿಸಲು ಯಾರ ನೆರವೂ ಬೇಕಿಲ್ಲ. ಹಾಗೆಯೇ ಪೂರ್ವಕ್ಕೆ ತಿರುಗಿದರೆ ಅಲ್ಲಿ ಶುಕ್ರದ ಪ್ರತಿಸ್ಪರ್ಧಿಯಂತೆ ಕಾಣುವ ಇನ್ನೊಂದು ಚುಕ್ಕೆ - ಅದೇ ಗುರುಗ್ರಹ. ನೀಲಿ ಆಕಾಶದ ಶುಭ್ರ ಹಿನ್ನೆಲೆಯಲ್ಲಿ ಪಶ್ಚಿಮದ ಅಂಚಿನಲ್ಲಿ ಬುಧ ಗ್ರಹವನ್ನೂ ಗುರುತಿಸಬಹುದು. ಶುಕ್ರ ಮತ್ತು ಜ್ಯೇಷ್ಠಾ ನಕ್ಷತ್ರಗಳ ಜೊತೆ ಆಟವಾಡುವ ಈ ಚುಕ್ಕೆ ದಿನೇ ದಿನೇ ಮೇಲೇರುವುದನ್ನು ಕಾಣಬಹುದು. ೧೪ರಂದು ಗರಿಷ್ಠ ಎತ್ತರದಲ್ಲಿ ಕಾಣುತ್ತದೆ. ಆ ನಂತರ ಪುನಃ ದಿಗಂತದತ್ತ ಸರಿಯುವುದು. ಅಷ್ಟು ಹೊತ್ತಿಗಾಗಲೇ ಜ್ಯೇಷ್ಠಾ ಇನ್ನೂ ಕೆಳಗೆ ಸರಿದು ಸಂಧ್ಯಾ ಪ್ರಕಾಶದಲ್ಲಿ ಕರಗಿಹೋಗುವುದು.

ಮಂಗಳ ಮತ್ತು ಶನಿ ಗ್ರಹಗಳು ಬೆಳಗಿನ ಜಾವ ಕಾಣುವುವು. ಮಂಗಳ ಸಿಂಹರಾಶಿಯಲ್ಲಿನ ಹೊಸ ಚುಕ್ಕೆಯಾಗಿ ಕಾಣುವುದು. ಮಘ ನಕ್ಷತ್ರದ ಪಕ್ಕ ಅದು ಹಾದು ಹೋಗುವುದನ್ನು ಗುರುತಿಸುವ ಪ್ರಯತ್ನ ಮಾಡಬಹುದು. ಮಘದ ಬಣ್ಣ ನೀಲಿ; ಮಂಗಳದ್ದು ಕೆಂಪು. ಹಾಗೆಯೇ ಶನಿಗ್ರಹವೂ ಚಿತ್ರಾದ ಪಕ್ಕದಲ್ಲಿ ಕಾಣುವುದು.




ಸಂಜೆಯ ಶುಭ್ರಾಕಾಶದಲ್ಲಿ ಧನು ರಾಶಿ ನಿಮ್ಮ ಗಮನ ಸೆಳೆಯುವುದು. ಅಲ್ಲಿ ಆಕಾಶಗಂಗೆಯ ಕೇಂದ್ರಭಾಗವನ್ನು ನೋಡಬಹುದು. ಇಲ್ಲಿಂದ ಹೊರಡುವ ನದಿಯ ಒಂದು ಭಾಗ ಉತ್ತರಕ್ಕೆ ಗರುಡ (ಅಕ್ವಿಲಾ) ಮತ್ತು ರಾಜಹಂಸ (ಸಿಗ್ನಸ್) ಪುಂಜಗಳ ಮೂಲಕ ಹಾದುಹೋಗುವುದು. ಮುಂದೆ ಈಶಾನ್ಯಕ್ಕೆ ತಿರುಗಿ ಕುಂತಿ (ಕ್ಯಾಸಿಯೋಪಿಯಾ), ಪಾರ್ಥ (ಪರ್ಸಿಯುಸ್) - ಈ ಪುಂಜಗಳ ಮೂಲಕ ಹರಿಯುವುದು. ನೆತ್ತಿಯ ಮೇಲೆ ನಕುಲ (ಪೆಗಸಸ್) ಕಾಣುವುದು. ಅದಕ್ಕೆ ತುಸು ದಕ್ಷಿಣದಲ್ಲಿ ಕುಂಭ, ಮಕರಗಳು ಕ್ಷೀಣವಾಗಿರುವುವು. ಇನ್ನೂ ದಕ್ಷಿಣಕ್ಕೆ ಕಾಣುವ ಎರಡು ನಕ್ಷತ್ರಗಳು ಬಕ (ಗ್ರುಸ್) ಎಂಬ ಪುಂಜದ್ದು.

ಈ ತಿಂಗಳ ೨೫ಕ್ಕೆ ಪಾರ್ಶ್ವ ಸೂರ್ಯಗ್ರಹಣವಿದೆ; ಆದರೆ ಚಂದ್ರನ ನೆರಳು ದೂರದ ಅಂಟಾರ್ಕ್ಟಿಕಾ ಮೇಲೆ ಬೀಳಲಿದೆ. ಭಾರತೀಯ ಕಾಲಮಾನ ಪ್ರಕಾರ ೦೯:೫೩ಕ್ಕೆ ಆರಂಭವಾಗಿ ೧೩:೪೭ಕ್ಕೆ ಅಂದರೆ ನಮ್ಮ ಹಗಲಿನಲ್ಲೇ ನಡೆಯುವುದಾದರೂ ನಮಗೆ ಕಾಣುವುದಿಲ್ಲ.

ಈ ತಿಂಗಳ ಹುಣ್ಣಿಮೆಯ ಚಂದ್ರನ ಫೋಟೋ ತೆಗೆಯುವುದನ್ನು ಅಭ್ಯಾಸ ಮಾಡಿಕೊಳ್ಳಿ; ಎಕ್ಸ್‌ಪೋಷರ್, ಷಟರ್ ಸ್ಪೀಡ್ ಮುಂತಾದ ವಿವರಗಳನ್ನು ಬರೆದಿಟ್ಟುಕೊಳ್ಳಿ. ಬರುವ ತಿಂಗಳಿನ ಚಂದ್ರಗ್ರಹಣದ ಫೋಟೋ ತೆಗೆಯಲು ಇದು ಉಪಯೋಗವಾಗುತ್ತದೆ.

ಜೆರಾಡ್ ಎಂಬ ಧೂಮಕೇತು ಹರ್ಕುಲಿಸ್ (ಭೀಮ) ಪುಂಜದಲ್ಲಿದೆ. ಅಕ್ಟೋಬರ್‌ನಲ್ಲಿ ದುರ್ಬೀನಿಗೆ ಕಾಣುವಷ್ಟು ಪ್ರಕಾಶ ಪಡೆದಿದ್ದು ಮುಂದೆ ಇನ್ನೂ ಪ್ರಕಾಶ ಪಡೆಯುವ ಸಾಧ್ಯತೆ ಇದೆ. ಪ್ರತಿ ಮೂರು ವರ್ಷಗಳಿಗೊಮ್ಮೆ ಬಂದು ಹೋಗುವ ಎನ್ಕೆ ಎಂಬ ಕ್ಷೀಣ ಧೂಮಕೇತುವಿನ ತುಣುಕುಗಳು ನವೆಂಬರ್ ಮೊದಲ ವಾರದಲ್ಲಿ ಉಲ್ಕೆಗಳಾಗಿ ಬೀಳಲಿವೆ. ಗಂಟೆಗೆ ೫-೧೦ ಬೀಳಬಹುದು. ನವೆಂಬರ್ ೧೬-೧೮ಕ್ಕೆ ಲಿಯೋನಿಡ್ಸ್ ಉಲ್ಕೆಗಳನ್ನು ನೋಡಲು ಒಳ್ಳೆಯ ಅವಕಾಶವಿದೆ. ಟೆಂಪಲ್ ಟಟಲ್ ಎಂಬ ಧೂಮಕೇತುವಿನ ತುಣುಕುಗಳು ಇವು. ಮಂಗಳ ಗ್ರಹವೂ ಸಿಂಹ ರಾಶಿಯಲ್ಲೇ ಇದೆ. ಆದ್ದರಿಂದ ಸಿಂಹರಾಶಿಯನ್ನು ಹುಡುಕಲು ಕಷ್ಟವಾಗಲಾರದು. ಆ ದಿಕ್ಕಿನಿಂದ ಹೊರಟಂತೆ ಗಂಟೆಗೆ ೧೫-೨೦ ಉಲ್ಕೆಗಳು ನೀಲಿ ಹಸಿರು ಬಣ್ಣದ್ದಾಗಿ ಕಾಣಬಹುದು.

**ಖಗೋಳ ದಿನಚರಿ**

ನವೆಂಬರ್ ೨ ಚಾಂದ್ರಮಾಸದ ಮೊದಲ ಪಾದ
೫ ರಿಂದ ೧೨ ಮುಂಜಾವು ಟೌರಿಡ್ಸ್ ಉಲ್ಕಾ ವೃಷ್ಟಿ
೮ ಚಂದ್ರ-ಭೂಮಿ ನಡುವೆ ಗರಿಷ್ಠ ಅಂತರ
೯ ಸಂಜೆ ಪಶ್ಚಿಮದಲ್ಲಿ ಬುಧ, ಶುಕ್ರ ಮತ್ತು ಜ್ಯೇಷ್ಠಾ ಪುಟ್ಟ ಗುಂಪು*; ಪೂರ್ವದಲ್ಲಿ ಚಂದ್ರ ಮತ್ತು ಗುರು*
೧೦ ಮುಂಜಾವು ಮಘ ಮತ್ತು ಮಂಗಳ
೧೧ ಮುಂಜಾವು ೧:೩೬ಕ್ಕೆ ಹುಣ್ಣಿಮೆ
೧೪ ಸಂಜೆ ಬುಧ ಗ್ರಹದ ಗರಿಷ್ಠ ಕೋನೋನ್ನತಿ*
೧೭ ರಿಂದ ೧೯ ಮುಂಜಾವು ಲಿಯೋನಿಡ್ಸ್ ಉಲ್ಕಾ ವೃಷ್ಟಿ*
೧೯ ಮುಂಜಾವು ಸಿಂಹದಲ್ಲಿ ಮಂಗಳ ಮತ್ತು ಚಂದ್ರ*
೨೨ ಮುಂಜಾವು ಚಿತ್ರಾ, ಶನಿ ಮತ್ತು ಚಂದ್ರ ಪುಟ್ಟ ಗುಂಪು*
೨೩ ಚಂದ್ರ ಭೂಮಿ ನಡುವೆ ಕನಿಷ್ಠ ಅಂತರ
೨೪ ಬುಧ ಗ್ರಹದ ಹಿನ್ನಡೆ ಆರಂಭ
೨೫ ಅಮಾವಾಸ್ಯೆ ೧೧:೪೦ಕ್ಕೆ ಪಾರ್ಶ್ವ ಸೂರ್ಯ ಗ್ರಹಣ (ಅಂಟಾರ್ಕ್ಟಿಕಾಗೆ ಕಾಣುತ್ತದೆ ೯:೫೩ - ೧೩:೪೭ ಭಾರತೀಯ ಕಾಲಮಾನ)
೨೬ ಸಂಜೆ ಬುಧ - ಚಂದ್ರ ಜೋಡಿ*
೨೭ ಸಂಜೆ ಶುಕ್ರ - ಚಂದ್ರ ಜೋಡಿ*
(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)


**ಡಾ|| ಬಿ. ಎಸ್. ಶೈಲಜಾ**
ಜವಾಹರ್‌ಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧



**೯ರ ಸಂಜೆ ಪಶ್ಚಿಮದಲ್ಲಿ ಬುಧ, ಶುಕ್ರ ಮತ್ತು ಜ್ಯೇಷ್ಠಾ**


**೧೪ರ ಸಂಜೆ ಪಶ್ಚಿಮದಲ್ಲಿ ಬುಧ, ಶುಕ್ರ ಮತ್ತು ಜ್ಯೇಷ್ಠಾ**

# ಇಸ್ಲಾಮೋಫೋಬಿಯ

## ಒಂದು ವಿಶ್ಲೇಷಣೆ



ಇತ್ತೀಚಿನ ಕೆಲವು ವರ್ಷಗಳಿಂದ ವಿಶ್ವದೆಲ್ಲೆಡೆ ಇಸ್ಲಾಂ ಬಗ್ಗೆ ಅತೀವ ಭೀತಿಯ (ಇಸ್ಲಾಮೊಫೋಬಿಯ) ವಾತಾವರಣವೊಂದನ್ನು ಸೃಷ್ಟಿಸಲಾಗಿದೆ. ಮೂಲತಃ ಇದು ಬಂಡವಾಳಶಾಹಿ ವ್ಯವಸ್ಥೆಯ ಪ್ರಸಕ್ತ ಬಿಕ್ಕಟ್ಟಿನ ಕೂಸು. ಬಂಡವಾಳಶಾಹಿ ಕಾಲಕಾಲಕ್ಕೆ ಎದುರಿಸುತ್ತಿರುವ ಆರ್ಥಿಕ ಹಿಂಜರಿತಕ್ಕೆ ಮೊತ್ತಮೊದಲ ಹರಕೆಯ ಕುರಿಗಳಾಗಿ ಸಿಗುವುದು ಆಯಾ ದೇಶಗಳ 'ಅನ್ಯ' ಜನರು, 'ಪರಕೀಯರು', ವಿದೇಶೀಯರು. ಇವರು ಯಹೂದ್ಯರಂತೆ, ಮುಸ್ಲಿಮರಂತೆ ಅನ್ಯ ಮತೀಯರಿರಬಹುದು ಅಥವಾ ಆಫ್ರಿಕನರಂತೆ, ಏಷ್ಯನರಂತೆ ಅನ್ಯ ಜನಾಂಗದವರಿರಬಹುದು. 'ಪರಿಶುದ್ಧ' ರಾಷ್ಟ್ರ ಮತ್ತು 'ಪರಿಶುದ್ಧ' ಜನಾಂಗ, ಅರ್ಥಾತ್ ಏಕರೂಪಿ ಸಂಸ್ಕೃತಿ ಕಲ್ಪನೆಯ ಹಿಂಬಾಲಕರ ಮನದಾಳದಲ್ಲೆಲ್ಲೋ ಹುದುಗಿರುವ ಜನಾಂಗೀಯ, ಮತೀಯ ಅಸಹನೆಯ ಎಳೆಯೊಂದು ಈ ಕಾಲದಲ್ಲಿ ವ್ಯಕ್ತವಾಗುತ್ತದೆ. ಬಹುಸಂಸ್ಕೃತಿಯ ಕಲ್ಪನೆಯನ್ನು ತೀವ್ರವಾಗಿ ವಿರೋಧಿಸುವ ಉಗ್ರ ರಾಷ್ಟ್ರೀಯವಾದಿಗಳು ಇಂದು ಐರೋಪ್ಯ ರಾಷ್ಟ್ರಗಳಲ್ಲಿ ಮತ್ತೊಮ್ಮೆ ಪ್ರವರ್ಧಮಾನಕ್ಕೆ ಬರಲೆತ್ನಿಸುತ್ತಿರುವ ವಿದ್ಯಮಾನವನ್ನು ಕಾಣಬಹುದು. ನವನಾಜಿ ಮತ್ತು ತೀವ್ರಗಾಮಿ ಬಲಪಂಥೀಯ ರನ್ನೊಳಗೊಂಡ ಇಂಥವರ ಬತ್ತಳಿಕೆಯಲ್ಲಿ ಪ್ರಮುಖ ಅಸ್ತ್ರವಾಗಿರುವುದೇ ಸುಮಾರು ೨ ಕೋಟಿಯಷ್ಟಿರುವ ಮುಸ್ಲಿಂ ವಲಸಿಗರ ವಿಷಯ. ನಾಜಿ ಯುಗದ ಆರ್ಥಿಕ ಮುಗ್ಗಟ್ಟಿನ ಕಾಲದಲ್ಲಿ ಯಹೂದ್ಯರು 'ಅನ್ಯ'ರಾಗಿದ್ದರೆ ಇಂದು ಅದೇ ಪಟ್ಟವನ್ನು ಮುಸ್ಲಿಮರಿಗೆ ಕಟ್ಟಲಾಗಿದೆ.

ಪ್ರಸಕ್ತ ಜಾಗತೀಕರಣ, ಖಾಸಗೀಕರಣ, ಉದಾರೀಕರಣದ ನೀತಿಗಳು ಬಂಡವಾಳಶಾಹಿ ವ್ಯವಸ್ಥೆಯ ಇತ್ತೀಚಿನ ಆವಿಷ್ಕಾರವಾದ ನವಉದಾರವಾದಿ ಸಿದ್ಧಾಂತದ ಭಾಗವಾಗಿವೆ. ನವಉದಾರವಾದಿ ಆರ್ಥಿಕ ನೀತಿಗಳ ನೆಲೆಗಟ್ಟಾಗಿರುವುದು ಕೊಳ್ಳುಬಾಕ ಸಂಸ್ಕೃತಿ. ಕೊಳ್ಳುಬಾಕ ಸಂಸ್ಕೃತಿಯ ಬಕಾಸುರನ ಹೊಟ್ಟೆಗೆ ಬಂಡಿಗಟ್ಟಲೆ ಸಂಪನ್ಮೂಲಗಳನ್ನು ಸುರಿಯುತ್ತಲೇ ಇರಬೇಕಾಗುತ್ತದೆ. ಈ ತೀರದ ಹಸಿವು ಪೆಟ್ರೋಲಿಯಂ ತೈಲ ಸೇರಿದಂತೆ ಪ್ರಪಂಚದ ಸಕಲ ಸಂಪನ್ಮೂಲಗಳನ್ನು ಕೇಳುತ್ತಿದೆ. ಪರಿಣಾಮವಾಗಿ ಬಹುರಾಷ್ಟ್ರೀಯ ಕಾರ್ಪೊರೇಟ್‌ಗಳ ಮೂಲಕ ಆರ್ಥಿಕ ವಸಾಹತುಗಳನ್ನು ಸ್ಥಾಪಿಸಿ ತೃತೀಯ ಜಗತ್ತಿನ ಸಂಪನ್ಮೂಲಗಳ ಮೇಲೆ ಪರೋಕ್ಷ ನಿಯಂತ್ರಣ ಸಾಧಿಸಲಾಗುತ್ತಿದೆ. ಆಧುನಿಕ ಯುಗದಲ್ಲಿ ಹೀಗೆ ಕಾರ್ಪೊರೇಟ್‌ಗಳ ಮೂಲಕ ನವವಸಾಹತುಗಳನ್ನು ಸ್ಥಾಪಿಸಿ ಸಂಪನ್ಮೂಲಗಳನ್ನು ದೋಚುವುದೇ ಆರ್ಥಿಕ ಸಾಮ್ರಾಜ್ಯಶಾಹಿ. ನವಉದಾರವಾದಿ ಸಿದ್ಧಾಂತದ ಉಳಿವಿಗೆ ನವ ವಸಾಹತುವಾದ ಮತ್ತು ಆರ್ಥಿಕ ಸಾಮ್ರಾಜ್ಯಶಾಹಿಗಳು ಅನಿವಾರ್ಯವಾಗಿವೆ.

ಸ್ಥೂಲವಾಗಿ ಹೇಳುವುದಾದರೆ ಬಲಿಷ್ಠ ರಾಷ್ಟ್ರಗಳು ದುರ್ಬಲ ರಾಷ್ಟ್ರಗಳ ವ್ಯವಹಾರಗಳಲ್ಲಿ ಮೂಗು ತೂರಿಸುವುದೇ ನವವಸಾಹತುವಾದ. ನವವಸಾಹತುಶಾಹಿ ದೇಶಗಳ ಕೂಟಕ್ಕೆ ಸೇರಿದ ವಿಶ್ವ ವಾಣಿಜ್ಯ ಸಂಸ್ಥೆ, ಅಷ್ಟ ರಾಷ್ಟ್ರಗಳ ಗುಂಪು, ವಿಶ್ವ ಆರ್ಥಿಕ ವೇದಿಕೆ, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತು ವಿಶ್ವ ಬ್ಯಾಂಕ್ ಮುಂತಾದವುಗಳು (ಇವಕ್ಕೆಲ್ಲ ಅಮೆರಿಕಾವೇ ದೊಡ್ಡಣ್ಣ) ಬಡ ರಾಷ್ಟ್ರಗಳ ಮೇಲೆ ಒತ್ತಡ ಹೇರಿ, ಅವು ಖಾಸಗೀಕರಣಕ್ಕೆ ಒತ್ತು ನೀಡುವ ರಾಚನಿಕ ಸಮನ್ವಯತೆಯ ಯೋಜನೆಗಳನ್ನು ಅಳವಡಿಸಿಕೊಳ್ಳುವಂತೆ ಮಾಡುತ್ತವೆ. ಇಂತಹ ಯೋಜನೆಗಳ ಅಂತಿಮ ಗುರಿಯೇ ರಾಷ್ಟ್ರೀಯ ಸಂಪನ್ಮೂಲಗಳ ಖಾಸಗೀಕರಣ. ಆರಂಭದಲ್ಲಿ ಇಂತಹ ಖಾಸಗಿ ಉದ್ದಿಮೆಗಳಲ್ಲೆಲ್ಲಾ ಅಪಾರ ವಿದೇಶೀ ಹೂಡಿಕೆಗಳನ್ನು ತೊಡಗಿಸ ಲಾಗುತ್ತದೆ. ಭಾರಿ ಲಂಚ ಪಡೆದುಕೊಂಡು ತಮ್ಮ ಅಧಿಕಾರ ಸ್ಥಾನವನ್ನು ಮತ್ತಷ್ಟು ಭದ್ರಗೊಳಿಸುವ ಸ್ಥಳೀಯ ಪ್ರಭುತ್ವಗಳು ವಿದೇಶಿ ಕಾರ್ಪೊರೇಟುಗಳಿಗೆ ಬೇಕಾದಂತೆ ಲೂಟಿ ಮಾಡಲು ಅನುವು ಮಾಡಿಕೊಡುತ್ತವೆ. ಅವುಗಳಿಗೆ ಅನುಕೂಲಕರವಾದ ಕಾಯ್ದೆ ಕಾನೂನುಗಳನ್ನು ಜಾರಿಗೊಳಿಸ ಲಾಗುತ್ತದೆ. ಹೀಗೆ ಅಲ್ಲಿನ ಕಚ್ಚಾ ಸಾಮಗ್ರಿಗಳನ್ನು ಮತ್ತು ಅಗ್ಗದ ಕಾರ್ಮಿಕರನ್ನು ಬಲಿಷ್ಠ ದೇಶಗಳಿಗೆ ಸಾಗಿಸಲಾಗುತ್ತದೆ. ವಿದೇಶಿ ಉತ್ಪನ್ನಗಳ ಮುಕ್ತ ಆಮದು ಮತ್ತು ಮಾರಾಟಕ್ಕೆ ಅನುವು ಮಾಡಿಕೊಡುವ ನೀತಿಗಳನ್ನು ರೂಪಿಸಲಾಗುತ್ತದೆ. ಇವೆಲ್ಲದರ ಒಟ್ಟು ಪರಿಣಾಮವೆಂದರೆ ಸ್ಥಳೀಯ ಪ್ರಭುತ್ವಗಳು ತಮ್ಮ ಪ್ರಜೆಗಳ ಕಲ್ಯಾಣವನ್ನು ಕಡೆಗಣಿಸುತ್ತವೆ. ಜನಸಾಮಾನ್ಯರಿಗೆ ಆರೋಗ್ಯ, ಶಿಕ್ಷಣ ಮತ್ತಿತರ ಮೂಲಭೂತ ಸೌಕರ್ಯಗಳನ್ನು ಒದಗಿಸಲು ಅಸಮರ್ಥವಾಗುತ್ತವೆ. ನಿರುದ್ಯೋಗ, ಬಡತನಗಳು ಹೆಚ್ಚಿ ಜೀವನ ಮಟ್ಟ ದಿನೇ ದಿನೇ ಕುಸಿಯಲಾರಂಭಿಸುತ್ತದೆ. ಇಂದು ಭಾರತದಲ್ಲಿ ನಡೆಯುತ್ತಿರುವುದೂ ಇದೇ ಪ್ರಕ್ರಿಯೆ. ಅಮೆರಿಕಾದ ಹಿತಾಸಕ್ತಿ ಕಾಪಾಡುವುದರಲ್ಲೇ ಹೆಚ್ಚು ಆಸಕ್ತರಾದ ಮನಮೋಹನ ಸಿಂಗ್ ಇದೀಗ ಜನಪ್ರಿಯತೆಯನ್ನು ಕಳೆದುಕೊಂಡಿರುವ ಸಂದರ್ಭದಲ್ಲಿ ಬಹುರಾಷ್ಟ್ರೀಯ ಕಾರ್ಪೊರೇಟ್‌ಗಳ ಮತ್ತೋರ್ವ ಕಣ್ಮಣಿಯಾಗಿರುವ ನರೇಂದ್ರ




– ಸುರೇಶ್ ಭಟ್ ಬಾಕ್ರಬೈಲ್

ಮೋದಿಯನ್ನು ಮುಂದಿನ ಪ್ರಧಾನಿಯೆಂದು ಅಮೇರಿಕಾ ಬಿಂಬಿಸುತ್ತಿರುವುದರ ಹಿಂದೆ ಇದೇ ಆಕ್ರಮಣಶೀಲ ನವವಸಾಹತುವಾದವನ್ನು ಗುರುತಿಸಬಹುದು.

ಬಂಡವಾಳಶಾಹಿ ವ್ಯವಸ್ಥೆಗೆ ಮಗದೊಂದು ಬಿಕ್ಕಟ್ಟು ಎದುರಾದಾಗ ಅದರಿಂದ ಪಾರಾಗಲು ಜಗತ್ತಿನ ಅತ್ಯಧಿಕ ತೈಲ ನಿಕ್ಷೇಪಗಳಿರುವ ಪಶ್ಚಿಮ ಏಷಿಯಾ ಮತ್ತು ಆಫ್ರಿಕಾದ ತೈಲ ಸಂಪನ್ಮೂಲಗಳನ್ನು ಪೂರ್ತಿ ತಮ್ಮ ಹಿಡಿತಕ್ಕೆ ತೆಗೆದುಕೊಳ್ಳುವ ಯೋಜನೆಯೊಂದು ರೂಪುಗೊಂಡಿತು. ಇವೆಲ್ಲ ಮುಸ್ಲಿಂ ರಾಷ್ಟ್ರಗಳು. ಅದೇ ರೀತಿ ಯಹೂದ್ಯ ರಾಷ್ಟ್ರೀಯವಾದಿಗಳ (ಜಿಯೊನಿಸ್ಟರು) ಪಾಲಿಗೆ ಮಗ್ಗುಲಮುಳ್ಳಾಗಿರುವ ಪ್ಯಾಲೆಸ್ತೀನ್ ಕೂಡ ಒಂದು ಮುಸ್ಲಿಂ ರಾಷ್ಟ್ರ. ಅಮೇರಿಕಾದ ಜಿಯೊನಿಸ್ಟರು ಕಳೆದ ಹಲವಾರು ದಶಕಗಳಿಂದ ಮಿಲಿಟರಿ ಮತ್ತು ಉದ್ದಿಮೆಗಳ ಪ್ರಬಲ ಕೂಟವೊಂದನ್ನು ರಚಿಸಿಕೊಂಡು ಅಮೇರಿಕಾದ ಆಡಳಿತವನ್ನು ಹೆಚ್ಚುಕಮ್ಮಿ ಪೂರ್ತಿಯಾಗಿ ತಮ್ಮ ಕಪಿಮುಷ್ಟಿಯಲ್ಲಿ ಇಟ್ಟುಕೊಂಡಿದ್ದಾರೆ. ಹೀಗೆ ಒಂದೇ ಕಲ್ಲಿಗೆ ಎರಡು ಹಕ್ಕಿಗಳನ್ನು ಉರುಳಿಸುವ ಸಂಚಿನ ಭಾಗವಾಗಿ ಮುಸ್ಲಿಮರ ಬಗ್ಗೆ ಅಸಹನೆಯನ್ನೂ ಇಸ್ಲಾಂ ಕುರಿತಂತೆ ಭಯವನ್ನೂ ಉತ್ಪಾದಿಸುವ ತಂತ್ರವೊಂದನ್ನು ಹೆಣೆಯಲಾಯಿತು. ಇದಕ್ಕೆ ಮುರ್ಡೋಕ್‌ನ 'ಫಾಕ್ಸ್' ಸುದ್ದಿವಾಹಿನಿ ಮತ್ತಿತರ ಬಲಪಂಥೀಯ ಮಾಧ್ಯಮಗಳನ್ನೂ ಪತ್ರಕರ್ತರನ್ನೂ ಯಶಸ್ವಿಯಾಗಿ ಬಳಸಿಕೊಳ್ಳಲಾಯಿತು. ಕಮ್ಯೂನಿಸಂಅನ್ನು ಹೊಸಕಿಹಾಕಿದ ತರುವಾಯ ತೆರವಾಗಿದ್ದ ಜಾಗದಲ್ಲಿ ಇಸ್ಲಾಮನ್ನು ಸ್ಥಾಪಿಸಲಾಯಿತು. ತತ್ಪರಿಣಾಮವಾಗಿ ಶೇಕಡ ೨ಕ್ಕಿಂತಲೂ ಕಡಿಮೆ ಮುಸ್ಲಿಮರಿರುವ ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ ಇಂದು ಇಸ್ಲಾಮೊಫೋಬಿಯ ವಿಪರೀತ ಮಟ್ಟಕ್ಕೆ ಬೆಳೆದು ನಿಂತಿದೆ. ಇನ್ನು ವಿದೇಶಗಳಲ್ಲಿ ಇಸ್ಲಾಮೊಫೋಬಿಯವನ್ನು ಹಬ್ಬಿಸುವಲ್ಲಿ ಸ್ಥಳೀಯ 'ಮುರ್ಡೋಕ್'ರ ಮತ್ತು ಉಗ್ರ ಬಲಪಂಥೀಯ ಪತ್ರಕರ್ತರ ಪಾತ್ರ ಗಣನೀಯವಾದುದು. ಇಸ್ಲಾಮೊಫೋಬಿಯವನ್ನು ಅಂತರರಾಷ್ಟ್ರೀಯವಾಗಿಸುವ ಬಂಡವಾಳಶಾಹಿ ಹುನ್ನಾರದಲ್ಲಿ ಅಪಪ್ರಚಾರ ಒಂದೇ ಅಲ್ಲ, ಅದರ ಜೊತೆ ಸರ್ವಾಧಿಕಾರಿ ಮತ್ತು ರಾಜಪ್ರಭುತ್ವಗಳಿಗೆ ಬೆಂಬಲ, ಆಂತರಿಕ ಬಂಡಾಯ, ಭಯೋತ್ಪಾದಕ ಸಂಘಟನೆಗಳ ಸ್ಥಾಪನೆ, ಅವುಗಳಿಗೆ ಬೆಂಬಲ ಮತ್ತು ಉತ್ತೇಜನ ಇವೇ ಮುಂತಾದ ಹಲವಾರು ಕಾರ್ಯತಂತ್ರಗಳನ್ನು ಅನುಸರಿಸಲಾಗುತ್ತದೆ. ಪ್ರಜಾಪ್ರಭುತ್ವದ ಏಕೈಕ ರಕ್ಷಕ ತಾನೆಂದು ಹೇಳಿಕೊಳ್ಳುವ ದೇಶವೊಂದು ಅತ್ಯಂತ ನಿರ್ಲಜ್ಜವಾಗಿ ಸರ್ವಾಧಿಕಾರಿ ಮತ್ತು ರಾಜಪ್ರಭುತ್ವಗಳನ್ನು ಬೆಂಬಲಿಸುವಂತೆ ಮಾಡುತ್ತಿರುವುದು ಇದೇ ಬಂಡವಾಳಶಾಹಿ ವ್ಯವಸ್ಥೆ.

ವಿಶ್ವದ ೧೦೦ ಶಸ್ತ್ರಾಸ್ತ್ರ ಮಾರಾಟ ಸಂಸ್ಥೆಗಳಲ್ಲಿ ಅಮೇರಿಕನ್ ಕಂಪೆನಿಗಳದ್ದೇ ಸಿಂಹಪಾಲು ಆಗಿರುವುದರಿಂದ ಶಸ್ತ್ರಾಸ್ತ್ರಗಳು ಮಾರಾಟವಾಗಲೇಬೇಕು. ಶಸ್ತ್ರಾಸ್ತ್ರ ಖರೀದಿಯಲ್ಲಿ ವಿಶ್ವದ ನಂಬರ್ ವನ್ ಆಗಿರುವ ಸೌದಿ ಅರೇಬಿಯದ ಭ್ರಷ್ಟ ರಾಜಪ್ರಭುತ್ವವನ್ನು ಅಮೇರಿಕಾ ಎಂದೋ ತನ್ನ ಕೈಗೊಂಬೆಯಾಗಿಸಿಕೊಂಡಿದೆ. ತೃತೀಯ ಜಗತ್ತಿನ ರಾಷ್ಟ್ರಗಳು ಮತ್ತು ಅವುಗಳೊಳಗಿನ ಉಗ್ರಗಾಮಿ ಗುಂಪುಗಳು ಹೆಚ್ಚೆಚ್ಚು ಶಸ್ತ್ರಾಸ್ತ್ರಗಳನ್ನು ಖರೀದಿಸುವಂತೆ ಮಾಡಲು ಅಲ್ಲೆಲ್ಲಾ ಆಂತರಿಕ ಅಸ್ಥಿರತೆ ಮತ್ತು ರಾಷ್ಟ್ರ, ರಾಷ್ಟ್ರಗಳ ಮಧ್ಯೆ ನಿರಂತರ ಸಂಘರ್ಷ ಇರುವಂತೆ ನೋಡಿಕೊಳ್ಳಲಾಗುತ್ತದೆ. ಪಶ್ಚಿಮ ಏಷಿಯದ ದೇಶಗಳಲ್ಲಿ ಸರ್ವಾಧಿಕಾರಿ ಪ್ರಭುತ್ವಗಳು ಕೊನೆಗೊಂಡು ಪ್ರಜಾಪ್ರಭುತ್ವವಾದಿ ಸರಕಾರಗಳು ಅಸ್ತಿತ್ವಕ್ಕೆ ಬರಬೇಕೆನ್ನುವುದು ಸರ್ವರ ಅಭಿಲಾಷೆಯಾಗಿದೆ. ಅದೇ ವೇಳೆ ಉದ್ದೇಶಪೂರ್ವಕವಾಗಿ ಹುಟ್ಟುಹಾಕಲಾಗುವ ಆಂತರಿಕ ಬಂಡಾಯ ಗುಂಪುಗಳಿಗೆ ತಮ್ಮ ಮಿಲಿಟರಿ ಶಕ್ತಿಯ ನೆರವನ್ನು ಒದಗಿಸಿ ಆ ಮೂಲಕ ಸರಕಾರಗಳನ್ನು ಉರುಳಿಸಲು ಹೊರಡುವುದು ಸರ್ವಥಾ ಸಲ್ಲದು. ಆದರೆ ಇದೇ ವಿಧಾನಗಳನ್ನು ಬಳಸಿಕೊಂಡು ಪಶ್ಚಿಮ ಏಷಿಯದ ಜಾತ್ಯತೀತ ದೇಶಗಳಲ್ಲಿ (ಉದಾಹರಣೆಗೆ : ಇರಾಕ್, ಲಿಬಿಯ) ತೀವ್ರಗಾಮಿ ಇಸ್ಲಾಂವಾದಿಗಳ ಕೀಲುಗೊಂಬೆ ಸರಕಾರಗಳನ್ನು ಸ್ಥಾಪಿಸಿರುವುದು ನವವಸಾಹತುವಾದಿ ನೀತಿಯ ಭಾಗವೇ ಆಗಿದೆ. ಬಳಿಕ ಅಲ್ಲಿನ ಸುನ್ನಿ, ಶಿಯಾ ಮುಂತಾದ ವಿಭಿನ್ನ ಇಸ್ಲಾಂ ಪಂಥಗಳು ಮತ್ತು ಅವುಗಳ ನಡುವಿನ ಭಿನ್ನಾಭಿಪ್ರಾಯಗಳನ್ನು ಚಾಕಚಕ್ಯತೆಯಿಂದ ಬಳಸಿಕೊಂಡು (೧) ಭಯೋತ್ಪಾದಕ ದಾಳಿ, ಆತ್ಮಾಹುತಿ ದಾಳಿಗಳ ಮೂಲಕ ದೇಶಗಳೊಳಗೆ ಸದಾ ಅಸ್ಥಿರತೆಯ ಪರಿಸ್ಥಿತಿಯನ್ನು ನಿರ್ಮಿಸಲಾಗುತ್ತದೆ; (೨) ಮುಸ್ಲಿಂ ದೇಶಗಳ ನಡುವೆ ಒಗ್ಗಟ್ಟಿರದಂತೆ ನೋಡಿಕೊಳ್ಳಲಾಗುತ್ತದೆ. ಸೋವಿಯತ್ ರಷ್ಯಾದ ಹುಟ್ಟಡಗಿಸುವ ಕಾರ್ಯತಂತ್ರದಲ್ಲಿ ಅಫಘಾನಿಸ್ತಾನವನ್ನು ಹೇಗೆ ಬಳಸಿಕೊಳ್ಳಲಾಯಿತು, ಹೇಗೆ ಕೆಲವು ನಿರ್ದಿಷ್ಟ ಭಯೋತ್ಪಾದಕ ಸಂಸ್ಥೆಗಳನ್ನು ಹುಟ್ಟುಹಾಕಿ ಪೋಷಿಸಲಾಯಿತೆನ್ನುವುದನ್ನು ಜಗತ್ತು ಈಗಾಗಲೇ ಕಂಡಿದೆ. ಅಫಘಾನಿಸ್ತಾನ, ಇರಾಕ್ 'ಸ್ವತಂತ್ರ'ಗೊಂಡು 'ಪ್ರಜಾತಾಂತ್ರಿಕ' ಸರಕಾರಗಳು ಸ್ಥಾಪಿಸಲ್ಪಟ್ಟ ನಂತರ ಅಲ್ಲಿ ಹಿಂದಿಗಿಂತ ಹೆಚ್ಚು ಅಸ್ಥಿರತೆ ನಿರ್ಮಾಣವಾಗಿರುವುದನ್ನು ದಿನನಿತ್ಯ ಓದಿ ತಿಳಿಯುತ್ತಿದ್ದೇವೆ. ಭಾರತ, ಪಾಕಿಸ್ತಾನಗಳ ಮಧ್ಯೆ ಉತ್ತಮ ಬಾಂಧವ್ಯಕ್ಕೆ ಪ್ರಧಾನ ಅಡ್ಡಿಯಾಗಿರುವ ಕಾಶ್ಮೀರದಂತಹ ವಾದಾಂಶಗಳಿಗೆ ಪರಿಹಾರವಿಲ್ಲದಂತೆ ನೋಡಿಕೊಳ್ಳುವಲ್ಲಿಯೂ ಅಮೇರಿಕಾದ ಹಿತಾಸಕ್ತಿ ಅಡಗಿರುವಂತಿದೆ. ಯಾಕೆಂದರೆ 'ಜಿಹಾದ್' ಪರಿಕಲ್ಪನೆಯನ್ನು ದುರ್ಬಳಕೆ ಮಾಡಿಕೊಂಡು ಭಯೋತ್ಪಾದಕರನ್ನು, ಆತ್ಮಾಹುತಿ ದಾಳಿಕೋರರನ್ನು ಉತ್ಪಾದಿಸುತ್ತಿರುವ ಗಡಿಯಾಚೆಗಿನ ಮದ್ರಸಾಗಳ ಸ್ಥಾಪನೆಗೆ ಪ್ರೋತ್ಸಾಹ, ಧನಸಹಾಯ ಎರಡನ್ನೂ ನೀಡುತ್ತಿರುವುದು ಅಮೇರಿಕಾ ಎಂಬುದು ಜಗಜ್ಜಾಹೀರಾಗಿದೆ.

''ಅಮೇರಿಕಾ ಪ್ರಗತಿ ಕೇಂದ್ರ'' (ಸಿಎಪಿ) ಎಂಬ ಸಂಸ್ಥೆಯೊಂದು ೨೦೦೧-೦೯ರ ಅವಧಿಯಲ್ಲಿ ಅಮೇರಿಕಾದಲ್ಲಿ ಇಸ್ಲಾಮೊಫೋಬಿಯದ ಬೆಳವಣಿಗೆ ಬಗ್ಗೆ ಸುತ್ತ್ಯರ್ಹ ಅಧ್ಯಯನವೊಂದನ್ನು ಮಾಡಿದೆ. ಜಾರ್ಜ್ ಸೊರೋಸ್‌ನ 'ಮುಕ್ತ ಸಮಾಜ ಸಂಸ್ಥೆ'ಯಿಂದ ಆರ್ಥಿಕ ನೆರವು ಪಡೆದ ಸಿಎಪಿ ಈಗಾಗಲೇ 'ಸಂಯೋಜಿತ ಭೀತಿ : ಅಮೇರಿಕಾದ ಇಸ್ಲಾಮೊಫೋಬಿಯ ಜಾಲದ ಬೇರುಗಳು' ಎನ್ನುವ ೧೩೦ ಪುಟಗಳ ವರದಿಯೊಂದನ್ನು ತಯಾರಿಸಿ ಮೊನ್ನೆ ಆಗಸ್ಟ್ ೨೬ರಂದು ಬಿಡುಗಡೆಗೊಳಿಸಿದೆ. ಇಸ್ಲಾಮೊಫೋಬಿಯದ ಬೆಳವಣಿಗೆಗೆ ಕಾರಣರಾಗಿರುವ ವ್ಯಕ್ತಿ ಹಾಗೂ ಸಂಘಸಂಸ್ಥೆಗಳ ಒಂದು ಜಾಲವಿರುವುದನ್ನು ವರದಿ ಗುರುತಿಸಿದ್ದು ಅದರಲ್ಲಿ ಚಿಂತಕರ ಚಾವಡಿಗಳು, ಪಂಡಿತರು, ಪ್ರತಿಷ್ಠಾನಗಳು (ಫೌಂಡೇಷನ್‌ಗಳು) ಮತ್ತು ಬ್ಲಾಗ್‌ಗಳೂ ಸೇರಿವೆ ಎನ್ನಲಾಗಿದೆ. ಸದರಿ ಕಾಲಾವಧಿಯಲ್ಲಿ ಇಂತಹ ಕೆಲವು ಪ್ರಮುಖ ಸಂಸ್ಥೆ ಹಾಗೂ ವ್ಯಕ್ತಿಗಳಿಗೆ ಅಮೇರಿಕಾದ ಏಳು ಪ್ರತಿಷ್ಠಾನಗಳ ಮೂಲಕ ೪೨ ಮಿಲಿಯ ಡಾಲರ್‌ಗೂ ಅಧಿಕ ಮೊತ್ತವನ್ನು ಗುಟ್ಟಿನಲ್ಲಿ ಹಸ್ತಾಂತರಿಸಲಾಗಿರುವುದನ್ನು ಕಂಡುಕೊಳ್ಳಲಾಗಿದೆ. ಫಲಾನುಭವಿಗಳ ಪಟ್ಟಿಯಲ್ಲಿ ಅಮೇರಿಕಾದ ತೀವ್ರ ಬಲಪಂಥೀಯರ ಜೊತೆ ದೀರ್ಘಕಾಲಿಕ ಸಂಬಂಧ




ಇಟ್ಟುಕೊಂಡಿರುವವರಿದ್ದಾರೆ. ಇಸ್ರೇಲಿನ ಬಲಪಂಥೀಯ ಗುಂಪುಗಳ ಬೆಂಬಲಿಗರಾದ ಕೆಲವು ಯಹೂದ್ಯ ಕೌಟುಂಬಿಕ ಪ್ರತಿಷ್ಠಾನಗಳೂ ಇವೆ.

ಅಮೆರಿಕಾದ ಇಸ್ಲಾಮೊಫೋಬಿಯ ಜಾಲದಲ್ಲಿ ಹಲವಾರು ಟಿವಿ ವಾಹಿನಿಗಳು ಮತ್ತು ಬಲಪಂಥೀಯ ರೇಡಿಯೊ ಸ್ಟೇಷನ್‌ಗಳೂ ಸಕ್ರಿಯವಾಗಿ ಕೆಲಸ ಮಾಡುತ್ತಿವೆ. ಕೆಲವು ನಿರ್ದಿಷ್ಟ ತೀವ್ರಗಾಮಿ ತಜ್ಞರನ್ನು ಪದೇ ಪದೇ ಕರೆಸಿಕೊಂಡು 'ಇಸ್ಲಾಂ ಧರ್ಮ', 'ಇಸ್ಲಾಮಿನಿಂದ ರಾಷ್ಟ್ರೀಯ ಭದ್ರತೆಗೆ ಇರುವ ತಥಾಕಥಿತ ಅಪಾಯಗಳು' ಮುಂತಾದ ವಿಷಯಗಳ ಬಗ್ಗೆ ಉಪನ್ಯಾಸ ನೀಡಿಸಲಾಗುತ್ತದೆ. ಇಂತಹ ಅಪಪ್ರಚಾರ ಕಾರ್ಯಕ್ರಮಗಳಲ್ಲಿ ನಿಯಮಿತವಾಗಿ ಕಾಣಿಸಿಕೊಳ್ಳುವ ಕೆಲವು ಪ್ರಮುಖ ತೀವ್ರಗಾಮಿ ಸೈದ್ಧಾಂತಿಕರು ಹಾಗೂ ಅವರ ಸಂಸ್ಥೆಗಳ ವಿವರಗಳು ಇಲ್ಲಿವೆ :

ಫ್ರಾಂಕ್ ಗ್ಯಾಫ್ನಿ - 'ಭದ್ರತಾ ಕಾರ್ಯನೀತಿ ಕೇಂದ್ರ' (ಸಿಎಸ್‌ಪಿ)
ಡೇನಿಯಲ್ ಪೈಪ್ಸ್ - 'ಮಧ್ಯಪ್ರಾಚ್ಯ ವೇದಿಕೆ' (ಎಂಇಎಫ್)
ಸ್ಟೀವನ್ ಎಮರ್ಸನ್ - 'ಭಯೋತ್ಪಾದನೆಯ ತನಿಖಾ ಯೋಜನೆ'
ಡೇವಿಡ್ ಯೆರುಶಲ್ಮಿ - 'ರಾಷ್ಟ್ರೀಯ ಅಸ್ತಿತ್ವಕ್ಕಾಗಿ ಅಮೆರಿಕನರ ಸಂಘ'
ರಾಬರ್ಟ್ ಸ್ಪೆನ್ಸರ್ - 'ಅಮೆರಿಕಾದ ಇಸ್ಲಾಮೀಕರಣ ನಿಲ್ಲಿಸಿ' (ಎಸ್‌ಐಒಎ)
ಮತ್ತು
'ಡೇವಿಡ್ ಹಾರೊವಿಟ್ಜ್ ಸ್ವಾತಂತ್ರ್ಯ ಕೇಂದ್ರ'
ಮತ್ತು ಅದರ
'ಜಿಹಾದ್ ಮೇಲೆ ನಿಗಾ' ಬ್ಲಾಗ್.

ಮೇಲಿನ ಎಲ್ಲಾ ವ್ಯಕ್ತಿ ಹಾಗೂ ಸಂಸ್ಥೆಗಳ ನಡುವೆ ಪರಸ್ಪರ ಗಾಢ ಸಂಬಂಧಗಳಿವೆ. ಈ ಗುಂಪನ್ನು ಇಸ್ಲಾಮೊಫೋಬಿಯ ಜಾಲದ ''ಕೇಂದ್ರ ನರಮಂಡಲ'' ಎಂದೇ ಕರೆಯಲಾಗಿದೆ. ಇವರೆಲ್ಲರೂ ಇಸ್ಲಾಮಿನ ಅತ್ಯುತ್ಪ್ರೇಕ್ಷಿತ ತಥಾಕಥಿತ ಅಪಾಯಗಳನ್ನು ಉತ್ಪಾದಿಸುವ ಕಾಯಕದಲ್ಲಿ ನಿರತರಾಗಿದ್ದಾರೆ. ಉದಾಹರಣೆಗೆ, ''ಶರಿಯಾ ನಿಧಾನಕ್ಕೆ ಎಲ್ಲೆಡೆ ವ್ಯಾಪಿಸುತ್ತಿದೆ... ಇಸ್ಲಾಂ ಧರ್ಮ ಪಾಶ್ಚಿಮಾತ್ಯ ರಾಷ್ಟ್ರಗಳ ಮೇಲೆ ಯಜಮಾನಿಕೆಯನ್ನು ಸ್ಥಾಪಿಸಲೆತ್ನಿಸುತ್ತಿದೆ... ಮುಸ್ಲಿಮೇತರರ ವಿರುದ್ಧ ಹಿಂಸಾಚಾರ ನಡೆಸುವುದು ಮುಸ್ಲಿಮರ ಕರ್ತವ್ಯವಾಗಿದ್ದು ಅವರು ಆ ಕರ್ತವ್ಯವನ್ನು ನಿಭಾಯಿಸಬೇಕೆಂದು ಇಸ್ಲಾಂ ಕರೆನೀಡುತ್ತದೆ... ಶರಿಯಾ ಒಂದು ಸರ್ವಾಧಿಕಾರಿ ಸಿದ್ಧಾಂತವಾಗಿದ್ದು ಅದರ ಕಾನೂನಿನ, ರಾಜಕೀಯ, ಮಿಲಿಟರಿ ತತ್ವಗಳ ಗುರಿ ಪಾಶ್ಚಿಮಾತ್ಯ ನಾಗರಿಕತೆಯನ್ನು ನಿರ್ನಾಮಗೊಳಿಸುವುದು'' ಎಂದೆಲ್ಲ ಅಪಪ್ರಚಾರ ಮಾಡುತ್ತಾರೆ. ಅಧ್ಯಕ್ಷ ಒಬಾಮರ ವಿರುದ್ಧವೂ ಇದೇ ಇಸ್ಲಾಮೊಫೋಬಿಯ ಜಾಲ ಅಪಪ್ರಚಾರ ನಡೆಸಿತ್ತು. ನ್ಯೂಯಾರ್ಕ್‌ನ ಗ್ರೌಂಡ್ ಜೀರೊ ಮಸೀದಿಗೆ ಒಂದು ರಾಷ್ಟ್ರವ್ಯಾಪಿ ವಿರೋಧಿ ಅಲೆಯನ್ನು ಹುಟ್ಟುಹಾಕಿರುವುದು ಇದೇ ಜಾಲ. ಫ್ರಾಂಕ್ ಗ್ಯಾಫ್ನಿ ಮತ್ತಿತರರ ಪ್ರಕಾರ ಗ್ರೌಂಡ್ ಜೀರೊ ಮಸೀದಿಯ ಮೂಲೋದ್ದೇಶ ೯/೧೧ರ ವಿಶ್ವ ವಾಣಿಜ್ಯ ಕೇಂದ್ರದ ಮೇಲಿನ ದಾಳಿಯನ್ನು ಪ್ರಶಂಸಿಸುವುದು ಹಾಗೂ ''ನಮ್ಮೆದುರಿಗೇ ಶರಿಯಾಕ್ಕೆ ಶಾಶ್ವತ ಭದ್ರಕೋಟೆಯೊಂದನ್ನು ನಿರ್ಮಿಸಿ ಅದರ ಮೂಲಕ ನಂಬಿಗಸ್ಥರ ರಣೋತ್ಸಾಹಿ ಮಹತ್ವಾಕಾಂಕ್ಷೆಗಳಿಗೆ ಪ್ರೇರಣೆ ಒದಗಿಸುವುದು.''

ಇವರು ಶರಿಯಾವನ್ನು ನಿರೂಪಿಸುವ ಬಗೆಗೆ ಇಸ್ಲಾಂ ಹಾಗೂ ಮುಸ್ಲಿಂ ಸಂಪ್ರದಾಯಗಳ ವಿದ್ವಾಂಸರಷ್ಟೇ ಏಕೆ, ಸಾಮಾನ್ಯ ಮುಸ್ಲಿಮನೂ ಮಾನ್ಯತೆ ಕೊಡಲಾರ.

ಇವರ ಅಪಪ್ರಚಾರಗಳನ್ನು ಮರುಪ್ರಸಾರ ಮಾಡುವವರೆಂದರೆ ಕ್ರೈಸ್ತ ಬಲಪಂಥೀಯರು, ಅನೇಕ ರಾಜಕಾರಣಿಗಳು, ಫಾಕ್ಸ್ ಸುದ್ದಿ ವಾಹಿನಿ, ವಾಷಿಂಗ್ಟನ್ ಪೋಸ್ಟ್, ನ್ಯಾಷನಲ್ ರಿವ್ಯೂನಂತಹ ಮಾಧ್ಯಮಗಳು ಮತ್ತು ಜನಸಾಮಾನ್ಯರ ನಡುವಿನಲ್ಲಿರುವ ''ಅಮೆರಿಕಾ ಸಲುವಾಗಿ ಕಾರ್ಯಪ್ರವೃತ್ತರಾಗಿ'', ''ಅಮೆರಿಕಾ ಕುಟುಂಬ ಸಂಘಟನೆ'' ಸ್ಥಳೀಯ ''ಚಹಾ ಕೂಟ'' ತಂಡಗಳು ಇವೇ ಮೊದಲಾದವು. ಇನ್ನು ೧೯೯೮ರಲ್ಲಿ ಇಸ್ರೇಲಿನ ರಕ್ಷಣಾ ಪಡೆಯ ಮಾಜಿ ಅಧಿಕಾರಿಗಳು ಸ್ಥಾಪಿಸಿದ ಮಧ್ಯಪ್ರಾಚ್ಯ ಮಾಧ್ಯಮ ಮತ್ತು ಸಂಶೋಧನಾ ಸಂಸ್ಥೆ ಮಧ್ಯಪ್ರಾಚ್ಯದ ಮಾಧ್ಯಮಗಳಿಂದ ಆಯ್ದ ಲೇಖನಗಳನ್ನು ಇಂಗ್ಲಿಷ್‌ಗೆ ಅನುವಾದಿಸಿ ಇಸ್ಲಾಮಿನ ಅಪಾಯಗಳ ಬಗ್ಗೆ ಎಚ್ಚರಿಕೆ ನೀಡುತ್ತದೆ. ಪಾಶ್ಚಿಮಾತ್ಯ ವಿರೋಧಿ ನಿಲುವುಳ್ಳ ಮತ್ತು ತೀವ್ರಗಾಮಿತ್ವಕ್ಕೆ ಪ್ರೋತ್ಸಾಹ ನೀಡುವ ಧ್ವನಿಗಳಿಗೆ ಈ ಸಂಸ್ಥೆಯೊಂದು ವೇದಿಕೆಯಾಗಿದೆ ಎಂಬ ಆರೋಪಗಳಿವೆ. ಅರಬ್ಬಿ ಮಾಧ್ಯಮಗಳಲ್ಲಿ ಪ್ರಕಟಗೊಳ್ಳುವ ಇಸ್ರೇಲ್ ವಿರೋಧಿ ಲೇಖನಗಳ ಮೇಲೆ ಕಣ್ಣಿಡುವ ಗುತ್ತಿಗೆಯನ್ನು ಇದೇ ಸಂಸ್ಥೆಗೆ ವಹಿಸಲಾಗಿದೆ. ಗುತ್ತಿಗೆ ನೀಡಿರುವುದು ಅಮೆರಿಕಾದ ಸ್ಟೇಟ್ ಡಿಪಾರ್ಟ್‌ಮೆಂಟ್.

ರಾಬರ್ಟ್ ಸ್ಪೆನ್ಸರ್‌ನ 'ಜಿಹಾದ್ ಮೇಲೆ ನಿಗಾ' ಎಂಬ ಬ್ಲಾಗನ್ನು 'ಡೇವಿಡ್ ಹಾರೊವಿಟ್ಜ್ ಸ್ವಾತಂತ್ರ್ಯ ಕೇಂದ್ರ'ದ ಮುಖಾಂತರ ಬೆಂಬಲಿಸುತ್ತಿರುವುದು ಆಬ್ರಿ ಮತ್ತು ಜಾಯ್ಸ್ ಚರ್ನಿಕ್ ನಡೆಸುವ ಫೇರ್‌ಬ್ರೂಕ್ ಫೌಂಡೇಷನ್. 'ಅಮೆರಿಕಾದ ಝಯೊನಿಸ್ಟ್ ಸಂಘಟನೆ' ಮತ್ತು ಅಮೆರಿಕಾದ ಕ್ಲಾರಿಯನ್ ಫಂಡ್‌ನ ಹಿಂದೆ ಇರುವ ಇಸ್ರೇಲಿ 'ಐಶ್ ಹತೋರ' ಎಂಬ ತೀವ್ರ ಬಲಪಂಥೀಯ ಗುಂಪುಗಳಿಗೂ ಬೆಂಬಲ ನೀಡಿರುವುದು ಇದೇ ಚರ್ನಿಕ್ ಜೋಡಿ. ಈ ಎರಡು ಸಂಸ್ಥೆಗಳು ತಯಾರಿಸಿದ 'ಗೀಳು : ಪಾಶ್ಚಿಮಾತ್ಯ ರಾಷ್ಟ್ರಗಳ ವಿರುದ್ಧ ತೀವ್ರಗಾಮಿ ಇಸ್ಲಾಂನ ಸಮರ' ಎನ್ನುವ ವಿಡಿಯೊವನ್ನು ವ್ಯಾಪಕವಾಗಿ ಪ್ರಚಾರ ಮಾಡಿದವರು ಇಸ್ಲಾಮೊಫೋಬಿಯ ಗುಂಪುಗಳು. ವಿಡಿಯೊದ ಸುಮಾರು ೨೮ ಮಿಲಿಯ ಪ್ರತಿಗಳನ್ನು ಮನೆಮನೆಗೆ ತಲುಪಿಸಲಾಗಿತ್ತು. ಈ ಹಂಚಿಕೆಗೆ ''ದಾನಿಗಳ ಬಂಡವಾಳ ನಿಧಿ'' ಮೂಲಕ ಸುಮಾರು ೧೭ ಮಿಲಿಯ ಡಾಲರು ಒದಗಿಸಿದಾತ ಚಿಕಾಗೊ ಉದ್ಯಮಿ ಬಾರಿ ಸೇದ್. ವರ್ಜೀನಿಯ ರಾಜ್ಯದಲ್ಲಿರುವ ಈ ''ನಿಧಿ''ಯ ಆಡಳಿತ ಮಂಡಲಿಯಲ್ಲಿ ಅನೇಕ ಪ್ರಮುಖ ಬಲಪಂಥೀಯರು ಹಾಗೂ ನವ ಸಂಪ್ರದಾಯವಾದಿಗಳು (ಕನ್ಸರ್ವೇಟಿವ್) ಇದ್ದಾರೆ.

**೨೦೦೧-೦೯ರ ಅವಧಿಯಲ್ಲಿ ನೀಡಲಾಗಿರುವ ದೇಣಿಗೆಯ ವಿವರಗಳು**

| ದಾನಿ | ಮೊತ್ತ (ಡಾಲರು) | ಫಲಾನುಭವಿ ಸಂಸ್ಥೆ |
|---|---|---|
| ಫೇರ್‌ಬ್ರೂಕ್ ಫೌಂಡೇಷನ್ | ~೧,೫೦೦,೦೦೦ | ''ಅಮೆರಿಕಾಕ್ಕಾಗಿ ಕಾರ್ಯಪ್ರವೃತ್ತರಾಗಿ'', ಸಿಎಸ್‌ಪಿ, ಎಂಇಎಫ್, ''ಭಯೋತ್ಪಾದನೆಯ ತನಿಖಾ ಯೋಜನೆ'' ಮುಂತಾದ ಇಸ್ಲಾಮೊಫೋಬಿಯ ಗುಂಪುಗಳು |
| ''ದಾನಿಗಳ ಬಂಡವಾಳ ನಿಧಿ'' | ೪೦೦,೦೦೦ | ಭಯೋತ್ಪಾದನೆಯ ತನಿಖಾ ಯೋಜನೆ |
| | ೨,೩೦೦,೦೦೦ | ಎಂಇಎಫ್ |
| ರಿಚರ್ಡ್ ಮೆಲನ್ ಸ್ಕೈಫ್ ನಿಯಂತ್ರಣದಲ್ಲಿರುವ ಹಲವು ಫೌಂಡೇಷನ್‌ಗಳು | ೨,೯೦೦,೦೦೦ | ಸಿಎಸ್‌ಪಿ |
| | ೩,೪೦೦,೦೦೦ | ಹಾರೊವಿಟ್ಜ್ ಸ್ವಾತಂತ್ರ್ಯ ಕೇಂದ್ರ |
| ಲಿಂಡೆ ಮತ್ತು ಹ್ಯಾರಿ ಬ್ರಾಡ್ಲಿ ಫೌಂಡೇಷನ್ | ೩೦೦,೦೦೦ | ಎಂಇಎಫ್ |
| | ೮೧೫,೦೦೦ | ಸಿಎಸ್‌ಪಿ |
| | ೩,೪೦೦,೦೦೦ | ಹಾರೊವಿಟ್ಜ್ ಸ್ವಾತಂತ್ರ್ಯ ಕೇಂದ್ರ |

ಇನ್ನಿತರ ಪ್ರಧಾನ ದಾನಿಗಳೆಂದರೆ ನ್ಯೂಟನ್ ಡಿ, ರೋಷೆಲ್ ಎಫ್ ಬೆಕರ್, ರಸೆಲ್ ಬೆರಿ, ಆ್ಯಂಕರೇಜ್ ಚಾರಿಟೆಬಲ್ ಪ್ರತಿಷ್ಠಾನಗಳು ಮತ್ತು ರೊಸೆನ್‌ವಾಲ್ಡ್ ಫ್ಯಾಮಿಲಿ ಫಂಡ್.

ನಾರ್ವೆಯ ನವನಾಜಿ ಭಯೋತ್ಪಾದಕ ಆಂಡರ್ಸ್ ಬ್ರೇವಿಕ್ ತನ್ನ ಪ್ರಣಾಳಿಕೆಯಲ್ಲಿ ಅಮೆರಿಕಾದ ಇಸ್ಲಾಮೊಫೋಬಿಯ ಬ್ಲಾಗ್‌ಗಳಿಂದ ನೇರ ಉಲ್ಲೇಖಗಳನ್ನು ಮಾಡಿದ್ದಾನೆ.



''ಜಿಹಾದ್ ಮೇಲೆ ನಿಗಾ'' ೧೬೨ ಬಾರಿ, ಎಂಇಎಫ್ ೧೬ ಬಾರಿ ಮತ್ತು ಸಿಎಸ್‌ಪಿ ೮ ಬಾರಿ ಉಲ್ಲೇಖಿಸಲ್ಪಟ್ಟಿವೆ. 'ಗೀಳು : ಪಾಶ್ಚಿಮಾತ್ಯ ರಾಷ್ಟ್ರಗಳ ವಿರುದ್ಧ ತೀವ್ರಗಾಮಿ ಇಸ್ಲಾಂನ ಸಮರ' ವಿಡಿಯೊವನ್ನು ಸಹ ಹೊಗಳಲಾಗಿದೆ.

ಇಸ್ಲಾಮೊಫೋಬಿಯ ಜಾಲದ ಮೂಲಕ ನಡೆಸಲಾಗಿರುವ ಇಂತಹ ಒಂದು ವ್ಯವಸ್ಥಿತ ಅಪಪ್ರಚಾರದ ಪರಿಣಾಮವಾಗಿ ೨೦೦೨ರಲ್ಲಿ ಶೇಕಡ ೩೯ರಷ್ಟಿದ್ದ ಇಸ್ಲಾಂ ವಿರೋಧಿ ಅಮೆರಿಕನ್ನರ ಸಂಖ್ಯೆ ಇಂದು ಶೇಕಡ ೪೯ಕ್ಕೆ ಏರಿಕೆಯಾಗಿದೆ ಎನ್ನುತ್ತದೆ 'ವಾಷಿಂಗ್ಟನ್ ಪೋಸ್ಟ್' ಪತ್ರಿಕೆಯ ೨೦೧೦ರ ಸಮೀಕ್ಷೆ.

ಬ್ರಿಟಿಷರು ಹುಟ್ಟುಹಾಕಿದ ಮತೀಯ ಅಸಹನೆಗೆ ನೀರು, ಗೊಬ್ಬರ ಹಾಕಿ ಪೋಷಿಸಿದವರು ಭಾರತೀಯ ಉಗ್ರ ರಾಷ್ಟ್ರೀಯವಾದಿಗಳು. ಇವರು ಕೂಡ ತಮ್ಮದೇ ಆದ 'ಹಿಂದೂತ್ವ' ಸಿದ್ಧಾಂತದ ಮೂಲಕ 'ಪರಿಶುದ್ಧ' ಜನಾಂಗದ 'ಪರಿಶುದ್ಧ' ಏಕಸಂಸ್ಕೃತಿಯ ರಾಷ್ಟ್ರವೊಂದನ್ನು ನಿರ್ಮಿಸುವ ಗುರಿಯನ್ನು ಹೊಂದಿದ್ದಾರೆ. ಪಾಶ್ಚಿಮಾತ್ಯರಿಗಿಂತ ಭಿನ್ನವಾಗಿ ಭಾರತೀಯ ಮುಸ್ಲಿಂ ಮತ್ತು ಕ್ರೈಸ್ತ ಪ್ರಜೆಗಳನ್ನೇ 'ಅನ್ಯ'ರೆಂದು ಕರೆದು ಅವರನ್ನು ಗುರಿಯಾಗಿಸಿರುವುದು ಇವರ ವೈಶಿಷ್ಟ್ಯ. ''ಹಿಂದೂ ರಾಷ್ಟ್ರದಲ್ಲಿ ಉಳಿಯಬಯಸುವವರು ಎರಡನೆ ದರ್ಜೆಯ ಪ್ರಜೆಗಳಾಗಿ ಇರಬೇಕು ಇಲ್ಲವಾದರೆ ದೇಶ ಬಿಟ್ಟು ತೊಲಗಬೇಕು'' ಎಂಬ ಘೋಷವಾಕ್ಯ ಇವರ ಗುರುವಾಣಿ. ಸೈದ್ಧಾಂತಿಕವಾಗಿ ಇವರು ನಾರ್ವೆಯ ಆಂಡರ್ಸ್ ಬ್ರೆವಿಕ್‌ನಂತಹ ಉಗ್ರ ಬಲಪಂಥೀಯರಿಗೆ ಹತ್ತಿರವಾಗುತ್ತಾರಾದರೂ ಇಲ್ಲೂ ಒಂದು ವರ್ಗ ವಿಭಜನೆ ಇದೆ! ಐರೋಪ್ಯ ಉಗ್ರ ಬಲಪಂಥೀಯರ 'ಪರಿಶುದ್ಧ' ರಾಷ್ಟ್ರದಲ್ಲಿ ಅವರ ಭಾರತೀಯ ಸೋದರರ 'ಪರಿಶುದ್ಧ' ಜನಾಂಗಕ್ಕೆ ಎರಡನೆ ಅಥವಾ ಮೂರನೆ ದರ್ಜೆಯ ಸೇವಕ ಸ್ಥಾನಮಾನವನ್ನು ಕಲ್ಪಿಸಲಾಗಿದೆ!

ನವಉದಾರವಾದಿ ನೀತಿಗಳಿಗೆ ಶರಣಾಗಿರುವ ಭಾರತದಲ್ಲಿ ಇಸ್ಲಾಮೊಫೋಬಿಯ ಒಂದೇ ಅಲ್ಲ, ಕ್ರೈಸ್ತ ಮತದ್ವೇಷವೂ ಅತಿರೇಕ ಮಟ್ಟಕ್ಕೇರುತ್ತಿದೆ. ''ಅಮೆರಿಕಾ ಪ್ರಗತಿ ಕೇಂದ್ರ'' ಮಾಡಿರುವಂತಹ ಅಧ್ಯಯನವೊಂದು ಭಾರತದಲ್ಲಿಯೂ ಅತ್ಯಗತ್ಯವಾಗಿದೆ ಮಾತ್ರವಲ್ಲ, ಅತ್ಯಂತ ತುರ್ತಾಗಿ ಆಗಬೇಕಿದೆ.

**ಸುರೇಶ್ ಭಟ್ ಬಾಕ್ರಬೈಲ್**
'ಈಶಾ ವಾಸ್ಯಂ', ೨-೧೦-೭೭೬, ಬಿಜೈ
ಮಂಗಳೂರು - ೫೭೫ ೦೦೪

# ಒಲೈಸುವ ಭಾಷೆ

ಓಹೋಽಽ ಆಹಾಽಽ ಎಂಥ ಮಂಜುಳನಾದ
ಮೂಗಿನ ಹೊರಳೆ ಹೊಡೆದ ಢರಕಿಯಲಿ
ಮೈ ಮುಖದ ಮೇಲೆಲ್ಲ ಸಂಗೀತ ನಿನಾದ
ಬೆರೆತ ಉಗುಳ ವಿಷ
ಮಾತು ತುಪ್ಪ,
ಕಿಸಿದ ಹಲ್ಲು ಬೆಳ್ಳಿಯಷ್ಟೇ ಶುಭ್ರ
'ಸಂತೋಷ ತುಂಬ ಸಂತೋಷ'
'ಇವರ ಕಂಡರೆ ಅವರಿಗೆ
ಅವರ ಕಂಡರೆ ಇವರಿಗೆ'
ದಿಕ್ಕು ಲೆಕ್ಕದ ಕಡೆಗೆ
ಮನ ರಟಗೊಳಕಿ ಗೊಳ ಗೊಳ.

ಗಟಾರು, ಸೌಧ, ಸಭಾಂಗಣ, ಭವನ
ಎಲ್ಲೆಲ್ಲೂ ಹರಿವ ಗಬ್ಬು ವಾಸನೆಯ ಉಸಿರು
ಎದೆಯ ನುಡಿಸುಟ್ಟ
ಮಾರಿ ಕಳಕೊಂಡ ಮುಖದಲ್ಲಿ
ಚಂದ ನಗುತ್ತಿದೆ ಶರೀರ;
ಚಂದವೋ ಚಂದ.

ಆಹಾಽಽ ಮಂಜುಳ ನಾದ
ಈ ಊರ ಉರವಣಿಗೆ ಬೆಳೆದು
ಮಾತು ಮಾತಿನ ದುಡಿಮೆ
'ಖುಷಿಯಾಯಿತು' ನಮಸ್ಕಾರ,
'ತುಂಬ ಸಂತೋಷ ನನಗೆ
ನಿಮ್ಮ ಕಂಡರೆ'
ಬಾಯಿ ಬಿಟ್ಟರೆ ಮಾತು
ಬುತು ಬುತು ಹುಳು
ಬೇಡವಾದರೆ ಹಾಕಿಕೊ ಉರುಲು!

ಗರತಿಯರು ಗಂಗೆಯರು
ಹುಚ್ಚರು ಶಾಣ್ಯಾರು
ಮಧ್ಯೆ ಮಾತಿನ ಛತ್ರಿ
ನೆಲ ಮುಗಿಲ ತುಂಬ
ಮೂಗು ಮುಚ್ಚುವ ಗಾಳಿ



**ಬಸವರಾಜ ಹೂಗಾರ**
ಸಹಾಯಕ ನಿರ್ದೇಶಕ, ಕನ್ನಡ ಸಂಸ್ಕೃತಿ ಇಲಾಖೆ, ಕಲಾಮಂದಿರ
ವಿಶ್ವೇಶ್ವರಯ್ಯ ರಸ್ತೆ, ಮಂಡ್ಯ - ೫೭೧ ೪೦೧



# ಅಂಚೆಯಣ್ಣನ ನೆನಪಿಗೊಂದು ದಿನ

**ಅಂಚೆ ಕೊಟ್ರೇಶ್**

ಅಂಚೆ ಎಂಬ ಶಬ್ದ ಕಿವಿಗೆ ಬಿದ್ದೊಡನೆ ಅದರ ಜತೆ ಎಷ್ಟೊಂದು ನೆನಪುಗಳು ನುಗ್ಗಿಬರುತ್ತವೆ. ಬಾಲ್ಯದಲ್ಲಿ ಓದಿದ ಅಂಚೆಯಣ್ಣನ ಪದ್ಯ ನೆನಪಾಗುತ್ತದೆ. ಮನೆಯ ಹಳೆಯ ಕಪಾಟಿನಲ್ಲಿ ಬೆಚ್ಚಗೆ ಬಚ್ಚಿಟ್ಟಿದ್ದ ಮಸುಕು ಮಸುಕಾದ ಪತ್ರಗಳನ್ನು ನೇವರಿಸುತ್ತಿದ್ದರೆ, ಅದರ ಸ್ಪರ್ಶವೇ ಹಲವು ಕಥೆಗಳನ್ನು ಹೇಳುತ್ತದೆ. ಅತ್ಯಾಧುನಿಕ ಸಂಪರ್ಕ ಸಾಧನಗಳ ಭರಾಟೆಯಲ್ಲಿ ಇಂದೇಕೋ ಅಂಚೆ ಎನ್ನುವ ಶಬ್ದ ಚೂರು ಮಂಕಾದಂತೆ ಕಾಣುತ್ತದೆ. ಅದರ ನಡುವೆಯೇ ಜನಸಾಮಾನ್ಯರ ಸಂಪರ್ಕ ಸೇತುವೆಯಾಗಿ ಪುಟ್ಟ ಪುಟ್ಟ ಹಳ್ಳಿಗಳಲ್ಲಿ ಈಗಲೂ ಅಂಚೆ ಕಚೇರಿಗಳು ಆಪದ್ಬಾಂಧವರಂತೆ ಕೆಲಸ ಮಾಡುತ್ತಿವೆ. ಅಕ್ಟೋಬರ್ - ೯ ವಿಶ್ವ ಅಂಚೆ ದಿನ. ಇದು ಅಂಚೆಯಣ್ಣನನ್ನು ಮತ್ತೆ ಮತ್ತೆ ನೆನಪಿಗೆ ತರುವ ದಿನ. ನಾವು ನೂರಾರು ದಿನಾಚರಣೆಗಳನ್ನು ಆಚರಿಸಿದರೂ ಅಂಚೆ ಇಲಾಖೆಯನ್ನು ನೆನಪಿಸಿಕೊಳ್ಳುವಂಥಹ ಒಂದು ದಿನ ಇರುತ್ತದೆ ಎನ್ನುವುದು ಬಹು ಜನರಿಗೆ ಗೊತ್ತಿಲ್ಲ. ಮನಸ್ಸು ಮನಸ್ಸುಗಳ ನಡುವೆ ಸಂಬಂಧ ಬೆಸೆದ ಅಂಚೆಯಣ್ಣ ಮಾತ್ರ ಮುರುಕಲು ಸೈಕಲ್ ತುಳಿದುಕೊಂಡು ಮಾಸಲು ಖಾಕಿ ಬಟ್ಟೆ ತೊಟ್ಟುಕೊಂಡು 'ಪೋಸ್ಟ್' ಎಂದು ಕೂಗುವ ಪ್ರಾಮಾಣಿಕ ಧ್ವನಿಗೆ ಮಾತ್ರ ಇನ್ನೂ ದಣಿವಾಗಿಲ್ಲ.

ಅಂಚೆ ಇಲಾಖೆಯ ಕೆಲವು ಸಂಗತಿಗಳು ನಮ್ಮನ್ನು ಅಚ್ಚರಿಗೊಳಿಸುತ್ತವೆ. ಭಾರತದಲ್ಲಿರುವ ಅಂಚೆ ಕಛೇರಿಗಳ ಸಂಖ್ಯೆ ೧,೫೫,೫೧೬, ಪ್ರತಿ ೨೧.೧೩ ಚ.ಕಿ.ಮೀ.ಗೆ ಮತ್ತು ೬೫೮೫ ಜನರಿಗೆ ಒಂದರಂತೆ ಅಂಚೆ ಕಛೇರಿಗಳಿವೆ. ಭಾರತದಲ್ಲಿ ರೈಲ್ವೆ ಇಲಾಖೆಯನ್ನು ಹೊರತುಪಡಿಸಿದರೆ ಅತಿ ಹೆಚ್ಚು ಜನರಿಗೆ ಉದ್ಯೋಗ ನೀಡಿರುವ ವ್ಯವಸ್ಥೆ ಇದು. ಇಲ್ಲಿ ಕೆಲಸ ಮಾಡುವ ಒಟ್ಟು ನೌಕರರ ಸಂಖ್ಯೆ ೫,೪೦,೩೩೪. ಶೇಕಡ ೮೯ರಷ್ಟು ಅಂಚೆ ಕಛೇರಿಗಳು ಹಳ್ಳಿಗಳಲ್ಲಿ ಕಾರ್ಯ ನಿರ್ವಹಿಸುತ್ತವೆ. ಚೀನಾದಲ್ಲಿ ೬೬,೩೯೩, ಅಮೇರಿಕದಲ್ಲಿ ೩೭,೧೫೯, ಫ್ರಾನ್ಸ್‌ನಲ್ಲಿ ೧೬,೯೪೭, ಆಸ್ಟ್ರೇಲಿಯಾದಲ್ಲಿ ೩,೮೪೪, ಇಂಗ್ಲೆಂಡ್‌ನಲ್ಲಿ ೧೪,೬೦೯, ಜಪಾನ್‌ನಲ್ಲಿ ೨೪,೬೭೮ರಷ್ಟು ಅಂಚೆ ಕಛೇರಿಗಳಿವೆ. ಆದರೆ ಈ ಯಾವ ದೇಶಗಳಲ್ಲಿಯೂ ಭಾರತದಂತೆ ಅಂಚೆ ಇಲಾಖೆಯ ಸೇವೆಯನ್ನು ಹಳ್ಳಿಹಳ್ಳಿಗಳಿಗೆ ವಿಸ್ತರಿಸಲು ಸಾಧ್ಯವಾಗಿಲ್ಲ ಎನ್ನುವುದನ್ನು ಮರೆಯುವಂತಿಲ್ಲ.

**ಇತಿಹಾಸದ ಪುಟದೊಳಗಣ ಅಂಚೆ...**

ಅಂಚೆಯ ಇತಿಹಾಸ ಕುತೂಹಲಕಾರಿಯಾಗಿದೆ. ರಾಮಾಯಣದ ಹನುಮಂತ ವಿಶ್ವದ ಮೊಟ್ಟಮೊದಲ ಅಂಚೆಯಣ್ಣ, ನಂತರ ನಳದಮಯಂತಿ ಪುರಾಣದ ಪಾರಿವಾಳಗಳು ಈಚಿನವರೆಗೂ ಅಂಚೆ ಇಲಾಖೆಯ ಚಿಹ್ನೆಗಳಾಗಿದ್ದವು. ಪ್ರಪಂಚದ ಮೊದಲ ಅಂಚೆ ವ್ಯವಸ್ಥೆ ಸುಮಾರು ೪೦೦೦ ವರ್ಷಗಳ ಹಿಂದೆ ಬ್ಯಾಬಿಲೋನಿಯಾದಲ್ಲಿ ಬರಹವಿರುವ ಮಣ್ಣಿನ ಫಲಕಗಳನ್ನು ಕೊಂಡೊಯ್ದು ಸಂಬಂಧಪಟ್ಟವರಿಗೆ ತಲುಪಿಸುವ ಮೂಲಕ ಆರಂಭವಾಗಿದೆ. ನಂತರ ಕಂಚಿನ ಫಲಕ ಜಾರಿಯಾಯಿತು. ಇದೇ ಕಾಲದಲ್ಲಿ ಈಜಿಪ್ಟಿಯನ್ನರು ದೂತರ ಮೂಲಕ ಅಂಚೆ ಕಳಿಸುವ ವ್ಯವಸ್ಥೆ ಜಾರಿಗೊಳಿಸಿದ್ದರು. ಆಗ ತರಬೇತಿ ಪಡೆದ ಪಾರಿವಾಳಗಳ ಮೂಲಕ ಸಂದೇಶ ಕಳುಹಿಸುವುದೂ ಇತ್ತು.

ಅಂಚೆಗಾಗಿ ಅಶ್ವಾರೋಹಿಗಳನ್ನು ಮೊದಲು ಬಳಸಿದ್ದು ಪರ್ಷಿಯಾದ ಸೈರಸ್ ದೊರೆ. ಕ್ರಿ. ಪೂ. ಆರನೇ ಶತಮಾನದಲ್ಲಿ ಕುದುರೆಗಳನ್ನೇರಿ ಓಲೆಕಾರರು ಕಾಡು, ಮೇಡು ಚಳಿಗಾಳಿಯೆನ್ನದೆ ತಮ್ಮ ಕರ್ತವ್ಯ ಪಾಲಿಸುತ್ತಿದ್ದರು. ಮೊದಮೊದಲು ರಾಜಸಂದೇಶಗಳಿಗೆ ಮಾತ್ರ ಸೀಮಿತವಾಗಿದ್ದ ಇದನ್ನು ಫ್ರಾನ್ಸಿನ ೧೧ನೇ ಲೂಯಿ ದೊರೆ

ಸಾರ್ವಜನಿಕರಿಗೂ ವಿಸ್ತರಿಸಿದನು. ೧೬೬೪ರಲ್ಲಿ ಅಂಚೆ ವಾಹಕರನ್ನು ನಿಗದಿತ ದಿನಗಳಲ್ಲಿ ಕಳಿಸುವಂತೆ ಮಾಡಿದ ಕೀರ್ತಿ ದೊರೆ ಲೂಯಿಗೆ ಸಲ್ಲುತ್ತದೆ. ಸಾರ್ವಜನಿಕ ಕಾಗದಗಳನ್ನು ಸಂದೇಶಗಳನ್ನು ರವಾನಿಸುವ ಪದ್ಧತಿ ಜಾರಿಗೆ ಬಂದನಂತರ ಇಂಗ್ಲೆಂಡ್ ಫ್ರಾನ್ಸ್‌ಗಳಲ್ಲಿ ಬಹುವರ್ಷಗಳ ಕಾಲ ಅಧಿಕಾರಿಗಳು ಎಲ್ಲಾ ಪತ್ರಗಳನ್ನು ಓದಿ ಕಳಿಸುತ್ತಿದ್ದರು. ಕಾಲ ಕಳೆದಂತೆ ಅಂಚೆ ಸಾಗಿಸುವ ಕೆಲಸವನ್ನು ರೈಲುಗಳಿಗೆ ವಹಿಸಲಾಯಿತು. ಇಂಗ್ಲೆಂಡಿನಲ್ಲಿ ಮ್ಯಾಂಚೆಸ್ಟರ್ ಹಾಗೂ ಲಿವರ್‌ಪೂಲ್ ನಡುವೆ ೧೮೩೦ರಲ್ಲಿ ಮೊದಲ ಬಾರಿಗೆ ಅಂಚೆ ಚೀಲಗಳನ್ನು ಹೊತ್ತು ರೈಲು ಓಡಿತು.

ಅಂಚೆ ಶುಲ್ಕದ ಇತಿಹಾಸವೂ ಕುತೂಹಲಕರ. ೧೬೮೮ರಲ್ಲಿ ಲಂಡನ್ನಿನಲ್ಲಿ ''ಥಾಮಸ್ ವಿದರಿಂಗ್ಸ್'' ಎಂಬಾತ ಪೆನ್ನಿ ಪೋಸ್ಟ್ ವ್ಯವಸ್ಥೆಯನ್ನು ಜಾರಿಗೊಳಿಸಿದ. ಒಂದು ಪೌಂಡ್ ತೂಕದವರೆಗೆ ಒಂದು ಪೆನ್ನಿ ದರ ವಿಧಿಸಲಾಗುತ್ತಿತ್ತು, ಮುಂದೆ ಇದು ಅಂಚೆಯ ವ್ಯವಸ್ಥೆಯಲ್ಲಿ ಲೀನವಾಯಿತು. ಮೊದಲು ಅಂಚೆಯನ್ನು ಯಾರಿಗೆ ಬರೆಯಲಾಗಿದೆಯೋ ಅವರಿಂದ ಶುಲ್ಕ ವಸೂಲಿ ಮಾಡಲಾಗುತ್ತಿತ್ತು. ಇದು ತುಂಬ ಕಷ್ಟಸಾಧ್ಯವಾಯಿತು. ಆಗ ಇಂಗ್ಲೆಂಡ್‌ನಲ್ಲಿ ೧೮೩೭ರಲ್ಲಿ ಸಾರ್ವಜನಿಕ ಅಂಚೆ ಪದ್ಧತಿ ಜಾರಿಗೆ ಬಂದ ಮೇಲೆ ಸರ್ಕಾರ ಕಾಗದ ಪತ್ರಗಳನ್ನು ಕಳಿಸುವ ಮೊದಲೇ ಶುಲ್ಕ ವಸೂಲಿ ಮಾಡುವುದರ ಬಗ್ಗೆ ಯೋಚಿಸಿತು. ಇದು ಇಂಗ್ಲೆಂಡಿನ ರೋಲೆಂಡ್ ಹಿಲ್ ಎಂಬ ಯೋಜನೆಯ ಅಡಿಯಲ್ಲಿ ಜಾರಿಗೆ ಬಂದಿತು.

**ಅಂಚೆ ಚೀಟಿಯೆಂಬ ಮಿನಿ ಮಿನಿ ಫೋಟೋಗ್ರಾಫ್ಸ್...**

ಅಂಚೆ ಚೀಟಿಗಳೆಂದರೆ ಬಾಲ್ಯದಲ್ಲಿ ಕಾಡುವ ಬಿಂಬಗಳು. ವಿಶ್ವದ ಮೊದಲ ಅಂಚೆ ಚೀಟಿ ಬ್ರಿಟನ್ನಿನಲ್ಲಿ ೧೮೪೦ ಮೇ ೬ರಂದು ಬಿಡುಗಡೆಯಾಯಿತು. ಕಪ್ಪು ಬಣ್ಣದ ಮೊದಲ ಅಂಚೆ ಚೀಟಿಯ ಬೆಲೆ ಒಂದು ಪೆನ್ನಿಯಾಗಿತ್ತು, ನಂತರ ಆಂಗ್ಲ ಸರ್ಕಾರ ಎರಡು ಪೆನ್ನಿ ಬೆಲೆಯ ಇಂಗ್ಲೆಂಡ್ ರಾಣಿಯ ಚಿತ್ರವಿರುವ ನೀಲಿ ಬಣ್ಣದ ಅಂಚೆ ಚೀಟಿಯನ್ನು ಬಿಡುಗಡೆ ಮಾಡಿತು. ನಂತರ ಈ ವ್ಯವಸ್ಥೆ ಜಗತ್ತಿನೆಲ್ಲೆಡೆ ಜನಪ್ರಿಯವಾಯಿತು.

೧೭೬೬ರಲ್ಲಿ ಭಾರತದಲ್ಲಿ ರಾಬರ್ಟ್ ಕ್ಲೈವ್ ಮೊದಲಿಗೆ ಅಂಚೆ ವ್ಯವಸ್ಥೆಯನ್ನು ಜಾರಿಗೊಳಿಸಿದ. ಆಗ ಅದು ಕೇವಲ ಸರ್ಕಾರಿ ಮಟ್ಟದಲ್ಲಿತ್ತು, ಮುಂದೆ ೧೮೩೭ರಲ್ಲಿ ಅದು ಸಾರ್ವಜನಿಕರಿಗೆ, ಜನಸಾಮಾನ್ಯರಿಗೆ ತಲುಪತೊಡಗಿತು. ಭಾರತದ ಅಂಚೆ ವ್ಯವಸ್ಥೆಯನ್ನು ಡೈರಕ್ಟರ್ ಜನರಲ್ ಅಧೀನಕ್ಕೆ ಒಳಪಡಿಸಿ ಅಂಚೆ ಶುಲ್ಕವನ್ನು ನಿರ್ಧರಿಸಲಾಯಿತು. ಭಾರತದ ಕರಾಚಿಯಲ್ಲಿ ಮೊದಲ ಅಂಚೆ ಚೀಟಿಯನ್ನು ತಯಾರಿಸಲಾಯಿತು, ೧೮೫೨ರಲ್ಲಿ ಆಗಿನ ಸಿಂಧ್‌ನ ಕಮಿಷನರ್ ಬರ್ನಾರ್ಡ್ ಫ್ರೀರ್ ಅಂಚೆ ಶುಲ್ಕವನ್ನು ಮೊದಲೇ ಪಡೆಯುವುದಕ್ಕಾಗಿ ಅಂಚೆ ಚೀಟಿಯನ್ನು ಜಾರಿಗೆ ತಂದನು. ಪಂಡಿತ್ ನೆಹರೂ ಅವರು ''ಅಂಚೆ ಚೀಟಿಗಳು ಒಂದು ದೇಶದ ಪುರಾತನ ಸಂಪ್ರದಾಯ ಮತ್ತು ಸ್ವಭಾವವನ್ನು ವಿದೇಶಿಯರಿಗೆ ಪರಿಚಯ ಮಾಡಿ ಕೊಡುವ ತೆರೆದ ಕಿಟಕಿಗಳು'' ಎಂದು ಅಂಚೆ ಚೀಟಿಗಳ ಮಹತ್ವವನ್ನು ಸಾರಿದ್ದರು.

ನಂತರದ ದಿನಗಳಲ್ಲಿ ಅಂಚೆ ಚೀಟಿಯೆಂಬ ಮಿನಿ ಮಿನಿ ಫೋಟೋಗ್ರಾಫ್‌ನಲ್ಲಿ ಕಲೆ, ಸಂಸ್ಕೃತಿ, ಪರಂಪರೆ, ಭೌಗೋಳಿಕ ಅಂಶಗಳು, ಪ್ರಾಣಿ-ಪಕ್ಷಿಗಳು, ಐತಿಹಾಸಿಕ ಘಟನೆಗಳು, ಸ್ವಾತಂತ್ರ್ಯ ಹೋರಾಟಗಾರರು, ಶಿಲ್ಪ ಕಲೆಗಳು ಕಾಣಿಸತೊಡಗಿದವು. ಅಂಚೆ ಚೀಟಿಯ ಸಂಗ್ರಹ ಇಂದು ಒಳ್ಳೆಯ ಹವ್ಯಾಸವಾಗಿ ಜನಪ್ರಿಯವಾಗಿದೆ. ಭಾರತದಲ್ಲಿ ಮೊದಲ ಬಾರಿಗೆ ೧೯೫೪ರಲ್ಲಿ ಅಂತರರಾಷ್ಟ್ರೀಯ ಫಿಲಾಟಲಿ ನವದೆಹಲಿಯಲ್ಲಿ ಆರಂಭವಾಯಿತು.

**ಪಿನ್ ಕೋಡ್ ಎಂಬ ಮಹಾ ಮಂತ್ರ...**

ಯಾವುದೋ ಗುಪ್ತ ಸಂಖ್ಯೆಯಂತೆ ಕಾಣುತ್ತಿದ್ದ ಪೋಸ್ಟಲ್ ಇಂಡೆಕ್ಸ್ ನಂಬರ್ ಅಂಚೆ ವಿತರಣೆಯನ್ನು ಸುಲಭವಾಗಿಸಿದ ಮಹಾಮಂತ್ರ. ೧೯೭೨ ಆಗಸ್ಟ್ ೧೫ರಂದು ಇದು ಭಾರತದಲ್ಲಿ ಜಾರಿಯಾಯಿತು. ಇದರ ಪ್ರಕಾರ ಭಾರತ ದೇಶದ ಎಲ್ಲಾ ರಾಜ್ಯಗಳನ್ನು ೮ ವಲಯಗಳಾಗಿ ವಿಂಗಡಿಸಲಾಗಿದೆ. ಪಿನ್ ಕೋಡ್‌ನ ೬ ಅಂಕೆಗಳು ಒಂದೊಂದು ಅಂಕೆಯ ಒಂದೊಂದು ಇತಿಹಾಸವನ್ನು ಹೇಳುತ್ತವೆ. ಪಿನ್ ಕೋಡಿನ ಮೊದಲ ಅಂಕೆ ಆಯಾ ರಾಜ್ಯವನ್ನು ಪ್ರತಿನಿಧಿಸುತ್ತವೆ, ೨ ಮತ್ತು ೩ ರಾಜ್ಯದ ಜಿಲ್ಲೆಗಳನ್ನು ಪ್ರತಿನಿಧಿಸಿದರೆ ೪ ಮತ್ತು ೫ ತಾಲೂಕುಗಳನ್ನು ಪ್ರತಿನಿಧಿಸುತ್ತವೆ, ಕೊನೆಯ ಅಂಕೆ ಆಯಾ ಊರನ್ನು ಅಥವಾ ಸಬ್-ಪೋಸ್ಟ್ ಆಫೀಸ್‌ನ್ನು ಪ್ರತಿನಿಧಿಸುತ್ತವೆ.

**ರೈಲಿನೊಳಗೆ ಚುಕು ಬುಕು ಮೇಲ್...**

ತೆರೆಯ ಮರೆಯಲ್ಲಿದ್ದು ಸಾರ್ವಜನಿಕ ಸಂಪರ್ಕ ಸೇವೆಯನ್ನು ತುಂಬ ಪ್ರಾಮಾಣಿಕವಾಗಿ ನಿಭಾಯಿಸುತ್ತಿರುವುದು ಅಂಚೆ ಇಲಾಖೆಯ ರೈಲ್ವೆ ಮೇಲ್ ಸರ್ವೀಸ್. ಇದಕ್ಕೆ ಅಂಚೆ ವಿಂಗಡಣಾ ವಿಭಾಗ (ಸಾರ್ಟಿಂಗ್ ಡಿವಿಜನ್) ಎಂದು ಕರೆಯುತ್ತಾರೆ. ಒಂದು ಕಡೆಯಿಂದ ಮತ್ತೊಂದು ಕಡೆಗೆ ಕಳಿಸುವ ಪತ್ರ, ನೋಂದಾಯಿತ ಪತ್ರ, ಮನಿಯಾರ್ಡರ್, ಪಾರ್ಸಲ್ ಹಾಗೂ ತ್ವರಿತ ಅಂಚೆ ಮುಂತಾದವುಗಳನ್ನು ಕರಾರುವಾಕ್ಕಾಗಿ ಆಯಾ ಸ್ಥಳಗಳಿಗೆ ವಿಂಗಡಿಸಿ ಕಳಿಸುವ ಕೇಂದ್ರ ಸರ್ಕಾರದ ಸಂಸ್ಥೆಯೇ ಈ ಆರ್.ಎಂ.ಎಸ್.

ಈ ಸಂಸ್ಥೆಯಲ್ಲಿ ಹಗಲು ರಾತ್ರಿಯೆನ್ನದೆ ಸಿಬ್ಬಂದಿಯವರು ಕೆಲಸ ನಿರ್ವಹಿಸುತ್ತಾರೆ, ಎಲ್ಲಾ ಊರುಗಳಿಂದ ಬಂದ ಅಂಚೆ ಪರಿಕರಗಳನ್ನು ರಾತ್ರಿ ಇಡಿ ವಿಂಗಡಣೆ ಮಾಡಿ ಬೆಳಿಗ್ಗೆ ಬೇರೆ ಊರಿಗೆ ಹೋಗುವ ಕಾಗದ ಪತ್ರಗಳನ್ನು ಬೇರೆ ಬೇರೆ ಮಾಡಿ ಆಯಾ ಊರಿಗೆ ಬ್ಯಾಗ್ ಕಟ್ಟಿ ಕಳಿಸುತ್ತಾರೆ. ಈ ಸಿಬ್ಬಂದಿಗೆ ಪಿನ್ ಕೋಡ್ ಎನ್ನುವುದು ಮಹಾಮಂತ್ರ. ಆದ್ದರಿಂದ ಬಳಕೆದಾರರು ತಮ್ಮ ಪತ್ರಗಳ ಮೇಲೆ ಪಿನ್ ಕೋಡ್ ಹಾಕುವುದನ್ನು ಮರೆಯಬಾರದು.






**ವಿಮಾನದಲ್ಲೂ ಹಾರಿತು ಅಂಚೆ...**

೧೮೩೦ರಲ್ಲಿ ಇಂಗ್ಲೆಂಡ್ ಮತ್ತು ಭಾರತದ ನಡುವೆ ಅಂಚೆ ಸಾಗಾಟ ಆರಂಭವಾಯಿತು. ಮೊದಲು ಹಡಗುಗಳನ್ನು ಬಳಸಲಾಗುತ್ತಿತ್ತು. ಪ್ರಪಂಚದಲ್ಲಿ ಮೊದಲ ಬಾರಿಗೆ ವಿಮಾನದ ಮೂಲಕ ಅಂಚೆ ಸಾಗಿಸಿದ ಕೀರ್ತಿ ಭಾರತಕ್ಕಿದೆ, ೧೯೧೧ರಲ್ಲಿ ಫೆಬ್ರವರಿ ೧೮ರಂದು ಉತ್ತರ ಭಾರತದಲ್ಲಿ ವಿಮಾನದ ಮೂಲಕ ಅಂಚೆ ಸಾಗಾಟ ಆರಂಭವಾಯಿತು, ೧೯೧೮ರಲ್ಲಿ ಇಂಗ್ಲೆಂಡ್ ಮತ್ತು ಅಮೇರಿಕ ಅಂಚೆ ಸಾಗಾಟಕ್ಕಾಗಿ ವಿಮಾನ ಬಳಸಿದವು.

**ಟೆಲಿಗ್ರಾಫ್ ಎಂಬ ಭಯ ಹುಟ್ಟಿಸುವ ಪದ...**

ಹಳ್ಳಿಗಳಲ್ಲಿ ಟೆಲಿಗ್ರಾಫ್ ಎಂದರೆ ಸತ್ತ ಸುದ್ದಿ ಎನ್ನುವ ಭಯ ಆತಂಕದ ಪದವಾಗಿ ಬಳಕೆಯಾಗುತ್ತಿತ್ತು. ಮೊದಲು ೧೮೫೧ರಲ್ಲಿ ಅಂಚೆ ತಂತಿ ಮೂಲಕ ಸುದ್ದಿ ರವಾನಿಸುವ ವ್ಯವಸ್ಥೆ ಆರಂಭವಾಯಿತು. ಕಲ್ಕತ್ತ ಮತ್ತು ಡೈಮಂಡ್ ಹಾರ್ಬರ್ ನಡುವೆ ಪ್ರಥಮ ಬಾರಿಗೆ ಅಂಚೆ ತಂತಿ ವ್ಯವಸ್ಥೆಗೆ ಚಾಲನೆ ದೊರೆಯಿತು. ೧೯೦೫ರಲ್ಲಿ ಅಂಚೆ ತಂತಿಯಿಲ್ಲದೆ ಸಮಾಚಾರ ಸಾಗಿಸುವ ವ್ಯವಸ್ಥೆ ಪ್ರಾರಂಭ. ಸಂಕೇತ ಭಾಷೆ ಬಳಸುವ ಮಾರ್ಸ್ ಟೆಲಿಗ್ರಾಫ್ ೧೯೦೮ರಲ್ಲಿ ಜಾರಿಗೆ ಬಂತು, ೧೮೭೦ರಲ್ಲಿ ಭಾರತ ಇಂಗ್ಲೆಂಡ್ ನಡುವೆ ಸಮುದ್ರದೊಳಗಿಂದ ತಂತಿ ಸಂಬಂಧ ಏರ್ಪಡಿಸಲಾಯಿತು.



**ಇ-ಪೋಸ್ಟ್ ಎಂಬ ಹೊಸ ಸಂಗಾತಿ...**

ಈ ಮೇಲ್ ಆ ಮೇಲ್‌ಗಳ ಭರಾಟೆಯಲ್ಲಿ, ಮೊಬೈಲ್‌ನ ಎಸ್.ಎಂ.ಎಸ್.ಗಳ ಹಾವಳಿಯಲ್ಲಿ ಅಂಚೆ ಇಲಾಖೆ ತತ್ತರಿಸಿದಂತೆ ಕಂಡರೂ, ಅಂತರ್ಜಾಲದ ಮೂಲಕ ಹೊಸ ಹೊಸ ಹಾದಿಗಳನ್ನು ಶೋಧಿಸುತ್ತಿದೆ. ಇಂತಹ ಹೊಸ ಹಾದಿಯಲ್ಲಿ ಸಿಕ್ಕ ಸಂಗಾತಿಯೇ ಈ-ಪೋಸ್ಟ್. ಸಂದೇಶಗಳನ್ನು ಕ್ಷಣಾರ್ಧದಲ್ಲಿ ಜಗತ್ತಿನ ಯಾವುದೇ ಮೂಲೆಗೂ ಮುಟ್ಟಿಸುವ ವೇಗವನ್ನು ಈಗತಾನೇ ಕಂಡುಕೊಳ್ಳುತ್ತಿದೆ.

**ಇ-ಎಂ. ಓ.ನಲ್ಲಿ ಝಣ ಝಣ ಕಾಂಚಣ...**

ದೊಡ್ಡ ಕಿರಾಣಿ ಅಂಗಡಿಯ ಹಾಗೆ ಈ ಅಂಚೆ ಕಛೇರಿ, ಬಳಕೆದಾರರು ೨೫ ಪೈಸೆಯಿಂದ ಹಿಡಿದು ಲಕ್ಷಾಂತರ ರೂಪಾಯಿಯ ವ್ಯವಹಾರವನ್ನು ಮಾಡಬಹುದು. ೧೯೭೭ರಲ್ಲಿ ಪ್ರಾರಂಭವಾದ ಮನಿ ಆರ್ಡರ್ (ಧನಾದೇಶ) ಈಗ ಅಂತರ್ಜಾಲದ ಮೂಲಕ ಈ-ಎಂ. ಓ. ಆಗಿ ಮಾರ್ಪಟ್ಟಿದೆ, ಹಾಗೂ ದೇಶದ ಯಾವ ಮೂಲೆಗೆ ಬೇಕಾದರೂ ಇದನ್ನು ಬಳಕೆದಾರರು ಬಳಸಿಕೊಳ್ಳಬಹುದಾಗಿದೆ.

**ನವನವೀನಗೊಳ್ಳಲಿದೆ ಅಂಚೆ ಇಲಾಖೆಯೂ ಕೂಡ...**

ಈಗ ಹೊಸ ಕಾಲಕ್ಕೆ ತಕ್ಕಂತೆ ಅಂಚೆ ಇಲಾಖೆಯೂ ನವನವೀನಗೊಳ್ಳುವ ಹುಮ್ಮಸ್ಸಿನಲ್ಲಿದೆ. ೧೯೮೦ರಲ್ಲಿ ಪ್ರಾರಂಭವಾದ ಸಂಚಿನ ಠೇವಣಿ ಬ್ಯಾಂಕ್ ಈಗ ಬೃಹದಾಕಾರವಾಗಿ ಬೆಳೆದಿದೆ, ಪೋಸ್ಟ್ ಆಫೀಸ್‌ಗಳು ಬ್ಯಾಂಕ್‌ಗಳಾಗಿ ಪರಿವರ್ತನೆಯಾಗುವ ಕಾಲ ದೂರವಿಲ್ಲ. ಇಲ್ಲೂ ಸಾಲ ಸಿಗಲಿದೆ. ಮನಿ ಆರ್ಡರ್ ಜೊತೆಗೆ ಡಿ.ಡಿ. ಚೆಕ್ ಬುಕ್ ಲಭ್ಯವಾಗುತ್ತವೆ, ಎ.ಟಿ.ಎಂ. ಕೂಡ ಆರಂಭವಾಗುತ್ತವೆ. ಈಗಾಗಲೇ ಸಣ್ಣ ಪ್ರಮಾಣದಲ್ಲಿ ಬ್ಯಾಂಕ್‌ನಂತೆ ಕಾರ್ಯ ನಿರ್ವಹಿಸುತ್ತಿವೆ.

ಜನರಲ್ಲಿ ಸಣ್ಣ ಉಳಿತಾಯದ ಕಲ್ಪನೆ ಮೊಳಕೆಯೊಡೆದದ್ದೇ ಈ ಅಂಚೆ ಇಲಾಖೆಯಿಂದ. ಬ್ಯಾಂಕುಗಳು ಈಗಲೂ ೫೦೦/-, ೧೦೦೦- ರೂ ಆರಂಭಿಕ ಉಳಿತಾಯ ಖಾತೆಗೆ ಹಣ ತೆಗೆದುಕೊಂಡರೆ ಬರಿ ೫೦/-ರೂ.ಗೆ ಖಾತೆ ತೆರೆಯುವ







ಅವಕಾಶ ಮಾಡಿಕೊಟ್ಟ ಕೀರ್ತಿ ಪೋಸ್ಟ್ ಆಫೀಸಿಗೆ ಸಲ್ಲುತ್ತದೆ. ವಾರ್ಷಿಕ ಶೇಕಡಾ ೮ರಂತೆ ಬಡ್ಡಿ ನೀಡುವ ಎಂ.ಐಯ್.ಎಸ್. ಸ್ಕೀಮ್ ಪಿಂಚಣಿದಾರರಿಗೆ ವರವಾಗಿ ಪರಿಣಮಿಸಿದೆ. ಹಾಗೂ ೮ ವರ್ಷ ೭ ತಿಂಗಳಿಗೆ ಹಣ ದ್ವಿಗುಣವಾಗುವ ಕಿಸಾನ್ ವಿಕಾಸ ಪತ್ರ, ಇನ್‌ಕಮ್ ಟ್ಯಾಕ್ಸ್ ಉಳಿಸಲು ಅನುಕೂಲವಾಗುವ ಎನ್.ಎಸ್.ಸಿ.ಗಳು ಬಳಕೆದಾರರಿಗೆ ಲಭ್ಯ.

**ಬದುಕಿಗೊಂದು ಅಂಚೆಯ ಜೀವವಿಮೆ...**

೧೮೮೪ರಲ್ಲಿ ಅಂಚೆ ಜೀವವಿಮೆ ಜಾರಿಗೆ ಬಂದರೂ ದೇಶದ ಎಲ್ಲಾ ಬಳಕೆದಾರರಿಗೆ ಮುಟ್ಟುವಲ್ಲಿ ಇನ್ನೂ ಯಶಸ್ವಿಯಾಗಿಲ್ಲ. ಕಾರಣ ಬೇರೆ ಬೇರೆ ಖಾಸಗಿ ಕಂಪನಿಗಳು ಪ್ರಚಾರದ ಮೂಲಕ ಮುಂಚೂಣಿಯಲ್ಲಿವೆ. ಯಾವುದೇ ಕಮೀಷನ್, ಏಜೆಂಟ್ ಇಲ್ಲದೆ ಎಲ್ಲಾ ಖಾಸಗಿ ಕಂಪನಿಗಳಿಗಿಂತಲೂ ಹೆಚ್ಚು ಬೋನಸ್ ಕೊಡುವ ಏಕೈಕ ಕೇಂದ್ರ ಸರ್ಕಾರದ ಸೌಲಭ್ಯವೇ ಈ ಅಂಚೆ ಜೀವವಿಮೆ. ಮೊದಮೊದಲು ಬರಿ ಸರ್ಕಾರಿ ನೌಕರಿಗಾಗಿ ಮೀಸಲಿದ್ದದ್ದು ಈಗ ಹಳ್ಳಿಯ ಪ್ರತಿಯೊಬ್ಬ ಪ್ರಜೆಗೂ ಸಹ ವಿಮೆ ಮಾಡಿಸುವ ಉದ್ದೇಶದಿಂದ ೧೯೯೪ರಿಂದ ''ಗ್ರಾಮೀಣ ಅಂಚೆ ಜೀವವಿಮೆ'' ಜಾರಿಗೆ ತಂದಿದೆ. ಇದಲ್ಲದೆ ಲಾಜಿಸ್ಟಿಕ್ ಪೋಸ್ಟ್ (ರೈಟ್ ಟು ಇನ್‌ಫರ್ಮೆಶನ್ ಆಕ್ಟ್) ಕೂಡ ಬಳಕೆಯಲ್ಲಿದೆ. ಹೀಗೆ ಹೊಸ ಹೊಸ ಹೆಜ್ಜೆಗಳನ್ನು ಅಂಚೆ ಇಲಾಖೆ ಇಡುತ್ತಲೇ ಇದೆ.

**ಅಂಚೆ ಕೊಟ್ರೇಶ್**
ಸಬ್ ಪೋಸ್ಟ್ ಮಾಸ್ಟರ್, ಕೂಡ್ಲಿಗಿ - ೫೮೩ ೧೩೫

ಆತ್ಮೀಯ ಓದುಗರೇ, ನಮಸ್ಕಾರ.

ಹನ್ನೆರಡು ವರ್ಷಗಳನ್ನು ಪೂರೈಸಿ ಹದಿಮೂರಕ್ಕೆ ಕಾಲಿಟ್ಟ 'ಹೊಸತು' ಮಾಸಪತ್ರಿಕೆಯನ್ನು ಪ್ರೋತ್ಸಾಹಿಸಿ ಬೆಳೆಸುತ್ತಿರುವ ನಿಮಗೆ ನಾವು ಆಭಾರಿಯಾಗಿದ್ದೇವೆ. ಪ್ರಗತಿಪರ - ವೈಚಾರಿಕ ನಿಲುವಿನೊಂದಿಗೆ ದಾಪುಗಾಲು ಹಾಕುತ್ತಾ ಮುನ್ನಡೆಯುತ್ತಿರುವ ಈ ಪತ್ರಿಕೆಯ ಬಗ್ಗೆ ನಿಮಗೆ ಸದಭಿಪ್ರಾಯವೇ ಇದೆಯೆಂದು ನಾವು ಬಲ್ಲೆವು.

ಇಂಥ ವಿಚಾರ ಪ್ರಚೋದಕ ಪತ್ರಿಕೆಯನ್ನು ನೀವು ಮೆಚ್ಚಿದ್ದೀರಾದರೆ ನಿಮ್ಮ ಸ್ನೇಹಿತರ ಬಳಗಕ್ಕೆ ಪರಿಚಯಿಸಿ ಅದರ ಧ್ಯೇಯೋದ್ದೇಶಗಳನ್ನು ಇನ್ನೂ ಹೆಚ್ಚಿನ ಜನರಿಗೆ ತಲುಪಿಸಲು ಸಹಕರಿಸುತ್ತೀರಾ ? ನೀವು ಭಾಗವಹಿಸುವ ಶುಭ ಸಮಾರಂಭಗಳಲ್ಲಿ, ಹುಟ್ಟುಹಬ್ಬಗಳಲ್ಲಿ, ಪ್ರತಿಭಾ ಪುರಸ್ಕಾರ ನೀಡುವ ಸಂದರ್ಭಗಳಲ್ಲಿ ಉಡುಗೊರೆ ನೀಡಬೇಕಾದಾಗ 'ಹೊಸತು' ಪತ್ರಿಕೆಯ ಚಂದಾವನ್ನೇ ಉಡುಗೊರೆ ರೂಪದಲ್ಲಿ ನೀಡಬಹುದಲ್ಲವೆ ? ನೀವು ಕೊಡುವ ಉಡುಗೊರೆ ಜ್ಞಾನದ ಕೊಡುಗೆಯಾಗಿ ಸಂತೋಷ ನೀಡುತ್ತದಲ್ಲವೆ ? ಯಾರಿಗೆ ಉಡುಗೊರೆ ನೀಡಬೇಕೆಂದಿರುವಿರೋ ಅವರ ವಿಳಾಸ ಮತ್ತು ಚಂದಾ ಮೊಬಲಗನ್ನು ನಮ್ಮ ವಿಳಾಸಕ್ಕೆ ಕಳಿಸಿದರೆ ನೀವು ತಿಳಿಸಿದ ವಿಳಾಸಕ್ಕೆ ಪತ್ರಿಕೆ ಕಳಿಸುವ ಜವಾಬ್ದಾರಿ ನಮ್ಮದು. ಯೋಚಿಸಿ, ಇದಕ್ಕೆ ಸ್ಪಂದಿಸುತ್ತೀರೆಂಬ ವಿಶ್ವಾಸ ನಮ್ಮದು.

ಚಂದಾ ನೋಂದಾವಣೆ ಚಳುವಳಿಯನ್ನು ಬೆಂಬಲಿಸಿ. ನಿಮ್ಮ ಸ್ನೇಹಿತರನ್ನೂ ಚಂದಾದಾರರನ್ನಾಗಿಸಿ. ಅವರೂ ಚಂದಾ ಉಡುಗೊರೆ ನೀಡುವಂತೆ ಪ್ರೇರೇಪಿಸಿ.

**ಚಂದಾ ವಾರ್ಷಿಕ ₹ ೧೫೦.೦೦ * ಮೂರು ವರ್ಷಕ್ಕೆ ₹ ೩೫೦.೦೦**

ಚಂದಾ ಮೊಬಲಗನ್ನು ಎಂ. ಓ. ಅಥವಾ ಡಿ. ಡಿ. ಮೂಲಕ ಕಳಿಸಬಹುದು.

ಚಂದಾ ಕಳುಹಿಸಬೇಕಾದ ವಿಳಾಸ :

**ಹೊಸತು**

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್

ನಂ. ೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕೆ. ಪಿ. ಈಸ್ಟ್, ಬೆಂಗಳೂರು - ೫೬೦ ೦೦೧

# ತಿದಿ ಊದಿದ ಹುಡುಗ ತುದಿ ಮುಟ್ಟಿದ ಕಥನ

ಡಾ|| ವೀರೇಶ ಬಡಿಗೇರ



'ಚಿಗುರಿಗಿ ನೀರ ಹಾಕರೆಲೆ...' ಕರಿಮಾಯಿ ಕಾದಂಬರಿಯಲ್ಲಿ ಚಿಮಣಾ, ಮೈದುಂಬಿ ಹೇಳುವ ಮಾತಿದು. ದೇವರು ದೈವವೆಂಬ ಸ್ಥಳೀಯ ಪ್ರಬಲ ನಂಬಿಕೆಗಳನ್ನು ಅವಹೇಳನ ಮಾಡುವ ಮಾತೂ ಆದಂತೆ, ಸತ್ಯದ ಮೇಲೆ ಸುಳ್ಳು, ಸ್ಥಳೀಯತೆಯ ಮೇಲೆ ಅನ್ಯ ಆಕ್ರಮಣದ ಸವಾರಿಯೂ ಆಗಿದೆ. ಕಂಬಾರರ ಒಟ್ಟು ಚಿಂತನೆ ಹಾಗೂ ಬರವಣಿಗೆಯ ಬಹುಮುಖ್ಯ ನೆಲೆಗಟ್ಟಿದು. 'ನೆರಳಿಲ್ಲದ ಸತ್ಯ ತೋರಿಸೋ ತಂದೆ' ಎನ್ನುವ ರಾಮಗೊಂಡನ ಆತಂಕವು ಭ್ರಮಾತ್ಮಕ ಸುಳ್ಳಿನಿಂದ ಹೊರಬಂದು ಅಖಂಡ ಸತ್ಯವನ್ನು ಕಾಣುವ ಹಂಬಲದ್ದಾಗಿದೆ. ಅನುಭಾವಿಗಳಂತೆ, ಇರುವ ಸತ್ಯದಿಂದ ಸತ್ಯದ ಇರುವಿನೆಡೆಗೆ ಸಾಗುವುದು, ಹಲವು ಸತ್ಯಗಳಿಗೆ ಎದುರು ಬದುರಾಗುವುದರ ಮೂಲಕ ಬದುಕಿನ ನಿಗೂಢತೆಯ ಶೋಧಕ್ಕೆ ಕಂಬಾರರು ತಯಾರಾಗುತ್ತಾರೆ. ಹೂ ಹೂವಿನೊಳಗಡೆ ಕೈಲಾಸ ಅರಳುವಂತೆ ಅಕ್ಷರ ಸಂಸ್ಕೃತಿಯ ಕಣ್ಣಿಗೆ ಅವಗಣಿತವಾಗಿ ಕಾಣುವ, ಸ್ಥಳೀಯ ಪರಂಪರೆಯ ಕ್ರಿಯಾಶೀಲ ನೆಲೆಗಳನ್ನು ತನ್ನ ಕಥನ ಕ್ರಿಯೆಗೆ ಬಳಸಿಕೊಳ್ಳುತ್ತಾರೆ.

ಕಂಬಾರರು ಅಖಂಡ ಹಾಗೂ ಅವಿಭಕ್ತ ಪ್ರಜ್ಞೆಯ ಲೇಖಕರು. ಈ ಸಂವೇದನೆಯೇ ಅವರನ್ನು ವಾರಿಗೆಯ ಬರಹಗಾರರಿಂದ, ಸಮಕಾಲೀನ ಇಸಂಗಳಿಂದ ಭಿನ್ನವಾಗಿ ರೂಪಿಸಿತು. ಚಿಗುರ ನಂಬಿ ಬರೆದ ಬರಹಗಾರ ಅವರಲ್ಲ, ಬೀಜ ಹಾಗೂ ಬೇರು ನಂಬಿ ಬರೆದ ಬರಹಗಾರ ಅವರು. ಕಂಬಾರರು ಹಾಡಿದರೆ ಹಸಿರು ಕೆರಳುವುದು, ನಾದಗಳೇ ನುಡಿಯಾಗುವುವು. ಹಸಿರು ಚಿಗುರುವುದು ಹಾಗೂ ನುಡಿ ನಾದವಾಗುವುದು ಒಂದು ಸಿದ್ಧ ಮಾದರಿಯ ದರ್ಶನ. ಆದರೆ ಹಸಿರು ಕೆರಳುವಂತೆ ಹಾಡುವುದು ನಾದವೇ ನುಡಿಯಾಗುವಂತೆ ಹಾಡುವುದು ಅದೊಂದು ಸೃಜನಶೀಲ ಕೌಶಲ್ಯ ಹಾಗೂ ಸೃಷ್ಟಿಶೀಲ ಉತ್ಪನ್ನ. ಕಂಬಾರರ ದನಿಯಲ್ಲಿ ಪ್ರಾಚೀನತೆಯ ಮಣ್ಣಿನಲ್ಲಿ ಹುಗಿದು ಹೋದ ಬೇರುಗಳನ್ನು ಅಲುಗಾಡಿಸುವ ಶಕ್ತಿ ಇದೆ ಎನ್ನುವ ಕುರ್ತಕೋಟಿಯವರ ಮಾತು ಇಲ್ಲಿ ಮುಖ್ಯವೆನಿಸುತ್ತದೆ. ಇದು ಸಾಧ್ಯವಾಗುವುದು ಭೇದವೆನಿಸದ ಅಖಂಡ ಪ್ರಜ್ಞೆಯ ಅನನ್ಯತೆಯಲ್ಲಿ, ನಿಸರ್ಗಮುಖಿ ಚಿಂತನೆಯಲ್ಲಿ, ಸಂಭ್ರಮ ಹಾಗೂ ಸಮೃದ್ಧಿಯ ಜೀವಸೆಲೆಯಲ್ಲಿ. ಕಂಬಾರರು ಚಿಗುರಿಗಿಂತ ಬೀಜಕ್ಕೆ, ಅದರ ಬೇರಿಗೆ ಮಹತ್ವ ಕೊಟ್ಟವರು. ನಿರ್ಬೀಜೀಕರಣ ಹಾಗೂ ಸಂಕರ ಸಂಸ್ಕೃತಿಯೇ ಪ್ರಧಾನವಾಗುತ್ತಿರುವ ಹೊತ್ತಿನಲ್ಲಿ ಅವರು ಮತ್ತೆ ಧೇನಿಸುವುದು ಪ್ರೀತಿಸುವುದು, ಬೀಜ ಬೇರು ಹಾಗೂ ಮೊಳಕೆಗಳ ಸಾವಯವ ಸಾತತ್ಯತೆಯನ್ನು ಎಂಬುದು ಗಮನಾರ್ಹ.

ನಾ ಕುಣೀಬೇಕ, ಮೈ ಮಣೀಬೇಕ ಕಾಲ್ದಣೀಬೇಕ ಎನ್ನುವ ಶ್ರಮ ಹಾಗೂ ಸಮೃದ್ಧ ಸಂಸ್ಕೃತಿಯ ಪ್ರವೃತ್ತಿ ಕಂಬಾರರ ನಿರಂತರ ಶೋಧದ ಜೀವಸೆಲೆ. ಜಡತ್ವಕ್ಕೆ ಅವರಲ್ಲಿ ಜಾಗವಿಲ್ಲ. ಶ್ರಮವೇ ಇಲ್ಲದ ಬದುಕಿಗೆ ದಣಿವಿನ ಅನುಭವ ದಕ್ಕಲಾರದು. ಕುಣೀಬೇಕು ದಣೀಬೇಕು ಎನ್ನುವ ಶ್ರದ್ಧೆ ಒಂದೆಡೆಯಾದರೆ, ಇದಾವುದನ್ನೂ ಒಲ್ಲದ ವೈಭೋಗ ಸಂಸ್ಕೃತಿ ಇನ್ನೊಂದೆಡೆ. ಈ ಅಖಂಡತೆಯನ್ನು ಗ್ರಹಿಸುವ ಹಾಗೂ ಮೀರುವ ಮನೋಧರ್ಮ ಕಂಬಾರರಿಗೆ ಬದುಕಿನ ಒಳಗಡೆಯಿಂದಲೇ ಲಭ್ಯವಾಗಿರುವಂಥದ್ದು ಹೊರತು ಬಾಹ್ಯ ಪ್ರಜ್ಞೆಯಿಂದಲ್ಲ.

ಕಂಬಾರರೇ ಹೇಳುವಂತೆ 'ನಮ್ಮ ಊರಿನ ವಿಶೇಷತೆ ಎಂದರೆ ನಾವು ವಿಭಜನೆ ಮಾಡಿ ಅಥವಾ ವಿಭಾಗೀಕರಣಗೊಳಿಸಿ ಇಷ್ಟು ಗದ್ಯ ಇಷ್ಟು ಪದ್ಯ ಇರಬೇಕೆಂದು ನಾನೆಂದೂ ಪರಿಗಣಿಸುತ್ತಿರಲಿಲ್ಲ. ಹಾಡು ಕುಣಿತ ಎಲ್ಲವನ್ನು ಸೇರಿಸಿಕೊಂಡು ಪ್ರತಿಕ್ರಿಯಿಸುತ್ತಿದ್ದೆವು. ಹೀಗಾಗಿ ನಮ್ಮ ಪ್ರತಿಕ್ರಿಯೆಗಳು ಒಂದು ರೀತಿ ಅಖಂಡವಾಗಿರುತ್ತಿದ್ದವೇ ಹೊರತು ಕಂಪಾರ್ಟ್‌ಮೆಂಟ್ ಆಗುತ್ತಿರಲಿಲ್ಲ. ಅಂತಹ ಊರಲ್ಲಿ ಹುಟ್ಟಿ ಬೆಳೆದ ನಾವು ಅಖಂಡವಾಗಿ ಪ್ರತಿಕ್ರಿಯಿಸುವುದನ್ನು ಕಲಿತೆವೆ ಹೊರತು ವಿಭಾಗಿಸಿ ಪ್ರತಿಕ್ರಿಯಿಸುವುದನ್ನು ಕಲಿಯಲಿಲ್ಲ' (ಸಿರಿಸಂಪಿಗೆ; ಕಂಬಾರ, ೧೬೮-೧೬೯; ೧೯೯೭). ಕಂಬಾರರ ಮಾತು ಗಮನಾರ್ಹ. ಇಂತಹ ಅಂತಃಕರಣ ಪ್ರಣೀತ ಹಾಗೂ ಆತ್ಮವಿಶ್ವಾಸ ಪೂರಿತ ಮಾನವ ಸಂಬಂಧಗಳನ್ನು ಕಾಣಲು ಕಂಬಾರರು ಮತ್ತೆ ಮತ್ತೆ ಹಂಬಲಿಸುತ್ತಾರೆ. ಅದಕ್ಕಾಗಿ ತಿರುತಿರುಗಿ, ಜನಮುಖಿ ಪರಂಪರೆಗಳಾದ ಭಕ್ತಿ, ಅನುಭಾವಿ, ತತ್ವಪದಕಾರರ ಕಾವ್ಯ ಕಲ್ಪನೆಗೆ ಹಾಗೂ ಜಾನಪದ ಸೊಗಡಿಗೆ ಮೊರೆಹೋಗುತ್ತಾರೆ. ಕಾರಣ ಇವು ಬಳಸಿದಷ್ಟೂ ಬೆಳೆಯುವ ಸಮೃದ್ಧ ಕಲ್ಪನೆಗಳೇ ಹೊರತು ಕೊಳೆಯುವ ಅಥವಾ ನಿರ್ವೀರ್ಯ ಪರಿಕಲ್ಪನೆಗಳಲ್ಲ.

ಕನ್ನಡ ತನ್ನ ಪರಂಪರೆಯನ್ನು ಪರೀಕ್ಷಿಸಬೇಕಾಗಿದೆ, ಶೋಧಿಸಬೇಕಾಗಿದೆ. ಕನ್ನಡದಿಂದಲೇ ನಮ್ಮ ಮಕ್ಕಳು ತಿಳುವಳಿಕೆ ಪಡೆಯುವ ಹಾಗೂ ಅಭಿವ್ಯಕ್ತಿಸುವ ಸಾಮರ್ಥ್ಯ ಪಡೆಯಬೇಕು. ಕನ್ನಡ ವಿಶ್ವವಿದ್ಯಾಲಯವು ಎಲ್ಲ ಒಳ ಮತ್ತು ಹೊರಗಿನ ಮನಸ್ಸುಗಳೊಂದಿಗೆ ಸಂಪರ್ಕ, ಸಂವಾದ ಮಾಡುತ್ತದೆ ಎಂದು ಕುಲಪತಿಗಳಾಗಿದ್ದಾಗ ಕಂಬಾರರು ಹೇಳುತ್ತಿದ್ದರು. ಆ ಮೂಲಕ ಜ್ಞಾನ ಗೋಪುರಕ್ಕೆ ಸೀಮಿತವಾದ ವಿದ್ವಾಂಸರ ದಂಡನ್ನು ಜನಸಾಮಾನ್ಯರತ್ತ ಕರೆದೊಯ್ದ ತಿಳುವಳಿಕೆಯ ಹೊಸ ಯುಗವೊಂದನ್ನು ಆರಂಭಿಸಿದರು. ಊನಗೊಂಡ ಕನ್ನಡ ಜನಸಮುದಾಯಗಳಿಗೆ, ಉಪೇಕ್ಷಿತ ಜ್ಞಾನಶಿಸ್ತುಗಳಿಗೆ ಮರ್ಯಾದೆಯನ್ನು ತಂದುಕೊಟ್ಟರು. ಸಾಮ್ರಾಜ್ಯಶಾಹಿ ಹಾಗೂ ಸಾಮಂತಶಾಹಿ ಪ್ರವೃತ್ತಿಗಳಿಗೆ ಪರ್ಯಾಯವಾಗಿ ಕನ್ನಡದ ಕುಲುಮೆಯ ಮೂಲಕ ಪ್ರತಿಕ್ರಿಯಿಸುವ ಹೊಸ ಪರಿಕರಗಳನ್ನು ಸಜ್ಜುಗೊಳಿಸಿದರು. ಕನ್ನಡ ವಿಶ್ವವಿದ್ಯಾಲಯದಲ್ಲಿ ರೂಪಗೊಳ್ಳುವ ಹೊಸ ಶಾಸ್ತ್ರ ವಿಧಾನಗಳು, ಶಾಸ್ತ್ರ-ಕಲೆ, ಅಭಿಜಾತ-ಜಾನಪದ, ಮಾರ್ಗ-ದೇಸೀ, ಪೌರ್ವಾತ್ಯ-ಪಾಶ್ಚಾತ್ಯ ಈ ಬಗೆಯ ದ್ವಂದ್ವಗಳು ತಿದಿ ಹಾಗೂ ಸುತ್ತಿಗೆಯ ಸಾಮರಸ್ಯ ಹಾಗೂ ಸಂಘರ್ಷಗಳ ಒಡಲಿನಿಂದ ಮೂಡಿದಂಥವು.

ಭಾಷೆಯಲ್ಲಿ ಅರಿವಿಗೆ ಬರುವ ಇಂಥ ಜ್ಞಾನ ಸಾಧನಗಳಿಂದ ಲೋಕದ ಜ್ಞಾನವನ್ನು ಹಿಡಿದು ತಿರುಗಿ ಲೋಕಕ್ಕೆ ಧಾರೆ ಎರೆಯುವ ಮೂಲಕ ತಿಳುವಳಿಕೆಗೆ ಹೊಸ ಪರಿಪ್ರೇಕ್ಷ್ಯೆಯನ್ನು ಕಟ್ಟುವ ಕೆಲಸವನ್ನು ಕನ್ನಡ ವಿಶ್ವವಿದ್ಯಾಲಯದ ಮೂಲಕ ಮಾಡಿದರು. ಕಸುಬುದಾರ ಕಂಬಾರನು ಕೃಷಿಕನೊಬ್ಬ ಕುಲುಮೆಗೆ ತರುವ ಕಚ್ಚಾ ವಸ್ತುವನ್ನು ನಿಗದಿತ ಆಯುಧ ಮಾಡಿ ತಿರುಗಿ ಕೃಷಿಕನಿಗೆ ಕೊಡುವ ಪರಿಯಿದು. ಸಾಂಪ್ರದಾಯಿಕ ವಿಶ್ವವಿದ್ಯಾಲಯದ ಕಲ್ಪನೆಯನ್ನೇ ಒಡೆದು ಕಟ್ಟಿದರು. 'ತಿಳುವಳಿಕೆಯ ಕಣ್ಣಿಗೆ ಕಾಣುವುದೆಲ್ಲವೂ ಕನ್ನಡಕ್ಕೆ ಬರಬೇಕು ಕನ್ನಡದಲ್ಲಿ ಅಭಿವ್ಯಕ್ತವಾಗಬೇಕು. ಅದರಂತೆ ಕನ್ನಡದ ಕಣ್ಣಿಗೆ ಕಾಣುವುದೆಲ್ಲವೂ ಮಾತಿನಲ್ಲಿ ಮೂಡಬೇಕು. ಆಗ ಮಾತ್ರ ಒಂದು ಜನಾಂಗದ ಭಾಷೆ ಮತ್ತು ಸಂಸ್ಕೃತಿ ಜೀವಂತವಾಗಿರಬಲ್ಲದು' ಎಂದು ಕಂಬಾರರು ಪ್ರಬಲವಾಗಿ ನಂಬಿದ್ದರು. ಈ ಕಾಳಜಿ ಅವರನ್ನು ಕನ್ನಡ ಪ್ರಜ್ಞೆಯ ಮರುಚಿಂತನೆಗೆ, ಭಾಷೆ, ಸಾಹಿತ್ಯದ ಸಶಕ್ತೀಕರಣಕ್ಕೆ ಪ್ರೇರೇಪಿಸಿತು. ಕನ್ನಡದಲ್ಲಿ ಕಲಿಯುವುದು ಬರೆಯುವುದು ಮಾತನಾಡುವುದು ಅವಮಾನಕಾರಿ ಎನ್ನುವ ಪ್ರಬಲ ಹಿತಾಸಕ್ತಿಗಳ ಎದುರಿಗೆ

ಕನ್ನಡವು ಕೀಳರಿಮೆಯನ್ನು ಕಳೆದುಕೊಂಡು ಸ್ವಾಭಿಮಾನದಿಂದ ಹೆಡೆ ಎತ್ತಿ ನಿಲ್ಲುವಂತೆ ಮಾಡಿದರು. ಆ ಮೂಲಕ ಕನ್ನಡದ ನಾದ ಲಯಗಳಿಗೆ ಧ್ವನಿ ತುಂಬಿದರು. ಧ್ವನಿಯಿಲ್ಲದ ಸಮುದಾಯಗಳಿಗೆ ಕಂಠದಾನ ಮಾಡಿ ಚಂದಮುತ್ತನಂತೆ ಹಾಡಿಸಿದರು.

ಜ್ಞಾನಪೀಠ ಪ್ರಶಸ್ತಿ ಬಂದ ಈ ಹೊತ್ತಿನಲ್ಲಿ ಅವರು ಮಾಧ್ಯಮಗಳಿಗೆ ಪ್ರತಿಕ್ರಿಯಿಸಿದ ರೀತಿಯಲ್ಲಿಯೂ ಇಂಥ ಸ್ವಾಭಿಮಾನಿ ಧೋರಣೆಗಳನ್ನು ಕಾಣಬಹುದು. 'ಶ್ರೀಮಂತರು ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಹೋಗಿ ಆಧುನಿಕತೆಯ ಸೊಕ್ಕು ಬೆಳೆಸಿಕೊಳ್ಳುತ್ತಿದ್ದಾರೆ. ಬಡವರ ಮಕ್ಕಳು ಕನ್ನಡ ಮಾಧ್ಯಮ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತ ಕೀಳರಿಮೆ ಬೆಳೆಸಿಕೊಳ್ಳುತ್ತಿದ್ದಾರೆ. ಇದು ಸರಿನಾ ? ನಮಗೆ ನಾಚಿಕೆಯೂ ಆಗುತ್ತಿಲ್ಲವೆ' ಎಂದಿದ್ದಾರೆ. ವ್ಯವಸ್ಥೆಯೊಂದಿಗೆ ರಾಜಿ ಮಾಡಿಕೊಂಡು ಸ್ವಹಿತಾಸಕ್ತಿಯನ್ನೇ ಕಾಯ್ದುಕೊಳ್ಳುವ ಮಂದಿಯೇ ತುಂಬಿರುವ ಹೊತ್ತಿನಲ್ಲಿ ವ್ಯವಸ್ಥೆಯ ವಿರುದ್ಧವೇ ಚಾಟಿಯೇಟು ಬೀಸಿರುವುದು ಕಂಬಾರರ ಕನ್ನಡದ ಸಾಕ್ಷಿ ಪ್ರಜ್ಞೆಯ ಪ್ರತೀಕವಾಗಿದೆ. ಕನ್ನಡ ಹಾಗೂ ಕನ್ನಡಿಗರು ಅನುಭವಿಸುತ್ತಿರುವ ಅವಮಾನದ ವಿರುದ್ಧ ಅವರು ಎತ್ತಿರುವ ದನಿ ಸಕಾಲಿಕವಾಗಿದೆ. ಯಾರ ಹಂಗಿಗೂ ಒಳಗಾಗದ ಯಾರಿಗೂ ದೇಹಿ ಎನ್ನದ ಅವರ ಸ್ವತಂತ್ರ ವ್ಯಕ್ತಿತ್ವದ ಈ ಹರಿತತನವನ್ನು ಸ್ಥಾನಮಾನ ಹಾಗೂ ಬರೀ ಪ್ರಚಾರಕ್ಕಾಗಿ ಕನ್ನಡದ ಕೆಲಸ ಮಾಡುವ ಮಂದಿ ಅರ್ಥಮಾಡಿಕೊಳ್ಳಬೇಕಾಗಿದೆ.

೧ರಿಂದ ೧೦ನೇ ತರಗತಿಯವರೆಗೆ ಕನ್ನಡದಲ್ಲೇ ಶಿಕ್ಷಣವಿರಬೇಕು, ಪ್ರಪಂಚದ ಎಲ್ಲ ಜ್ಞಾನವೂ ಕನ್ನಡದ ಮೂಲಕವೇ ಬರಬೇಕು ಎನ್ನುವ ಕಂಬಾರರ ಮಾತಿನಲ್ಲಿ ಸಶಕ್ತ ಹಾಗೂ ಸೃಜನಶೀಲ ಶಿಕ್ಷಣ ಸಂಸ್ಕೃತಿಯ ಬೇರುಗಳು ಅಡಗಿರುವುದನ್ನು ಗುರುತಿಸಬಹುದಾಗಿದೆ. ಬರೀ ಅಕ್ಷರ ಕಲಿಸುವ ಕೌಶಲ್ಯರಹಿತ ಆಂಗ್ಲ ಶಿಕ್ಷಣದ ನಿರ್ವೀರ್ಯತೆಯನ್ನು ಅವರ ಒಟ್ಟು ಸಾಹಿತ್ಯ ಕೃತಿಗಳು ತುಂಬ ತೀಕ್ಷ್ಣವಾಗಿ ಪ್ರತಿಫಲಿಸುತ್ತವೆ.

*'ಹಸು ಮಕ್ಕಸಲುವಾಗಿ ಗರಡೀಮನಿ ಕೆಡವಿ*
*ಹೊಸಸಾಲಿ ಕಟ್ಟಿಸೋಣ ಭಲೆಶೋಭಾ' (ಹೇ.ಕೇ)*
*ತುಂಬಿದ ಹೊಳಿಯಾಗ ತೆರಿಹೊಡದದ ಈಸಾಂವಾ*
*ಗುಡಿಯ ಮುಂದಿನ ಗುಂಡ ಹೊತ್ತ ಒಗದಾಂವಾ*
*ಮನ್ನಿ ಶಿವರಾತ್ರ್ಯಾಗ ಹತ್ತು ಮಂದಿಯ ಕೂಡ*
*ಕುಸ್ತಿ ಹಿಡದದ ಎರಿ ಮಣ್ಣ ಮುಕ್ಕಿಸಿದಾಂವಾ*

ಗ್ರಾಮ ಬದುಕಿನ ಸಮೃದ್ಧ ನೆಲೆಗಳಾದ ಗರಡಿಮನಿ, ಹುಡುಗರು, ಜೋಡೆಮ್ಮಿ ಹಾಲು, ಹಸಿರು, ಇವೆಲ್ಲ ದೇಸೀ ಸಂಸ್ಕೃತಿಯ ಸಶಕ್ತ ಪ್ರತೀಕಗಳು, ಸ್ವತಂತ್ರ ಹಾಗೂ ಸ್ವಾಭಿಮಾನ ಸಂಸ್ಕೃತಿಯ ಉತ್ಪನ್ನಗಳು. ಜೈವಿಕ ಎನ್ನಬಹುದಾದ ನೆಲದೊಡಲಿನಿಂದ ದೇಸೀ ಬದುಕಿನ ಎಲ್ಲ ಅಂತಃಸತ್ವದೊಡನೆ ಬೆಳೆಯುವ ಇಲ್ಲಿನ ವ್ಯಕ್ತಿತ್ವಗಳಿಗೆ ಸಾಂಸ್ಕೃತಿಕ ಜವಾಬ್ದಾರಿ ಇರುತ್ತದೆ. ಬಾಹ್ಯ ಆಕ್ರಮಣ ಹಾಗೂ ಸವಾಲುಗಳಿಗೆ ಇಲ್ಲಿನ ಗರಡಿಮನಿ ಹುಡುಗರು ಎದೆಗೊಟ್ಟು ನಿಂತು ಊರಿನ ಮಾನ ಕಾಪಾಡುತ್ತಿದ್ದರು.

ಕರಿಮಾಯಿ ಕಾದಂಬರಿಯ ಗೌಡನ ಹಿಂದಿರುವ ಕುಸ್ತಿ ಹುಡುಗರು ಊರು ಸಂಪತ್ತು ಹಾಗೂ ಶಕ್ತಿಯ ಪ್ರತೀಕವಾದರೆ ಗುಡಿಸೀಕರನ ಹಿಂದಿರುವ ಚತುಷ್ಟಯರು ಊರಿನ ಕೇಡಿಗೆ ಕಾರಣವಾಗುತ್ತಾರೆ. ಸ್ವಂತ ವ್ಯಕ್ತಿತ್ವವಿಲ್ಲದ ನಿರ್ಭಾವುಕ ಮನೋಧರ್ಮವುಳ್ಳ ಇಂಥವರು ಆಧುನಿಕ ಶಿಕ್ಷಣ ಹಾಗೂ ಸಂಸ್ಕೃತಿಯ ಫಲಿತಗಳು. ಪರಂಪರೆಗೆ ನೆರಳಾದ ಮರವನ್ನು ಅದರ ಅಂತಃಶಕ್ತಿಗೆ ಕಾರಣವಾದ ಗರಡಿಮನೆಯನ್ನು ಕೆಡವಿ ಶಾಲೆ ಕಟ್ಟಿಸುವ ಸಂಗತಿ ದೇಸೀ ಸಂಸ್ಕೃತಿಯನ್ನು ಹಾಳುಮಾಡಿ ವಿದೇಶಿ ಶಿಕ್ಷಣ ಸಂಸ್ಕೃತಿಗಳನ್ನು ಒತ್ತಾಯ ಪೂರ್ವಕವಾಗಿ ಹೇರುವುದೇ ಆಗಿದೆ. 'ಹೋರಿಗಳು ಎತ್ತಾಗಿ ನೊಗ ಎತ್ತಲಾರದೆ ಗದ್ದೆಯಲಿ ಬಿದ್ದಾವ ಬಾಲ ಮುದುರಿ' ಎನ್ನುವಲ್ಲಿ ಇಂಗ್ಲಿಷ್ ಶಿಕ್ಷಣದ ಅಪಕ್ವ ಹಾಗೂ ಅತಂತ್ರ ವ್ಯಕ್ತಿತ್ವದ ನೆಲೆಗಳನ್ನು ಕಾಣುತ್ತೇವೆ. ಹೊಳೆವ ಸುಳ್ಳಿನೋಪಾದಿಯಲ್ಲಿ ಸತ್ಯದ ಭ್ರಮೆಯಲ್ಲಿ ಬರುವ ರೂಪಾಂತರಗಳು ಹಳೆಯ ಸಶಕ್ತ ಬದುಕಿನ ಎಲ್ಲ ಶಕ್ತಿ ಸ್ವರೂಪಗಳನ್ನು ನುಂಗಿಹಾಕಿ ನಿರುಪಯುಕ್ತವಾಗಿಸಿರುವ ಕಥನವನ್ನು ಇಲ್ಲಿ ಕಾಣಬಹುದು.

ಆಂಗ್ಲ ಶಿಕ್ಷಣದ ಅಕ್ಷರದ ಅಹಂಕಾರದ ಮುಂದೆ ಆತ್ಮಶಿಕ್ಷಣದ ಅಪಾರ ಜೀವನಾನುಭವ ಹೇಗೆ ತಡವರಿಸಬೇಕಾಗುತ್ತದೆನ್ನುವುದಕ್ಕೆ ಕರಿಮಾಯಿ ಕಾದಂಬರಿ ಉತ್ತಮ ಉದಾಹರಣೆಯಾಗಿದೆ. ಆಂಗ್ಲ ಶಿಕ್ಷಣದ ಅಪಕ್ವ ಫಲಿತಗಳಾದ ಗುಡಿಸೀಕರ, ಇನ್ಸ್‌ಪೆಕ್ಟರ್ ಪೋಜುದಾರರಂಥ ನೌಕರಶಾಹಿಗಳು ಊರಿನ ಸ್ವಾಭಿಮಾನದ ಹಾಗೂ ಆತ್ಮಸಾಕ್ಷಿಯ ಸಂಕೇತವಾದ ಪರಗೌಡ ಹಾಗೂ ದತ್ತಪ್ಪನಂಥವರನ್ನು ಅವಾಚ್ಯವಾಗಿ ನಿಂದಿಸುವ ರೀತಿಗಳು, ಗುಡಿಸೀಕರನ ತಂಗಿಯ ಮೇಲೆ ಆತನ ಗೆಳೆಯ ಬಸವರಾಜು ಕಣ್ಣುಹಾಕುವ, ಹೊಟೇಲ್ ಬದಲಿಗೆ ಬ್ರ್ಯಾಂಡಿ ಅಂಗಡಿ ಹಾಗೂ ಥಳಕು ಬಳುಕಿನ ಚಿಮಣಾಳ ಪ್ರವೇಶ, ಇವೆಲ್ಲವೂ ವಸಾಹತು ಮನಸ್ಸಿನ ವಿಕ್ಷಿಪ್ತ ಸ್ಥಿತಿಗಳಾಗಿ ಬರುತ್ತವೆ.

ಕೊಲೆ ಕೇಸಿನಲ್ಲಿ ಕರಿಮಾಯಿಯ ಕಾದಂಬರಿಯ ನಿಂಗೂನನ್ನು ಪೊಲೀಸರಿಗೆ ಒಪ್ಪಿಸಬೇಕೆನ್ನುವ ಗುಡಿಸೀಕರನ ಮಾತಿಗೆ ಪರಗೌಡ ಹೇಳುವ ಮಾತೊಂದಿದೆ. 'ಕಾಯ್ದೆ ಕಾನೂನಂದ್ರ ಸಣ್ಣ ಮಾತಲ್ಲ, ಕೆಟ್ಟ ಇಂಗ್ರೇಜಿ ಸರಕಾರ, ಕೇಸ ಬೆಳಗಾಂವಿಗೆ ಹೋದರ ನಿಂಗೂ ಉಳಿಯಾನಿಲ್ಲ..... ನೋಡಪಾ ನಿಮ್ಮ ಶಹರದಾಗಿನ ಕಾಯ್ದೆ ಬ್ಯಾರೆ ನಮ್ಮ ಹಳ್ಳೀ ಕಾಯಿದೆ ಬ್ಯಾರೆ. ನಿನಗೂ ಗೊತ್ತಿಂದಂಗ ನಮ್ದು ಬಾಳಾ ಸರಳ. ಇಲ್ಲಿನ ಜಗಳಂದರ ಇಲ್ಲೇ ಬಗಿಹರಿಬೇಕು. ಇಲ್ಲಿ ಜಗಳದ ಮ್ಯಾಲ ಬೆಳಗಾಂವಿ ತೀರ್ಪು ತಂದು ಹೇರೇನಂತಿ ಹೆಂಗ ಹೇಳು... ಮನುಷ್ಯ ಸಾಯಾಕ ಹುಟ್ಟಿಲ್ಲ ಬದುಕಾಕ ಹುಟ್ಯಾನ. ಸಾವಿನಕ್ಕಿಂತ ಬದುಕು ದೊಡ್ಡದು... ಬೆಳಗಾವಿ ಮಂದಿ ನಮ್ಮ ಊರಿನ ಮನಶ್ಯಾಗ ಶಿಕ್ಷೆ ಕೊಡೋದು ಶಕ್ಕಿಲ್ಲ ಏನಂತಿ...' ಎನ್ನುವ ಮಾತುಗಳು ಬದುಕಿನ ಬದ್ಧತೆ ಹಾಗೂ ಸ್ಥಳೀಯ ತೀವ್ರತೆಯನ್ನು ಹೇಳುತ್ತವೆ. ಅನ್ಯದರ ಅತಿಕ್ರಮಣವನ್ನು ವಿರೋಧಿಸುತ್ತವೆ. ತನ್ನ ಒಳಿತು ಕೆಡಕುಗಳನ್ನು ತಾನೇ ನಿರ್ಧರಿಸಿಕೊಳ್ಳುವ ಅದು ಆಳದಲ್ಲಿ ಮನುಷ್ಯ ಕಾಳಜಿ ಹೊಂದಿರುವಂಥದ್ದು. ಅಪರಾಧದ ಹೆಸರಿನಲ್ಲಿ ಮನುಷ್ಯನನ್ನು ನಿರ್ದಯವಾಗಿ ಹಿಂಸಿಸುವ ವಸಾಹತು ನ್ಯಾಯ ಪದ್ಧತಿಗೂ ಕ್ಷಮಾದಾನ ನೀಡಿ ಹೊಸ ಬದುಕು ಕಟ್ಟಿಕೊಳ್ಳಲು ಪ್ರೇರಣೆ ನೀಡುವ ದೇಶೀ ನ್ಯಾಯ ಪದ್ಧತಿಗೂ ಇರುವ ಅಂತರವನ್ನು ಇಲ್ಲಿ ಕಾಣಬಹುದು.

ಈ ನಿರ್ವೀರ್ಯತೆ ಎನ್ನುವುದು ಬರೀ ವಸಾಹತು ಬದುಕಿನಲ್ಲಿ ಮಾತ್ರ ಇರುವಂಥದಲ್ಲ, ಸ್ಥಳೀಯ ಪರಂಪರೆಯಲ್ಲೂ ಇದೆ ಎನ್ನುವ ಸ್ವ ವಿಮರ್ಶನ ಪ್ರಜ್ಞೆ ಕಂಬಾರರದ್ದು. ಸಿಂಗಾರೆವ್ವ ಮತ್ತು ಅರಮನೆಯ ಸರಗಂ ದೇಸಾಯಿ, ಕರಿಮಾಯಿಯ ಗೌಡತಿ, ಹೇಳತೇನ ಕೇಳದ ರಾಮಗೊಂಡ ಪರಂಪರೆಯ ಪ್ರತಿನಿಧಿಗಳಾದರೂ ಬರಡು ಮನುಷ್ಯರು. ಊರದೇವತೆ ಹಾಗೂ ಊರಗೌಡ ಇವೆರಡು ಊರಿನ ಸಂರಕ್ಷಕ ಹಾಗೂ ಸಮೃದ್ಧಿಯ ಪ್ರತೀಕಗಳು. ಸ್ವತಃ ಹುಲಿ ಬೇಟೆಯಾಡುವ ಸರಗಂ ದೇಸಾಯಿ ಹೆಂಗಸರ ತೊಡಿ ಕಂಡರೆ ಬೇಹೋಷ್ ಆಗುತ್ತಾನೆ. ಸ್ವಂತ ಹೆಂಡತಿಯನ್ನೇ ತಣಿಸದ ನಿರ್ವೀರ್ಯ. ಆದರೆ ಅಪಾರ ಚಪಲವಂತ. ಹೆಣ್ಣು ಬೇಕು ಆದರೆ ಭೋಗ ಸಾಧ್ಯವಿಲ್ಲ. ಕರಿಮಾಯಿಯ ಗೌಡ ಬಿಚ್ಚಿಬಿಟ್ಟ ಕುದುರೆಯ ಹಾಗೆ ಇರಬಲ್ಲ, ಮನೆಯ ಹೆಂಡತಿಗೆ ಫಲ ಕೊಡದಿದ್ದರೂ, ಶಿವನಿಂಗುನನ್ನು ಕೆಳವರ್ಗದ ಗರ್ಭದಲ್ಲಿ ಹುಟ್ಟಿಸಬಲ್ಲ. ವಿವಾಹೇತರ ಸಂಪರ್ಕದಿಂದ ಹುಟ್ಟುವ ರವಿಚಂದ್ರ, ಶಿವನಿಂಗು, ಬಾಳಗೊಂಡ ಇವರೆಲ್ಲರೂ ವ್ಯಕ್ತಿತ್ವಹೀನರು, ನಿಷ್ಕ್ರಿಯ ಯಜಮಾನ ಸಂಸ್ಕೃತಿಯ ಪಳಿಯುಳಿಕೆಗಳು. ಈ ಮೂಲಕ ಮತ್ತೆ ಕಂಬಾರರಲ್ಲಿ ಅನನ್ಯತೆಯ ಹಾಗೂ ಅಸ್ತಿತ್ವದ ಹುಡುಕಾಟವನ್ನು ಕಾಣುತ್ತೇವೆ.

ಮನುಷ್ಯರ ಭಿನ್ನ ಭಿನ್ನ ಪ್ರಕೃತಿಗಳ ನಡುವೆ ಘರ್ಷಣೆ ಏರ್ಪಡುವಂತೆ ಮನುಷ್ಯ ಹಾಗೂ ಪ್ರಕೃತಿ ನಡುವೆಯೂ ಸಂಘರ್ಷವನ್ನು ಕಾಣಬಲ್ಲರು. ಕರಿಮಾಯಿಗೌಡ ಹಾಗೂ ಲಗುಮವ್ವರಿಗೆ ಬದುಕು ಏಕತಾನವಲ್ಲ. ಅದೊಂದು ಸಮೂಹ ನಂಬಿಕೆ. ಗುಡಿಸೀಕರನಂಥವರಿಗೆ ಇದೊಂದು ಬೇಸರ ತಾನ. ಹಳೇ ತಲೆಮಾರಿಗೆ ಯಾವುದು ಕರ್ಮಭೂಮಿಯೋ ಹೊಸ ತಲೆಮಾರಿಗೆ ಅದೊಂದು ಜಡಸ್ಥಿತಿ. ಏಕಕಾಲಕ್ಕೆ ಹಳತು-ಹೊಸತರ ಗುಣಾವಗುಣಗಳನ್ನು ಕಂಬಾರರು ವಿಮರ್ಶೆಗೆ ಒಳಪಡಿಸುತ್ತಾರೆ. ಲಗುಮವ್ವನ ಸೆರೇದಂಗಡಿ ಬದುಕಿನ ಅನಿವಾರ್ಯತೆಯಾದರೆ ಗ್ರಾಮಪಂಚಾಯತಿ, ಚಾದಂಗಡಿ, ಬ್ರ್ಯಾಂಡಿ ಅಂಗಡಿಯಂಥ ಆಧುನಿಕ ಪರಿಕಲ್ಪನೆಗಳು ಊರ ಬದುಕಿನ ಛಿದ್ರೀಕರಣ ಕ್ರಿಯೆಗಳಾಗಿ ಬರುತ್ತವೆ.

ಪೂರ್ಣ ಹಳ್ಳಿ ಬದುಕಿನಿಂದ ಬಂದ ಕಂಬಾರರಿಗೆ ಗ್ರಾಮ ಬದುಕಿನ ಸೂಕ್ಷ್ಮ ಒಳಸೆಳೆತಗಳು ಗೊತ್ತು. 'ನ್ಯಾರಿಮಾಡಿ' ಕೆಲಸಕ್ಕೆ ಹೋಗುವ ಶ್ರಮಿಕ ಬದುಕು ಆಧುನಿಕ ನಾಗರೀಕತೆಯ ಚಹ, ಕಾಫಿ, ಬ್ರೇಕ್‌ಫಾಸ್ಟ್‌ನಿಂದ ದೂರ ಇರುವಂಥದ್ದು. ಇವು ಯಾವುವೂ ಅವರ ಬದುಕಿನ ಅನಿವಾರ್ಯತೆಗಳಲ್ಲ. ದುಡಿವ ಹೊಟ್ಟೆಗೆ ಸಂಪೂರ್ಣ ಊಟ ಮುಖ್ಯವೇ ಹೊರತು ಫಲಾಹಾರವಲ್ಲ. ದುಡಿದು ದಣಿದ ಮೈಗೆ ಊಟದೊಂದಿಗೆ ಸರಾಯಿ ಹಿತವಾಗಿ ಕಾಣುತ್ತದೆ. ಇದರಿಂದ ಕ್ರಮೇಣ ಚಿಮಣಾಳ ಬ್ರ್ಯಾಂಡಿ ಅಂಗಡಿ ಸೊರಗುತ್ತದೆ. ಶ್ರಮ ಬದುಕಿನಿಂದ ಬಂದ ಕಂಬಾರರು ಆ ಬದುಕಿನ ಅವಶ್ಯಕತೆಗಳನ್ನು ನಿಸ್ಸಂಕೋಚವಾಗಿ ಚಿತ್ರಿಸುತ್ತಾರೆ. ಸ್ಥಳೀಯ ಉತ್ಪಾದನಾ ಕೌಶಲ್ಯ, ಉಪಭೋಗ ಹಾಗೂ ಉಪಯುಕ್ತತೆಗೆ ಕಂಬಾರರು ವಿದೇಶಿ ಸೆಳೆತದ ಎದುರು ಮರ್ಯಾದೆಯನ್ನು ತಂದುಕೊಡುತ್ತಾರೆ ಎನ್ನುವುದು ಗಮನಾರ್ಹ.

ಹೀಗೆ ತಮ್ಮ ಬರಹದ ಮೂಲಕ ಕಂಬಾರರು ಕನ್ನಡ ಕಥನದ ಅನಂತ ಸಾಧ್ಯತೆಗಳನ್ನು ತೆರೆದಿಟ್ಟಿದ್ದಾರೆ. ಕನ್ನಡ ಭಾಷಾಪರಂಪರೆಯ ಪುನರುಜ್ಜೀವನಕ್ಕೆ ಜೀವ ತೇಯ್ದಿದ್ದಾರೆ. ಅಂಥ ಶ್ರಮಜೀವಕ್ಕೆ ಸಿರಿಸಂಪಿಗೆಯ ಚೈತನ್ಯಕ್ಕೆ ೨೦೧೦ರ ಜ್ಞಾನಪೀಠ ಸಂದಿರುವುದು ತಿದಿ ಊದಿದ ಹುಡುಗನ ತುದಿ ಮುಟ್ಟಿದ ಕಥನಕ್ಕೆ ಸಂದ ಗೌರವವಾಗಿದೆ. ಡಾ|| ಚಂದ್ರಶೇಖರ ಕಂಬಾರರಿಗೆ ಇದೋ ನನ್ನ ಲೇಖನಾಭಿನಂದನೆ.

ಡಾ|| ವೀರೇಶ ಬಡಿಗೇರ
ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

# 'ಎಂಡೋವಾಸ್ಕುಲರ್ ತಂತ್ರಜ್ಞಾನ'

- 'ಲಕ್ವ'ಕ್ಕೆ ಅಪೂರ್ವ ಚಿಕಿತ್ಸಾ ವಿಧಾನ




"ಎಂಡೋವಾಸ್ಕುಲರ್ ತಂತ್ರಜ್ಞಾನ" – 'ಲಕ್ವ'ಕ್ಕೆ ಅಪೂರ್ವ ಚಿಕಿತ್ಸಾ ವಿಧಾನ. ಲಕ್ವ ಅಥವಾ ಪಾರ್ಶ್ವವಾಯುವಿನ ಹೊಡೆತ ಬಗ್ಗೆ ಸರಳವಾಗಿ ಹೇಳಬೇಕು ಅಂದರೆ, ಶರೀರದ ಒಂದು ಬದಿಯ ಅವಯವಗಳು ಸಂಪೂರ್ಣವಾಗಿ ನಿಯಂತ್ರಣ ಕಳೆದುಕೊಳ್ಳುವುದು ಅಥವಾ ಸೊಂಟದಿಂದ ಮೇಲ್ಭಾಗ ಇಲ್ಲವೇ ಕೆಳಭಾಗದ ಅಂಗಾಂಗಗಳಲ್ಲಿ ನಿಶ್ಶಕ್ತಿ, ದೃಷ್ಟಿ ಕಳೆದುಕೊಳ್ಳುವುದು, ಮಾತನಾಡಲು ಆಗದಿರುವುದು. ಹೀಗೆ ಎಲ್ಲವೂ ಆಗಿ ಮರಣದೆಡೆಗೆ ಸಾಗುವುದು.



ಜಾಗತಿಕ ಮಟ್ಟದಲ್ಲಿ ಲಕ್ವ ಎನ್ನುವುದು ಮಾನವ ಜೀವಕ್ಕೆ ಸಂಚಕಾರ ತರುವ ಮೂರನೇ ರೋಗ. ಮೊದಲ ಎರಡು ಸ್ಥಾನದಲ್ಲಿ ಹೃದಯಾಘಾತ ಮತ್ತು ಕ್ಯಾನ್ಸರ್‌ಗಳಿವೆ. 1983ರಿಂದ ಈಚೆಗೆ ಗಮನಿಸಿದರೆ, ಪ್ರತಿವರ್ಷ ಒಂದು ಲಕ್ಷ ಜನಸಂಖ್ಯೆಯಲ್ಲಿ 200 ಜನ ಲಕ್ವಕ್ಕೆ ಬಲಿಯಾಗುತ್ತಿದ್ದರು. ಅದುವೇ ಈಗ, ಲಕ್ವಕ್ಕೆ ಬಲಿಯಾಗುತ್ತಿರುವವರ ಸಂಖ್ಯೆ ಶೇಕಡಾ 30ಕ್ಕೆ ಏರಿದೆ. ಇಂದಿನ ಜಾಗತಿಕ ಪರಿಸ್ಥಿತಿಯಲ್ಲಿ, ಧೂಮಪಾನ, ವ್ಯಾಯಾಮದ ಕೊರತೆ ಮತ್ತು ಶಾರೀರಿಕ ದುಡಿಮೆಗೆ ಹೊರತಾದ ಜೀವನಶೈಲಿ ಲಕ್ವಕ್ಕೆ ಮೂಲ ಕಾರಣ. ಇತರೆ ಅಪಾಯಕಾರಿ ಅಂಶಗಳು ಎಂದರೆ ಹೆಚ್ಚಿನ ಒತ್ತಡ, ಅಧಿಕ ಕೊಲೆಸ್ಟ್ರಾಲ್ ಅಥವಾ ಕೊಬ್ಬು ಮತ್ತು ಮದ್ಯಸಾರ. ಮೆದುಳಿನ ನಿಗದಿತ ಒಂದು ಭಾಗಕ್ಕೆ ಸರಿಯಾದ ರೀತಿಯಲ್ಲಿ ರಕ್ತ ಪೂರೈಕೆ ಆಗದೇ ಹೋದಾಗ ಇಲ್ಲವೇ, ಮೆದುಳಿನ ರಕ್ತನಾಳಗಳಲ್ಲಿ ರಕ್ತ ಹೆಪ್ಪುಗಟ್ಟಿದಾಗ, ಇಲ್ಲವೇ ಮೆದುಳಿನ ಒಳಗೆ ರಕ್ತಸ್ರಾವ ಉಂಟಾದಾಗ ಕಂಡುಬರುವ ಪರಿಸ್ಥಿತಿಯೇ ಲಕ್ವ ಅಥವಾ ಪಾರ್ಶ್ವವಾಯುವಿನ ಹೊಡೆತ. ಇವಿಷ್ಟನ್ನು ಗಮನಿಸಿದರೆ, ಲಕ್ವ ಎಂದರೆ ಮೆದುಳಿಗೆ ರಕ್ತಪೂರೈಕೆಯಲ್ಲಿ ಕೊರತೆ ಕಂಡುಬಂದಾಗ ಉಂಟಾಗುವ ಪರಿಸ್ಥಿತಿ ಎಂಬುದು ಸ್ಪಷ್ಟವಾಗಿ ಮನವರಿಕೆಯಾಗುತ್ತದೆ.

ಸಾಮಾನ್ಯವಾಗಿ, ಪ್ರತಿ 100 ಮಿಲಿಗ್ರಾಂ ಮೆದುಳಿಗೆ 50ರಿಂದ 55 ಎಂಎಲ್‌ನಷ್ಟು ರಕ್ತ ಪ್ರತಿ ನಿಮಿಷ ಪೂರೈಕೆ ಆಗುತ್ತಿರುತ್ತದೆ. ಈ ರಕ್ತದ ಮೂಲಕ ಅಗತ್ಯ ಪೋಷಕಾಂಶ ಮತ್ತು ಆಮ್ಲಜನಕ ಮೆದುಳಿಗೆ ಪೂರೈಕೆ ಆಗುತ್ತದೆ. ಈ ಪ್ರಮಾಣದಲ್ಲಿ ಶೇಕಡ 25ರಷ್ಟು ಕಡಿಮೆ ಆದರೂ, ಕೂಡಲೇ ಮೆದುಳಿನ ಜೀವಕೋಶಗಳು ಸಾಯಲಾರಂಭಿಸುತ್ತವೆ. ಹೀಗೆ ಸಾಯಲಾರಂಭಿಸಿದ ಅದೇ ಹೊತ್ತಿಗೆ ಮತ್ತೆ ರಕ್ತದ ಪೂರೈಕೆ ಸರಿಯಾದಲ್ಲಿ, ಮೆದುಳಿನ ಜೀವಕೋಶಗಳು ನಿಧಾನವಾಗಿ ಚೇತರಿಸಿಕೊಂಡು ಮತ್ತೆ ಮೊದಲಿನಂತೆ ಕೆಲಸ ಮಾಡಲು ಆರಂಭಿಸುತ್ತವೆ. ಹೃದಯದಿಂದ ಪಂಪ್ ಆಗಿ ಹೊರಬರುವ ರಕ್ತ ಕುತ್ತಿಗೆ ಸಮೀಪದ ರಕ್ತನಾಳದಲ್ಲಿ ಅಥವಾ ಅಪಧಮನಿಯಲ್ಲಿ ಹೆಪ್ಪುಗಟ್ಟಿ ಅಡಚಣೆ ಉಂಟಾದಾಗ ಮೆದುಳಿಗೆ ರಕ್ತಪೂರೈಕೆಯಲ್ಲಿ ಕೊರತೆ ಉಂಟಾಗುತ್ತದೆ. ಇಂತಹ ಸಂದರ್ಭದಲ್ಲಿ, ಮೆದುಳಿನ ರಕ್ತಪೂರೈಕೆ ಮರುಸ್ಥಾಪನೆಗೆ ಇರುವ ಡೆಡ್‌ಲೈನ್ ಕೇವಲ 6 ಗಂಟೆ. ಈ ಅವಧಿಯನ್ನು **"ಗೋಲ್ಡನ್ ಪೀರಿಯಡ್ ಆಫ್ ಸಿಕ್ಸ್ ಅವರ್ಸ್"** ಅಥವಾ **"ಆರು ಗಂಟೆಗಳ ಸುವರ್ಣಾವಕಾಶ"** ಎಂದೇ ಹೇಳಲಾಗುತ್ತದೆ.

**ಲಕ್ವದ ಸಾಮಾನ್ಯ ಗುಣಲಕ್ಷಣಗಳು**

*ಒಂದು ಭಾಗದ ಕೈ ಅಥವಾ ಕಾಲಿನಲ್ಲಿ ಶಕ್ತಿ ಹೀನತೆ, ಇಲ್ಲವೇ ಶರೀರದ ಒಂದು ಭಾಗ ಸಂಪೂರ್ಣ ಸ್ವಾಧೀನ ತಪ್ಪಿದಂತಾಗುವುದು,* ಇದ್ದಕ್ಕಿದ್ದಂತೆ ಪ್ರಜ್ಞೆ ಕಳೆದುಕೊಳ್ಳುವುದು, ಮೊದಲಸಲ ಕಂಡುಬಂದ ಫಿಟ್ಸ್ ಅಥವಾ ಮೂರ್ಛೆರೋಗ, ಮುಖದ ಒಂದು ಭಾಗ ತಿರುವಿದಂತಾಗಿ ವಿರೂಪಗೊಳ್ಳುವುದು, ಜೊಲ್ಲು ಸುರಿಯುವುದು, ನಡೆಯುವಾಗ ನಿಯಂತ್ರಣ ತಪ್ಪುವುದು, ಮಾತು ನಿಂತುಹೋಗುವುದು ಅಥವಾ ಇದ್ದಕ್ಕಿದ್ದಂತೆ ದೃಷ್ಟಿಹೀನವಾಗುವುದು.

ಇಲ್ಲಿ ಹೇಳಿದ ಯಾವುದೇ ಗುಣಲಕ್ಷಣಗಳು ಕಂಡುಬಂದಲ್ಲಿ, ಕೂಡಲೇ ಆಸ್ಪತ್ರೆಗೆ ದಾಖಲಾಗಬೇಕು. ಯಾಕೆಂದರೆ ಅದು, ಹೃದಯಾಘಾತ (ಹಾರ್ಟ್ ಅಟ್ಯಾಕ್)ದಷ್ಟೇ ಅಪಾಯ ತಂದೊಡ್ಡುವ ಮೆದುಳಿನ ಆಘಾತ (ಬ್ರೈನ್ ಅಟ್ಯಾಕ್). ಈ ಗುಣಲಕ್ಷಣಗಳನ್ನು ಸುಲಭವಾಗಿ ನೆನಪಿಟ್ಟುಕೊಳ್ಳಲು ಆಂಗ್ಲಭಾಷೆಯಲ್ಲಿ FAST ಎಂದು ಹೇಳುತ್ತಾರೆ. ಎಫ್–ಎಂದರೆ, ಫೇಷಿಯಲ್ ಡಿಸ್‌ಫಿಗರ್‌ಮೆಂಟ್ (ಮುಖ ವಿಕಾರಗೊಳ್ಳುವುದು). ಎ–ಎಂದರೆ ಆರ್ಮ್ (ಕೈ) ತನ್ನ ಸ್ವಾಧೀನತೆ ಕಳೆದುಕೊಂಡಿರುವುದು, ಎಸ್–ಎಂದರೆ ಸ್ಪೀಚ್ (ಮಾತು–ಲಕ್ವ ಹೊಡೆದವರಿಗೆ ತಕ್ಷಣಕ್ಕೆ ಮಾತು ಬರದು), ಟಿ–ಎಂದರೆ ಟೈಮ್ – ಸಮಯ ಹಾಳು ಮಾಡದೇ ಕೂಡಲೇ ಆಸ್ಪತ್ರೆಗೆ ದಾಖಲಿಸಬೇಕು ಯಾಕೆಂದರೆ, **"ಟೈಮ್ ಈಸ್ ಬ್ರೈನ್"**.

ಲಕ್ವ ಹೊಡೆದವರನ್ನು ಅಥವಾ ಪಾರ್ಶ್ವವಾಯು ಪೀಡಿತರನ್ನು

ತಕ್ಷಣವೇ ಅಂದರೆ, ಸುವರ್ಣ ಅವಕಾಶದ ಆರು ಗಂಟೆಗಳ ಅವಧಿಯಲ್ಲೇ ಆಸ್ಪತ್ರೆಗೆ ದಾಖಲಿಸಿದರೆ, ರೋಗ ಗುಣಪಡಿಸಲು ವಿಭಿನ್ನ ಅವಕಾಶ ಇರುತ್ತದೆ.

**ಅವಕಾಶ 1** – ಹೆಪ್ಪುಗಟ್ಟಿದ ರಕ್ತವನ್ನು ಕರಗಿಸುವ ಔಷಧವನ್ನು ಕೈಯ ಹೊರಭಾಗದಿಂದಲೇ ರಕ್ತನಾಳ (ಅಭಿಧಮನಿ)ಕ್ಕೆ ಸೇರಿಸಬಹುದು.

**ಅವಕಾಶ 2** – ಮೆದುಳಿನ ಯಾವಭಾಗದಲ್ಲಿ ರಕ್ತ ಹೆಪ್ಪುಗಟ್ಟಿದೆ ಎಂಬುದನ್ನು ಪರಿಶೀಲಿಸಿ ಅಲ್ಲಿಗೇ ನೇರವಾಗಿ ಹೆಪ್ಪುಗಟ್ಟಿದ ರಕ್ತವನ್ನು ಕರಗಿಸುವ ಔಷಧವನ್ನು ನೀಡಬಹುದು.

**ಅವಕಾಶ 3** – ಪೆನುಂಬ್ರಾ ಎಂಬ ನಳಿಕೆಯ ಮೂಲಕ ಅಪಧಮನಿಯಲ್ಲಿ ಹೆಪ್ಪುಗಟ್ಟಿದ ರಕ್ತವನ್ನು ಹೀರಿ ಹೊರ ತೆಗೆದು ರಕ್ತ ಪೂರೈಕೆಯನ್ನು ಮರುಸ್ಥಾಪಿಸಬಹುದು.

**ಅವಕಾಶ 4** – ಹೆಪ್ಪುಗಟ್ಟಿದ ರಕ್ತವನ್ನು ಸ್ಟೆಂಟ್ ಮೂಲಕ ಹೊರತೆಗೆದು ಶರೀರಕ್ಕೆ ಪುನಃ ರಕ್ತ ಪೂರೈಸುವುದು.

ಇವೆಲ್ಲವೂ ಮೆದುಳಿಗೆ ರಕ್ತಪೂರೈಸುವಲ್ಲಿ ಪರಿಣಾಮಕಾರಿ ಪದ್ಧತಿಗಳು. ಆ ಮೂಲಕ ಮೆದುಳಿನ ಕಾರ್ಯಕ್ಷಮತೆಯನ್ನು ಉಳಿಸಿ ಕೊಳ್ಳುವುದು ಅಂದರೆ ಜೀವ ಉಳಿಸುವುದು. ಆದರೆ, ಇವೆಲ್ಲವೂ ಲಕ್ವ ಹೊಡೆದವರನ್ನು ಆರು ಗಂಟೆಯ ಒಳಗಾಗಿ ಆಸ್ಪತ್ರೆಗೆ ದಾಖಲಿಸಿದರೆ ಮಾತ್ರ ಸಾಧ್ಯ. ಆರು ಗಂಟೆ ಒಳಗೆ ಆಸ್ಪತ್ರೆಗೆ ದಾಖಲಿಸದೇ ಹೋದರೆ, ಮೆದುಳಿನ ಜೀವಕೋಶಗಳು ಸಾಯತೊಡಗುತ್ತವೆ. ಅದಕ್ಕೆ ಚೇತರಿಕೆ ಕೊಡುವುದು ಅಸಾಧ್ಯದ ಮಾತಾಗುತ್ತದೆ. ಕುತ್ತಿಗೆ ಭಾಗದ ರಕ್ತನಾಳ ಗಳಲ್ಲಿ ರಕ್ತ ಹೆಪ್ಪುಗಟ್ಟಿರುವುದು ಕಂಡುಬಂದರೆ, ಅಂಜಿಯೋಪ್ಲಾಸ್ಟಿ ಮತ್ತು ಸ್ಟೆಂಟ್ ಮೂಲಕ ಇದನ್ನು ವಾಸಿ ಮಾಡಬಹುದು. ತೊಡೆ ಸಂದಿನ ರಕ್ತನಾಳದಲ್ಲಿ ಸಣ್ಣ ತೂತು ಮಾಡುವ ಮೂಲಕ ಈ ಚಿಕಿತ್ಸೆ ನೀಡಬಹುದು. ಇದಕ್ಕೆ ಬೇರೆ ಶಸ್ತ್ರಚಿಕಿತ್ಸೆಯ ಅಗತ್ಯ ಇಲ್ಲ. ಈ ಚಿಕಿತ್ಸೆಯ ಗುಣ ಏನು ಅಂದರೆ, ಲಕ್ವ ಹೊಡೆದ ವ್ಯಕ್ತಿ ಮೊದಲಿನಂತೆ ಯಾರದೇ ಸಹಾಯವಿಲ್ಲದೇ ತನ್ನ ಕೆಲಸ ತಾನೇ ಮಾಡಿಕೊಳ್ಳುವ ಸಾಮರ್ಥ್ಯ ಮತ್ತೆ ಪಡೆಯುತ್ತಾನೆ. ಕೆಲವೊಮ್ಮೆ ಜೀವದಾನ ಪಡೆಯ ಬಹುದು. ಅದೇ ರೀತಿ, ವ್ಯಕ್ತಿ ಕುಟುಂಬದ ಆಧಾರಸ್ತಂಭವಾಗಿದ್ದಲ್ಲಿ ಎಲ್ಲವೂ ಅತ್ಯಂತ ಪ್ರಾಮುಖ್ಯತೆ ಪಡೆಯುತ್ತದೆ. ತಂತ್ರಜ್ಞಾನ ಅಭಿವೃದ್ಧಿ ಹೊಂದುತ್ತಿರುವ ಈ ಕಾಲದಲ್ಲಿ, ಸೂಕ್ತ ಸಮಯದಲ್ಲಿ ಆಸ್ಪತ್ರೆಗೆ ದಾಖಲಿಸಲ್ಪಟ್ಟರೆ, ಲಕ್ವ ಹೊಡೆದವರು ಕೂಡ ಗುಣಮುಖರಾಗಿ ಎಂದಿನಂತಾಗಬಹುದು. ವ್ಯಕ್ತಿಗೆ ಆಗುವ ವೈಯಕ್ತಿಕ ನಷ್ಟವನ್ನು ಹಾಗೆಯೇ ಕುಟುಂಬಕ್ಕೆ ಮತ್ತು ದೇಶಕ್ಕೆ ಆಗುವ ಮಾನವ ಸಂಪನ್ಮೂಲದ ನಷ್ಟವನ್ನು ಕೂಡಾ ತಡೆಯಬಹುದು.

**ಡಾ. ರವೀಂದ್ರ ಕಾಂಬ್ಳೆ,** ಎಂಡಿ, ಡಿಎನ್‌ಬಿ, ಡಿಎಂ,
ನ್ಯೂರೋರೇಡಿಯಾಲಜಿ, ಕನ್ಸಲ್ಟಂಟ್ ಇಂಟರ್‌ವೆನ್ಶನಲ್
ರೇಡಿಯಾಲಜಿಸ್ಟ್, ವಿಕ್ರಂ ಆಸ್ಪತ್ರೆ, ಬೆಂಗಳೂರು

ಹೊಸ ಓದು



**ಆಡಾಡತ ಆಯುಷ್ಯ**

(ಆತ್ಮ-ಕತೆಗಳು)

ಗಿರೀಶ ಕಾರ್ನಾಡ

**ಪುಟ : x + ೩೪೦ + ೨೪**

**ಬೆಲೆ : ರೂ. ೩೦೦**

**ಮನೋಹರ ಗ್ರಂಥಮಾಲಾ,**

ಲಕ್ಷ್ಮೀ ಭವನ,

ಸುಭಾಷ್ ರಸ್ತೆ,

ಧಾರವಾಡ - ೫೮೦ ೦೦೧

ಗಿರೀಶ್ ಕಾರ್ನಾಡರು ಅತ್ಯುತ್ತಮ ನಾಟಕ ಕೃತಿಗಳನ್ನು ರಚಿಸಿ ಖ್ಯಾತರಾಗಿದ್ದು ಭಾರತೀಯ ಜ್ಞಾನಪೀಠ ಪ್ರಶಸ್ತಿಯನ್ನು ಗಳಿಸಿದ್ದಾರೆ. ಧಾರವಾಡದಲ್ಲಿ ಡಿಗ್ರಿ ಮುಗಿಸಿದ ನಂತರ ಅಂದಿನ ಎಲ್ಲ ವಿದ್ಯಾರ್ಥಿಗಳಂತೆ ಭವಿಷ್ಯಕ್ಕಾಗಿ ಹೊಸ ದಿಗಂತಗಳನ್ನರಸುತ್ತ ಗರಿ ಮೂಡಿದ ಹಕ್ಕಿಯಂತೆ ಮುಂಬಯಿ, ಮುಂದೆ ಲಂಡನ್‌ಗಳಿಗೆ ಪಯಣಿಸಿದರು. ಲಭ್ಯ ಅವಕಾಶಗಳನ್ನು ಸದುಪಯೋಗ ಮಾಡಿಕೊಳ್ಳುತ್ತ ಮುನ್ನಡೆದರು. ಪ್ರತಿಭೆ ಯಾವುದೇ ದೇಶ ಪ್ರದೇಶಕ್ಕಷ್ಟೇ ಸೀಮಿತವಾಗಿರಬೇಕಾಗಿಲ್ಲವೆಂಬುದನ್ನು ತೋರಿಸಿಕೊಟ್ಟರು. ಇಲ್ಲಿನ ಅವರ ಆತ್ಮಕಥನದಲ್ಲಿ ತಮ್ಮ ಸಾಹಿತ್ಯ, ಸಂಗೀತ, ಕಾವ್ಯ, ನಿರ್ದೇಶನ ಇವುಗಳೆಲ್ಲದರ ಮಧ್ಯೆ ವಿದೇಶ ಪ್ರವಾಸ ಮತ್ತು ವಿವಿಧ ಹುದ್ದೆಗಳ ನಿರ್ವಹಣೆ ಇವನ್ನೆಲ್ಲ ಸಲೀಸಾಗಿ ನಿಭಾಯಿಸಿದುದರ ಬಗ್ಗೆ ವಿವರಣೆ ಇದೆ. ಎಲ್ಲೂ ಆತ್ಮ ಪ್ರಶಂಸೆ ಇಲ್ಲ. ಭಾರತದಲ್ಲೂ ಲಂಡನ್‌ನಲ್ಲೂ ಕಳೆದ ವರ್ಷಗಳನ್ನು, ಭೇಟಿಯಾದ ಪ್ರಸಿದ್ಧ ವ್ಯಕ್ತಿಗಳನ್ನು ಸಂದರ್ಭಾನುಸಾರ ಜ್ಞಾಪಿಸಿಕೊಳ್ಳುತ್ತ ಅವರೊಂದಿಗಿನ ಒಡನಾಟಗಳನ್ನು ಸ್ವಲ್ಪವೂ ಮುಚ್ಚುಮರೆ ಇಲ್ಲದೆ ಓದುಗರೊಂದಿಗೆ ಹಂಚಿಕೊಂಡದ್ದು ಅವರ ಬಗೆಗೆ ನಮಗಿದ್ದ ಪರಿಚಯವನ್ನು ಇನ್ನಷ್ಟು ವಿಸ್ತಾರವಾಗಿಸಿದೆ. ತಮ್ಮ ಕೃತಿಗಳನ್ನು ಇಂಗ್ಲಿಷ್‌ಗೆ ಭಾಷಾಂತರಿಸಿದ್ದಾರೆ. ಕಲಾತ್ಮಕ ಚಿತ್ರಗಳಲ್ಲದೆ ರಂಗ ನಾಟಕ ಪ್ರಯೋಗಗಳಲ್ಲೂ ಪರಿಣತರು. ಸ್ವತಃ ರಂಗಭೂಮಿ ನಟರು. ಈ ಪುಸ್ತಕದ ಮುಂದಿನ ಭಾಗವನ್ನೂ ಬರೆಯಲಿದ್ದಾರಂತೆ.

**ಜಾತಿ ವ್ಯವಸ್ಥೆ - ಉಗಮ ವಿಕಾಸ ವಿನಾಶ**

ಮೂಲ : ಡಾ॥ ಬಿ. ಆರ್. ಅಂಬೇಡ್ಕರ್; ಕನ್ನಡಕ್ಕೆ : ರಾಹು

**ಪುಟ : xii + ೧೬೮** **ಬೆಲೆ : ರೂ. ೧೦೦**

**ಸುಮೇಧ ಪ್ರಕಾಶನ,** ಪ್ಲೋಟ್ ನಂ. ೨೦, ನಂ. ೧-೯೪೯, ಹಳೇ ಜೇವರ್ಗಿ ರಸ್ತೆ,

ದೇವನಗರ, ಗುಲ್ಬರ್ಗ - ೫೮೫ ೧೦೨

ಹಿಂದೆಯೂ ಕೂಡ ಒಂದು ವ್ಯವಸ್ಥೆಯು ಬುಡಕಟ್ಟುಗಳ ರೂಪದಲ್ಲಿದ್ದು ಅದು ಇಂದಿನಷ್ಟು ಜಟಿಲವಾಗಿರದೆ ಸಹ್ಯರೂಪದಲ್ಲಿತ್ತು. ಮುಂದೆ ವರ್ಣವ್ಯವಸ್ಥೆ ಸಮಾಜದಲ್ಲಿ ಹೇರಲ್ಪಟ್ಟಾಗ ಜಾತಿಪದ್ಧತಿಗೆ ಗರಿಮೂಡಿತು. ವರ್ಣವ್ಯವಸ್ಥೆ ದೈವ ನಿರ್ಮಿತವೆಂದು ನಂಬಿಸಿ ಶಕ್ತರು ಅಶಕ್ತರನ್ನು ದಮನಿಸತೊಡಗಿದರು. ಯಾವ ಕೋನದಿಂದ ನಿಂತು ಚರಿತ್ರೆಯನ್ನು ಗ್ರಹಿಸಿದರೂ ನಮ್ಮ ದೇಶದ ಶೂದ್ರ ಸಮುದಾಯ - ಅಸ್ಪೃಶ್ಯರ ದಯನೀಯ ಸ್ಥಿತಿಗೆ ಬ್ರಾಹ್ಮಣಶಾಹಿಯೇ ಹೊಣೆಯೆಂದು ಅಧ್ಯಯನಗಳು ತಿಳಿಸುತ್ತಿವೆ. ಜಾತಿವಿನಾಶದ ಕನಸು ಕಂಡು ಜಾತಿಪದ್ಧತಿಯ ನಿರ್ಮೂಲನೆಗೆ ಪಣತೊಟ್ಟು ಸಿಡಿದೆದ್ದ ನಮ್ಮ ದೇಶದ ಕ್ರಾಂತಿಕಾರಿ ಮುಖಂಡ ಡಾ॥ ಬಿ. ಆರ್. ಅಂಬೇಡ್ಕರ್ ಅವರ ಚಿಂತನೆಗಳು ಅನುವಾದಗೊಂಡಿವೆ. ದಮನಿತರಿಗೆ ಧ್ವನಿಯಾಗಿ ದೇಶದುದ್ದಗಲಕ್ಕೂ ವ್ಯಾಪಿಸಿದ ಅವರ ಹೋರಾಟಗಳಿಂದ ಇಪ್ಪತ್ತನೇ ಶತಮಾನದಲ್ಲಿ ಸ್ವಲ್ಪ ಸುಧಾರಣೆ ಕಂಡುಬಂದರೂ ಜಾತೀಯ ಬೇರುಗಳನ್ನು ಮೂಲೋತ್ಪಾಟನೆ ಮಾಡಲಾಗಲೇ ಇಲ್ಲ. ಜಾತಿ ರಾಜಕಾರಣ ಮಿತಿಮೀರಿದ್ದು, ನಮ್ಮ ದೇಶದ ಹೆಚ್ಚಿನ ಓಟುಗಳೆಲ್ಲ ಜಾತಿ ಆಧಾರದ ಮೇಲೆ ಗುರುತಿಸಲ್ಪಟ್ಟಿವೆ. ಅಂಬೇಡ್ಕರ್ ರವರಿಗೆ ಅಸಂಖ್ಯ ಅನುಯಾಯಿಗಳಿದ್ದರೂ ಸಹ ಅವರ ನಂತರದಲ್ಲಿ ಸುಧಾರಣೆಗಳು ಹಿನ್ನಡೆ ಕಂಡವು. ಎಲ್ಲ ಜಾತಿಗಳನ್ನೂ ಸಮಾನವಾಗಿ ಕಾಣೋಣ ಎಂಬ ಸಿದ್ಧಾಂತ ತಲುಪಿದೆವೇ ಹೊರತು ಜಾತಿನಿರ್ಮೂಲನೆ ಮಾಡಲು 'ಮನಸ್ಸು' ಮಾಡಲೇ ಇಲ್ಲ! ಇಂದು ಒಂದು ದೊಡ್ಡ ಸಮಸ್ಯೆಯಾಗಿರುವ ಜಾತಿಯ ಬಗ್ಗೆ ಅಂಬೇಡ್ಕರರ ವಿಚಾರವನ್ನಿಲ್ಲಿ ಓದಿ ತಿಳಿಯೋಣ.



**ಅಂತರಂಗದ ಮೃದಂಗ (ಪ್ರಬಂಧಗಳು)**

ನರಹಳ್ಳಿ ಬಾಲಸುಬ್ರಹ್ಮಣ್ಯ

**ಪುಟ : xvi + ೧೨೮ = ೧೪೪** **ಬೆಲೆ : ರೂ. ೧೦೦**

**ಮನೋಹರ ಗ್ರಂಥಮಾಲಾ,** ಲಕ್ಷ್ಮೀ ಭವನ, ಸುಭಾಷ್ ರಸ್ತೆ, ಧಾರವಾಡ - ೫೮೦ ೦೦೧

ಇವು ಅಂತರಂಗದ ಒಳದನಿಗಳು. ಪ್ರತಿ ಮನುಷ್ಯನಲ್ಲಿಯೂ ಆಳದಿಂದ ಒಸರಾಗಿ ಹರಿದುಬಂದು ತಿಳಿಗೊಳದಂತೆ ಮಡುಗಟ್ಟಿ ನಿಂತವುಗಳು. ಬದುಕು ನಮಗೆ ಪಾಠ ಕಲಿಸುವುದೂ ಇವುಗಳ ಮೂಲಕವೇ. ನಮ್ಮ ಬಾಳಷ್ಟೇ ಪ್ರಪಂಚವಲ್ಲ; ಅಲ್ಲಿ ಸಹಜೀವಿಗಳಿದ್ದಾರೆ. ಸಹಸ್ಪಂದನ ಮತ್ತು ಸಾಂತ್ವನಕ್ಕೆ ಕಲ್ಲನ್ನೂ ಕರಗಿಸುವ ಶಕ್ತಿ ಇದೆ. ಎಷ್ಟೋ ಸಂದರ್ಭಗಳಲ್ಲಿ ನಾವಂದುಕೊಂಡಿರುವಂತೆ ಇಲ್ಲದಿರುವ ಸಾಧ್ಯತೆಯಿದೆ. ನಿಜ ತಿಳಿಯುವುದು ಆ ಇನ್ನೊಬ್ಬರ ಒಳದನಿಗಳನ್ನು ನಾವು ಕೇಳಿಸಿಕೊಂಡಾಗ ಮಾತ್ರ. ವ್ಯಕ್ತಿಯ ಬಾಳಿನಲ್ಲಿ ಸಹಬಾಳ್ವೆಯು ಎಂತೆಂತಹ ಮನಸ್ಸುಗಳನ್ನು ಬೆಸೆಯುತ್ತವೆಂಬ ಉದಾಹರಣೆಗಳು ಇಲ್ಲಿ ಸಿಗುತ್ತವೆ. ತಮ್ಮ ಬಗ್ಗೆ ಹೇಳುತ್ತಲೇ ಸಮುದಾಯದ ಸುಖ-ದುಃಖಗಳನ್ನೂ ಇಲ್ಲಿ ನರಹಳ್ಳಿಯವರು ಬಿಚ್ಚಿಡುತ್ತಾರೆ. ಪುಟ್ಟ ಪುಟ್ಟ ಘಟನಾವಳಿಗಳಂತೆ ಕಂಡುಬಂದರೂ ಈ ಲೋಕದ ಎಲ್ಲ ಪ್ರಸಂಗಗಳಿಗೂ ಅದರದೇ ಆದ ಒಳದನಿಯೊಂದಿದ್ದು ಪ್ರತಿಯೊಂದೂ ಪ್ರತ್ಯೇಕವಾದ ಕಥೆಯನ್ನೇ ಹೇಳುತ್ತದೆ. ಬುದ್ಧಿ ಹೇಳಲು ಹೋಗಿ ಬುದ್ಧಿ ಕಲಿತುಕೊಳ್ಳಬೇಕಾದ ಪ್ರಸಂಗವೊಂದು ಇಲ್ಲಿದೆ. ಕೋಪದ ಬಗ್ಗೆ, ಕೋಪದಿಂದಾದ ಅನಾಹುತಗಳ ಬಗ್ಗೆ ಸುದೀರ್ಘವಾದ ಎಚ್ಚರಿಕೆಯಂತಹ ವಿಷಯ ವಿವರಣೆಯಿದೆ. ಬದುಕಿನ ಇಕ್ಕಟ್ಟಿನ ತಿರುವುಗಳಲ್ಲಿ ಸಾವಧಾನದಿಂದ ಚಲಿಸಬೇಕಾದ ಅಗತ್ಯವನ್ನು ಒತ್ತಿಹೇಳಲಾಗಿದೆ. ಇವೆಲ್ಲ ನಮಗೆ ಜಗತ್ತನ್ನು ಅರ್ಥಮಾಡಿಸುವ ಮತ್ತು ಜಗತ್ತಿನೊಂದಿಗೆ ಹೆಜ್ಜೆಹಾಕಲೇಬೇಕಾದ ನಾವು ಏನು ಮಾಡಬಹುದೆನ್ನುವುದನ್ನು ಯೋಚನೆಗೆ ಹಚ್ಚುವ ಬರಹಗಳು.

**ಇಲ್ಲಿ ಯಾರೂ ಮುಖ್ಯರಲ್ಲ (ಕನ್ನಡ ಸಾಹಿತ್ಯ ಮೀಮಾಂಸೆ)**

ರಹಮತ್ ತರೀಕೆರೆ

**ಪುಟ : xii + ೩೨೮**

**ಬೆಲೆ : ರೂ. ೧೬೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ್ ಹಾಸ್ಟೆಲ್, ಗದಗ - ೫೮೨ ೧೦೧





ಸಾಹಿತ್ಯ ಕೃತಿಗಳು ಓದುಗನಲ್ಲಿ ಮೂಡಿಸಬಹುದಾದ ಭಾವನೆಗಳು ಭಿನ್ನ. ಕನ್ನಡದಲ್ಲಿ ಬಂದಿರುವ ಹೆಚ್ಚಿನ ಕಾವ್ಯ-ಸಾಹಿತ್ಯ ಕೃತಿಗಳು ಸಂಸ್ಕೃತದ ಇಲ್ಲವೇ ಇಂಗ್ಲಿಷಿನ ಪಡಿನೆಳಲಾಗಿ ರಚಿತವಾಗಿದ್ದು ನವೋದಯ ಮತ್ತು ನವ್ಯ ಸಾಹಿತ್ಯದಲ್ಲಿ ಸೃಜನಶೀಲ ಮತ್ತು ತನ್ನತನದ ಹುಡುಕಾಟ ನಡೆದದ್ದು ಎಲ್ಲರಿಗೂ ಗೊತ್ತಿದೆ. ಮುಂದೆ ಸಾಕಷ್ಟು ದೇಸೀತನದಲ್ಲಿ ವಿಪುಲ ಸಾಹಿತ್ಯ ಹೊರಬಂದಿದೆ. ರಹಮತ್‌ರವರು ಸಾಹಿತ್ಯದ ಜಾಡನ್ನು ಹಿಡಿದು ಬಹು ಆಳಕ್ಕಿಳಿದು ತನ್ನದೇ ನೆಲೆಯಲ್ಲಿ ಅದನ್ನು ವ್ಯಾಖ್ಯಾನಿಸುತ್ತಾರೆ. ಸಾಹಿತ್ಯಕ-ಸಾಂಸ್ಕೃತಿಕ ಮುಖಾಮುಖಿ ಅವರಿಗೆ ತುಂಬ ಪ್ರಿಯ. ಇಲ್ಲಿನ ಕನ್ನಡ ಸಾಹಿತ್ಯ ಮೀಮಾಂಸೆಯೂ ಹೊಸ ದಿಕ್ಕಿನಲ್ಲಿ ಸಾಗುತ್ತ ಹೊಸ ಹೊಳಹುಗಳನ್ನು ಕಾಣಿಸುತ್ತದೆ. ಇಲ್ಲಿನ ಅವಲೋಕನಕ್ಕೆ ಕಾವ್ಯ-ಕೃತಿ ಯಾವುದೇ ಇರಲಿ, ಲೇಖಕ ಯಾರೇ ಇರಲಿ, ತನ್ನಳತೆಯ ಮಿತಿಯಲ್ಲಿ ಎಲ್ಲರಿಗೂ - ಎಲ್ಲಕ್ಕೂ ಒಂದೇ ರೀತಿಯ ಗೌರವ - ಆದರ ತೋರಿದ್ದಾರೆ. ಪ್ರತಿಯೊಂದು ಕೃತಿ ರಚನೆಯಲ್ಲಿ ಬಿಡಿಸಲಾಗದ ಸಂಬಂಧವಾಗಿರುವ ಲೇಖಕ - ವಸ್ತು - ಪ್ರೇರಣೆ - ಭಾಷೆ - ಪ್ರಭಾವ ಮಾತ್ರವಲ್ಲದೆ ಸೃಜನಶೀಲತೆ - ತನ್ನತನ ಓಹ್ ಎಂಥ ಮಾಧುರ್ಯವಿದೆ ಇಲ್ಲಿ! ಇದನ್ನೆಲ್ಲ ಬಿಡಿಸಿ ನಿರೂಪಿಸಿ ಮನಗಾಣಿಸುವುದು ಓದಿನ ಅನುಭವದಿಂದ ಮಾತ್ರ ಸಾಧ್ಯ. ಇಂಥ ಪುಸ್ತಕ ರಚನೆಗೆ ರಹಮತ್ ಅವರ ಓದಿನ ಹರವು ಎಷ್ಟೆಂಬುದು ಅಧ್ಯಾಯಗಳ ನಂತರ ಪಟ್ಟಿಮಾಡಿದ ಟಿಪ್ಪಣಿಗಳ ಪಟ್ಟಿ ನೋಡಿದರೆ ತಿಳಿದೀತು. ನಾವು ಸಾಹಿತ್ಯ ಓದುವುದೆಂದರೆ ಹಾಲು ಕುಡಿದಂತೆ. ಆದರೆ ರಹಮತ್ ಇಲ್ಲಿ ಕೆನೆಹಾಲ ಕಡೆದು ನವನೀತವನ್ನು ನಮ್ಮ ಬಾಯಿಗಿಟ್ಟಿದ್ದಾರೆ. ಸುಮಾರು ಒಂದುನೂರರಷ್ಟು ಸಾಹಿತ್ಯ ಕೃತಿಗಳ ಸಾರ ಸವಿಯೋಣ.

**ಪೀನೀ ಹೂ (ಹಲವು ಮಾರ್ಗಗಳ ಅನುವಾದ ಕವಿತೆಗಳು)**

ಆರ್. ವಿಜಯರಾಘವನ್

**ಪುಟ : xviii + ೧೪೮** ಬೆಲೆ : ರೂ. ೧೦೦

**ವಿಹಾ ಪುಸ್ತಕ**, ನಂ. ೧೭೩, ೭ನೇ ಮುಖ್ಯರಸ್ತೆ, ೨೪ನೇ 'ಎ' ಅಡ್ಡರಸ್ತೆ, ಗೋವಿಂದರಾಜನಗರ, ನಾಗರಬಾವಿ ಮುಖ್ಯರಸ್ತೆ, ಬೆಂಗಳೂರು - ೫೬೦ ೦೭೯

ಇವು ಪಾಶ್ಚಾತ್ಯ ಕವಿಗಳನ್ನು ಕಾಡಿದ, ಈ ಲೋಕದ ಕ್ರೌರ್ಯವನ್ನು ಅನಾವರಣಗೊಳಿಸಿದ ಕವಿತೆಗಳ ಅನುವಾದ. ಭಯಾನಕ ರೀತಿಯಲ್ಲಿ ಸಾವನ್ನು ಎದುರಿಸಿದ ಲೋರ್ಕಾ, ಎಡಪಂಥೀಯ ಮಾರ್ಕ್ಸ್‌ವಾದೀ ನಿಲುವು ತಳೆದುದಕ್ಕಾಗಿ ಟರ್ಕಿದೇಶದ ಪೌರತ್ವ ಕಳೆದುಕೊಂಡ ನಜೀಂ ಹಿಕ್ಮತ್, ಕಾವ್ಯದಲ್ಲಿ ಅಗಾಧತೆ-ಅಸಾಂಗತ್ಯ ಮತ್ತು ಬೆಚ್ಚಿಬೀಳಿಸುವ ಅಂಶಗಳನ್ನು ಚಿತ್ರಿಸುವ ವಾಸ್ಕೋಪೋಪ ಮುಂತಾದ ಕವಿಗಳಿಲ್ಲಿ ಪರಿಚಯವಾಗುತ್ತಾರೆ. ಯೂರೋಪಿನಾದ್ಯಂತ ಅತ್ಯಂತ ಭಯಾನಕ ಚರಿತ್ರೆ ಸೃಷ್ಟಿಸಿದ ಅಧಿಕಾರದಾಹಿ - ಧನದಾಹಿ - ಸಾಮ್ರಾಜ್ಯಶಾಹಿಗಳ ಕುಕೃತ್ಯಗಳನ್ನೆಲ್ಲ ಈ ಕವಿಗಳು ದಾಖಲಿಸಿದ್ದಾರೆ. ಯುದ್ಧೋನ್ಮಾದ ಮೇರೆ ಮೀರಿದ ಸಂದರ್ಭದಲ್ಲಿ ಹಿಂಸ್ರ ಪಶುಗಳಂತೆ ಸಹಮಾನವರನ್ನು ಪೀಡಿಸಿದ ಬಗ್ಗೆ ಈ ಕವಿತೆಗಳು ಮರುಕಪಡುತ್ತವೆ. ಹಿಂಸೆಗೆ ಬಲಿಯಾದವರನ್ನೂ, ಹಿಂಸಿಸಿದವರನ್ನೂ ಕವಿ ಸೋದರನೆಂದೇ ಸಂಬೋಧಿಸುತ್ತಾನೆ. ದುರದೃಷ್ಟದಿಂದ ಹಿಂಸೆ ಮಾಡುವ ಗುಂಪು ಮಿಲಿಯಾಂತರದಷ್ಟಿದೆಯೆಂದು ಖೇದಗೊಳ್ಳುತ್ತಾನೆ. ಸೋದರ ಸೋದರನನ್ನು ಕೊಲ್ಲುತ್ತಾನೆ. ನಮಗೆ ನಮ್ಮ ಮಹಾಭಾರತದ ನೆನಪಾಗುತ್ತದೆ. ಪ್ರಪಂಚದಾದ್ಯಂತ ವ್ಯಾಪಿಸಿರುವ ಹಿಂಸೆ ಕ್ರೌರ್ಯಗಳು ಇಂದಿಗೂ ಕಡಿಮೆಯಾಗಿಲ್ಲ. ಇಂಥ ಸಂದರ್ಭದಲ್ಲಿ ಈ ಕವನಗಳು ನಮ್ಮಲ್ಲಿ ಉಂಟುಮಾಡುವ ಭಾವನೆಗೆ ಹೆಚ್ಚಿನ ಮಹತ್ವ ಇರಬಹುದು. ಅಥವಾ ಕ್ರೌರ್ಯಗಳು ಹೆಚ್ಚಾದಂತೆಲ್ಲ ಮಾನವೀಯತೆಗೇ ಮಹತ್ವ ಇಲ್ಲದಿರಬಹುದು. ಅಂತೂ ಇವು ಮನಕಲಕುವ ಕವಿತೆಗಳೇ ಆಗಿವೆ.



**ಸಿರಿಧಾನ್ಯ – ಸುಸ್ಥಿರ ಕೃಷಿ, ಆಹಾರ ಭದ್ರತೆಗೆ ಆಧಾರ**

ಸಂಪಾದಕಿ : ಅನಿತಾ ಪೈಲೂರು

**ಪುಟ : x + ೭೦** ಬೆಲೆ : ರೂ. ೭೫

**ಕೃಷಿ ಮಾಧ್ಯಮ ಕೇಂದ್ರ**, ೧೧೯, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ - ೫೮೦ ೦೦೮

ರೈತರು ತಮ್ಮ ಜಮೀನುಗಳಲ್ಲಿ ರಾಸಾಯನಿಕಗಳನ್ನು ಬಳಸದೆ ಸಾವಯವ ಕೃಷಿಪದ್ಧತಿಯಿಂದ ಧಾನ್ಯ ಬೆಳೆಸಬೇಕೆಂಬ ಉದ್ದೇಶದಿಂದ ಧಾರವಾಡದ ಕೃಷಿ ಮಾಧ್ಯಮ ಕೇಂದ್ರದವರು ಮೂರು ಪುಸ್ತಕಗಳನ್ನು ಪ್ರಕಟಿಸಿದ್ದಾರೆ. ಈ ಬಗ್ಗೆ ರೈತರಲ್ಲಿ ಜಾಗೃತಿ ಉಂಟಾಗಲು ರೈತರಿಗಾಗಿ ಕೃಷಿ-ಮಾಹಿತಿ ತರಬೇತಿ ನೀಡುತ್ತಲಿದ್ದಾರೆ. ಆಸಕ್ತರು ಇದಕ್ಕೆ ಸ್ವಲ್ಪ ಸ್ಪಂದಿಸಿದರೂ ಇದನ್ನೊಂದು ಚಳುವಳಿಯನ್ನಾಗಿ ರೂಪಿಸಿ ರೈತ ಹೊಸದಾರಿಯಲ್ಲಿ ನಡೆಯಲು ಅವಕಾಶ ಇದೆ. ಮಾದರಿಗಾಗಿ ಸಾವಯವ-ನೈಸರ್ಗಿಕ ಕೃಷಿಗೆ ಆದ್ಯತೆ ನೀಡಿ ಸುಮಾರು ೨೭ ರೀತಿಯ ಭತ್ತ ಬೆಳೆದು ಭತ್ತದ ಮ್ಯೂಸಿಯಂಅನ್ನು ಪ್ರದರ್ಶಿಸಿದ ಮಂಡ್ಯದ ಶಿವಳ್ಳಿಯ ಬೋರೇಗೌಡರನ್ನು ಪರಿಚಯಿಸಿದ್ದಾರೆ. ಇನ್ನೋರ್ವ ಹಣ್ಣಿನ ಬೆಳೆಗಾರ ಎಡ್ವರ್ಡ್ ರೆಬೆಲ್ಲೊ ಬಗ್ಗೆಯೂ ಒಂದು ಕಿರುಪುಸ್ತಕ. ರೆಬೆಲ್ಲೊ ಮೂಡಬಿದಿರೆಯ ತಮ್ಮ ಹೊಲದಲ್ಲಿ ಅಪರೂಪದ ತರಕಾರಿ-ಹಣ್ಣಿನ ಗಿಡಗಳನ್ನು ಬೆಳೆಸುತ್ತ ತಮ್ಮ ಸ್ನೇಹಿತರ ವಲಯದಲ್ಲೂ ತಮ್ಮ ಕೃಷಿ ಮಾಹಿತಿಯನ್ನು ಹಂಚುತ್ತ ತಾನೂ ಕಲಿಯುತ್ತ ಎಲ್ಲರಿಗೂ ಆತ್ಮೀಯರಾಗಿದ್ದಾರೆ. ಇನ್ನೊಂದು ಪುಸ್ತಕದಲ್ಲಿ ಸಿರಿಧಾನ್ಯಗಳೆಂದು ಹೆಸರಿಸಲಾದ ರಾಗಿ, ಸಾವೆ, ನವಣೆ, ಸಜ್ಜೆ, ಹಾರಕ ಮುಂತಾದುವನ್ನು ಬಹು ಬೆಳೆಗಳನ್ನಾಗಿ ಬೆಳೆಯುವ ವಿಧಾನವನ್ನು ತಿಳಿಸಿದ್ದಾರೆ. ಬಿ. ಟಿ. ತಂತ್ರಜ್ಞಾನ ತಳಿಗಳ ಮುಂದೆ ಸೊರಗಿದ ಈ ಧಾನ್ಯಗಳ ಔಷಧೀಯ ಗುಣಗಳನ್ನು ತಿಳಿಸುತ್ತ ಇವುಗಳಿಂದ ಸ್ವಾದಿಷ್ಟ-ಪೌಷ್ಟಿಕ ತಿನಿಸು ತಯಾರಿಸುವುದನ್ನು ವಿವರಿಸಲಾಗಿದೆ. ಬಾಯಲ್ಲಿ ನೀರೂರಿಸುವಂತಹ ತಿಂಡಿಗಳ ಚಿತ್ರಗಳಂತೂ ಸೊಗಸಾಗಿವೆ. ರೈತರೇ ಗಮನಿಸಿ, ಸಾಲವಿಲ್ಲದೆಯೂ, ರಾಸಾಯನಿಕಗಳಿಲ್ಲದೆಯೂ ಬೀಜಗಳನ್ನು ತಮ್ಮ ಸಸಿಗಳಿಂದಲೇ ಪಡೆದು ಕೃಷಿ ಮಾಡಬಹುದು. ಎಲ್ಲದಕ್ಕೂ ಸರಕಾರದ ಕಡೆಗೆ ನೋಡುವುದನ್ನು ನಿಲ್ಲಿಸಬಹುದು.



ನಾ. ಕಾರಂತ ಪೆರಾಜೆ
**ಪುಟ : iv + ೨೪**
ಬೆಲೆ : ರೂ. ೨೦



ಸೀಮಾ ಜಿ. ಪ್ರಸಾದ್
**ಪುಟ : iv + ೨೪**
ಬೆಲೆ : ರೂ. ೨೦

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ಮಾಹಿಮ ಖಾರಿ** (ಕಾದಂಬರಿ) ಮಧು ಮಂಗೇಶ ಕರ್ಣಿಕ
ಅನು : ಪ್ರೊ|| ಚಂದ್ರಕಾಂತ ಪೋಕಳೆ
**ಪುಟ : ೧೩೨** ಬೆಲೆ : ರೂ. ೮೦

**ಏಳು ಪರ್ವತಗಳು ಒಂದು ನದಿ** (ಈಶಾನ್ಯ ರಾಜ್ಯಗಳ ಪರಿಚಯ)
ಡಾ|| ಎಂ. ವೆಂಕಟಸ್ವಾಮಿ
**ಪುಟ : ೧೭೬** ಬೆಲೆ : ರೂ. ೧೧೦

**ಈಶಾನ್ಯ ಭಾರತದ ಆಧುನಿಕ ಮತ್ತು ಐತಿಹ್ಯ ಕತೆಗಳು**
(ಅನು) ಡಾ|| ಎಚ್. ಎಸ್. ಎಂ. ಪ್ರಕಾಶ್, ಡಾ|| ಎಂ. ವೆಂಕಟಸ್ವಾಮಿ
**ಪುಟ : ೧೧೨** ಬೆಲೆ : ರೂ. ೭೦

ಮೇಲಿನ ಮೂರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಪರಿಮಳದ ಬೆಲೆ ಎಷ್ಟು?** (ಪ್ರೌಢಮಕ್ಕಳ ತಮಾಷೆ ಕಥೆಗಳು)
ಶಾಂತಾರಾಮ ಸೋಮಯಾಜಿ
**ಪುಟ : ೮೨** ಬೆಲೆ : ರೂ. [illegible]

**ಕೃಷಿ ಪಂಡಿತ ಆಮೆ ಮತ್ತು ಲೋನ್‌ಸಮ್ ಜಾರ್ಜ್** (ಪ್ರೌಢ ಮಕ್ಕಳಿಗೆ ವಿಚಾರ ವಿನೋದ) ಶಾಂತಾರಾಮ ಸೋಮಯಾಜಿ
**ಪುಟ : ೮೦** ಬೆಲೆ : ರೂ. ೪೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಶ್ರೀನಿವಾಸ ಪುಸ್ತಕ ಪ್ರಕಾಶನ, ನಂ.೧೬೪/ಎ, ಮೊದಲನೇ ಮಹಡಿ, ಎಂ. ಆರ್. ಎನ್. ಬಿಲ್ಡಿಂಗ್, ಕನಕಪುರ ರಸ್ತೆ, ಬಸವನಗುಡಿ, ಬೆಂಗಳೂರು - ೪

**ಉತ್ತರಾಪಥ** (ಈವರೆಗಿನ ಕಥೆಗಳು) ನಾರಾಯಣ ಕಂಗಿಲ
**ಪುಟ : ೧೧೦** ಬೆಲೆ : ರೂ. ೬೦

**ಶಬ್ದ ಮತ್ತು ನೂಪುರ** (ಕಾದಂಬರಿ) ನಾರಾಯಣ ಕಂಗಿಲ
**ಪುಟ : ೮೦** ಬೆಲೆ : ರೂ. ೪೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಶ್ರೀರಾಮ ಪ್ರಕಾಶನ**, ನಂ. ೮೯೩/ಡಿ, ಮೂರನೇ ಕ್ರಾಸ್, ಪೂರ್ವ ಬಡಾವಣೆ, ನೆಹರು ನಗರ, ಮಂಡ್ಯ.

**ಅಚ್ಚು-ಮೆಚ್ಚು** (ಹನಿಗವನ ಸಂಕಲನ) ಪದ್ಮಾವತಿ ಚಂದ್ರು
**ಪುಟ : ೮೦** ಬೆಲೆ : ರೂ. ೭೫

**ಪದ್ಮಾವತಿ ಪ್ರಕಾಶನ**, ನಂ. ೧೫೦/೧, ಕತ್ರಗುಪ್ಪೆ ಮುಖ್ಯರಸ್ತೆ, ೧ನೇ ಅಡ್ಡರಸ್ತೆ, ಸಿದ್ಧಾರ್ಥ ಲೇ ಔಟ್, ವಿವೇಕಾನಂದನಗರ, ಬನಶಂಕರಿ, ೩ನೇ ಹಂತ, ಬೆಂಗಳೂರು - ೫೬೦೦೮೫

**ಮರದ ಮರ್ಮರ** (ಮಕ್ಕಳ ನಾಟಕ) ನಾರಾಯಣ ಕಂಗಿಲ
**ಪುಟ : ೪೪** ಬೆಲೆ : ರೂ. ೩೦

**ಆಕೃತಿ ಪುಸ್ತಕ**, ೩೧/೧, ೧೨ನೇ ಮೈನ್, ೩ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು - ೫೬೦ ೦೧೦

**ಹೈನುಗಾರಿಕೆಯಿಂದ ಸ್ವಾವಲಂಬಿ ಬದುಕು** ಯಲ್ಲಪ್ಪ-ಯಲ್ಲವ್ವ ಬಲುಕುಂದಿ ದಂಪತಿಯ ಸಾಧನೆ ಕಿಶನ್ ರಾವ್ ಕುಲಕರ್ಣಿ
**ಪುಟ : ೨೮** ಬೆಲೆ : ರೂ. ೨೦

**ಕೃಷಿ ಮಾಧ್ಯಮ ಕೇಂದ್ರ**, ನಂ. ೧೧೯, ೧ನೇ ಮುಖ್ಯರಸ್ತೆ, ೪ನೇ ಅಡ್ಡರಸ್ತೆ, ನಾರಾಯಣಪುರ, ಧಾರವಾಡ -೫೮೦೦೦೮

**ಪರಿಮಳ**(ವೈಚಾರಿಕ ಲೇಖನಗಳ ಸಂಕಲನ)
ಬಿ. ಪಿ. ಶಿವಾನಂದರಾವ್
**ಪುಟ : ೧೮೮** ಬೆಲೆ : ರೂ. ೧೧೫

**ಐಬಿಎಚ್ ಪ್ರಕಾಶನ**, ೯೭ ಪ್ರಧಾನ್ ರೆಸಿಡೆನ್ಸಿ, ೨೪ನೇ ಕ್ರಾಸ್, ಜಯನಗರ ೩ನೇ ಬ್ಲಾಕ್, ಪೂರ್ವ, ಬೆಂಗಳೂರು - ೧೧

**ಹಾಲುಮತ ಸಂಸ್ಕೃತಿ ಸಂ - ೧** (ಸಂಶೋಧನ ಸಂಪ್ರಬಂಧಗಳು) ಡಾ|| ಎಫ್ ಟಿ. ಹಳ್ಳಿಕೇರಿ
**ಪುಟ : ೩೦೨** ಬೆಲೆ : ರೂ. ೩೦೦

**ವಿಕಾಸ ಪ್ರಕಾಶನ**, ಶೋಧನ, ಶಿಕ್ಷಕರ ಬಡಾವಣೆ, ಎಂ. ಪಿ. ಪ್ರಕಾಶನಗರ, ಹೊಸಪೇಟೆ

# ಆಲೆಮನೆ ಜಂಗಿ : ಕಾರ್ಯಾಚರಣೆ ಭಂಗಿ

**ಸು**ತ್ತಲೂ ಕಬ್ಬಿನ ಗದ್ದೆ. ಮಧ್ಯೆ ಒಂದು ಪುಟ್ಟ ಚಪ್ಪರ. ಆಲೆ ಒಲೆಯಲ್ಲಿ ನಿಗಿ ನಿಗಿ ಉರಿಯತ್ತಿರುವ ಕೆಂಡ. ಆಸುಪಾಸು ಫರ್ಲಾಂಗು ದೂರದವರೆಗೂ ಹಬ್ಬಿರುವ ನೊರೆಬೆಲ್ಲದ ಸುವಾಸನೆ. ಆಳೆತ್ತರದ ಭರ್ಜರಿ ಕೋಣಗಳು ಆಲೆಮಾವ ಹುಲಿಯನ ಆರ್ಭಟದ ಹೊಡೆತಕ್ಕೆ ದಾಪುಗಾಲನ್ನಿಕ್ಕಿವೆ.

ಸಂಜೆ ನಾಲ್ಕಕ್ಕೇ ಗಾಣಕ್ಕೆ ಕಬ್ಬು ಕೊಡಲು ಶುರು ಮಾಡಿದ್ದಾನೆ ವೆಂಕ್ಟ. ಏಳಾದರೂ ಕಬ್ಬಿನಹಾಲಿನ ಬಾನಿ ಅರ್ಧಕ್ಕೂ ಬರಲಿಲ್ಲ, ಆಗಲೇ ಆಲೆ ಮಾವನ ಸಹನೆಯ ಕಟ್ಟೆ ಒಡೆದಿತ್ತು.

ಕಬ್ಬಿನ ಆಲೆಮನೆ ಯಜಮಾನ ಮೂಲೆಮನೆ ಮಂಜನ ಮನೆಯಲ್ಲಿ ಅಂದು ಕಿಕ್ಕಿರಿದ ಜನಸಂದಣಿ. ದೈವೀ ಕಾರ್ಯವಿರದ ಸಮಾರಾಧನೆಯಂತೆ. ಒಂದ್ ಬೆಳಗಿಂದಾ ಆಲೆಮನೆಗೆ ಬಂದವರು ಒಬ್ಬಿಬ್ಬರಲ್ಲ.

ಅಂದು ಆದಿತ್ಯವಾರ ಬೇರೆ. ಪಂಚಾಯತಿ ಅಧ್ಯಕ್ಷರು, ಸೆಕ್ರೆಟರಿ, ಸೊಸೈಟಿ ಸೆಕ್ರೆಟರಿ, ಗಾರ್ಡ್, ಫಾರೆಸ್ಟರು, ಕರೆಂಟ್ ಲೈನ್‌ಮನ್, ಟೆಲಿಫೋನ್ ಲೈನ್‌ಮನ್, ಗ್ರಾಮಸೇವಕ, ಶಾನಭೋಗರು, ನೆಂಟ-ಭಂಟರು, ಅಪ್ತೇಷ್ಟರು, ಕುರುಡರು, ಕುಂಟರು, ಭಿಕ್ಷುಕರು, ಬೆಲ್ಲ ಬೇಕಾದವರು – ಹೀಗೆ ಮಂಜನ ಆಲೆಮನೆಗೆ ಬರದವರೇ ಇಲ್ಲ.

ಬಂದವರೆಲ್ಲಾ ಕಬ್ಬಿನ ಹಾಲು ಕುಡಿದಿದ್ದಲ್ಲದೆ, ಹಾಲು ಭಯಂಕರ ಸಿಹಿ, ಇಂಥಾ ರುಚಿ ಎಲ್ಲೂ ಕಂಡಿಲ್ಲಾ ಎಂದು ಅದೂ ಇದೂ ಹೊಗಳಿ ಮಂಡಕ್ಕಿ, ಖಾರಾ ಗಡದ್ದಾಗಿ ಇಳಿಸಿ, ಮಂಜನ ಮನೆಯಿಂದಲೇ ಕ್ಯಾನು ಎರವಲು ಪಡೆದು ಹಾಲು ತುಂಬಿ ಒಯ್ಯುವರು. ಆಲೆಮನೆ ಯಜಮಾನ ಮಂಜನಿಗೆ ಹಿಂದಿಲ್ಲ ಮುಂದಿಲ್ಲ, ದಾನಶೂರ ಕರ್ಣ ಅವನು.

ಆದರೆ ಆಲೆಮಾವ ಹುಲಿಯ ಮಾತ್ರ ಪರದೇಶಿ. ಅವನಿಗೆ ಕೊಪ್ಪರಿಗೆ ಲೆಕ್ಕ. ತಿರುಗಿ ತಿರುಗಿ ಸುಸ್ತು ಬಡಿದು ಹೋದವು ಪಾಪ ಆ ಜೋಡಿ ಜಗಜಟ್ಟಿ ಕೋಣಗಳು. ಇಂದು ಮಧ್ಯರಾತ್ರಿಗೆ ಬಾನಿ ಬರೋದು ಎಂಬುದು ಮನದಟ್ಟಾಯಿತು. ಏಕೆಂದ್ರೆ ಹಾಲು ಬಾನಿಗೆ ಬಿದ್ರೆ ತಾನೆ! ಒಬ್ಬರಾದ ಮೇಲೆ ಮತ್ತೊಬ್ರು ಕ್ಯಾನು, ಕೊಡ, ತಂಬಿಗೆ, ಬೋಗುಣಿ ಹಿಡಿವವರೆ ಜಾಸ್ತಿ.

ಆಲೆಮಾವ ಹುಲಿಯನ ತಲೆ ಚಿಟ್ಟುಹಿಡಿದು ಹೋಗಿತ್ತು. ಆಗ ತಾನೇ ಭರ್‍ರಂತ ಆರೆಂಟು ಮೋಟಾರ್ ಬೈಕುಗಳು ಶರವೇಗದಲ್ಲಿ ಹಳ್ಳಿ ಹಾದಿಯಲ್ಲಿ ಧೂಳೆಬ್ಬಿಸಿ ಕೇಕೆ ಹಾಕುತ್ತ ಮಂಜನ ಮನೆ ಎದುರಿಗೆ ನಿಂತಿದ್ದನ್ನು ಹುಲಿಯ ಕಂಡ. ಒಬ್ಬೊಬ್ಬರ ಕೈಲೂ ಎರಡ್ಮೂರು ಕ್ಯಾನುಗಳು. ಇವತ್ತು ಈ ಪ್ಯಾಟಿ ನನ್ಮಕ್ಳು ನನ್ನನ್ನು, ನನ್ನ ಕೋಣವನ್ನು ತೆಗೀತಾರೆ ಎಂದು ಮನದಲ್ಲೇ ಒಂದು ಉಪಾಯ ಕಂಡುಕೊಂಡ.

ಕಬ್ಬಿನ ಗದ್ದೆಯಲ್ಲಿ ಶಾಲೆ ಹುಡುಗರು ತುಂಡು ಕಬ್ಬಿಗಾಗಿ ಹಲ್ಕಿಸಿಯುತ್ತಾ ನಿಂತಿದ್ದರು. ಕರಿಯನ ಮಗ ಕೆಂಚನನ್ನು ಕರೆದ ಹುಲಿಯನು, ''ಬಾರ್ಲೇ, ಹುಡ್ಗಾ ಹೊಡಿಯಲಾ ನಾಲ್ಕು ಸುತ್ತು'' ಎಂದು ಹದಿನೈದು ನಿಮಿಷದೊಳಗೆ ಎಲ್ಲಿಗೋ ಹೋಗಿಬಂದ.

ತನ್ನ ಪ್ಯಾಟಿ ಪಟ್ಟದ ದೋಸ್ತರೆಲ್ಲಾ ಆಲೆಮನೆಗೆ ಬಂದಿರುವುದನ್ನ ಕಂಡ ಮಂಜು, ''ಹುಲಿಯಾ, ಒಂದು ಕೊಡ ಹಾಲು ಹಿಡಿ'' ಎಂದವನೇ ಮಂಡಕ್ಕಿ, ಸೇವು, ಬೀಜ ತರಲು ಮನೆ ಒಳಗ್ಹೋದ. ಇತ್ತ ಹಾಲು ಹಿಡಿದ ಹುಲಿಯ ಚಪ್ಪರದೊಳಗೆ ಕಂಬಳಿ ಹಾಸಿ ಅವರಿಗೆಲ್ಲಾ ತಂಬಿಗೆ ತುಂಬ ಹಾಲೆರೆಸಿ ಕೊಟ್ಟ. ಅವರು ತಂದ ಶುಂಠಿ, ಲಿಂಬೆ ಹಣ್ಣು, ಯಾಲಕ್ಕಿ ಎಲ್ಲಾ ಸುರಿದು ಮೇಲೆ ಕೆಳಗೆ ಮಾಡಿ ಸುರಿದಿಟ್ಟ. ಮಂಡಕ್ಕಿ ಬಟ್ಟಲೊಡನೆ ಬಂದ ಮಂಜ, ''ಹುಲಿಯಾ, ಎಲ್ಲರ ಕ್ಯಾನಿಗೂ ತುಂಬ್ತುಂಬಾ ಕಂಠಮಟ ಹಾಲು ಎರೆಸಿ ಇಡು'' ಎಂದು ಭಾರಿ ಆದೇಶ ನೀಡಿದ. ಈ ಮಂಜನಿಗೆ ಎರಡು ತಟ್ಟಬಿಡೋಣ ಎಂದೆನಿಸಿತ್ತು ಆಲೆಮಾವ ಹುಲಿಯಣ್ಣನಿಗೆ.

ಪ್ಯಾಟಿ ಹೈಕಳು ಮತ್ತು ಮಂಜ ಹರಟೆ ಹೊಡೆಯುತ್ತ ಜಗ್ಗಿ ಕುಡಿದರು. ಒಬ್ಬಾತ ಯಾಕೋ ಗಹಗಹಿಸಿ ನಕ್ಕ. ನಗು ಬಂದು ಮಾಡೋಕೆ ಯಾರಿಂದಲೂ ಸಾಧ್ಯ ಆಗಲಿಲ್ಲ. ''ನನ್ಮಕ್ಕಳು ಒಂದು ದಾರಿಗೆ ಬಂದ್ವು'' ಎಂದುಕೊಂಡ ಹುಲಿಯ. ಅವರೆಲ್ಲರೂ ತಂದ ಕ್ಯಾನಿಗೂ ಹಾಲು ತುಂಬಿಟ್ಟ ಹುಲಿಯ. ಬಾನಿ ನೆಲಕಚ್ಚಿತ್ತು. ಆದರೂ ಹುಲಿಯನ ಮುಖದಲ್ಲಿ ನಗೆಯೇ ತುಂಬಿತ್ತು.

ಪ್ಯಾಟಿ ಹೈಕಳ ಪೈಕಿ ದಡೂತಿ ಆಸಾಮಿ ನಿಲ್ಲೋಕೆ ನೋಡ್ತಾನೆ. ಆಗಲ್ಲ, ಆದರೂ ಪ್ರಯತ್ನಪಡುತ್ತ, ''ಇದೇನೊ, ಮಂಜಾ ಗಾಣಕ್ಕೆ ಆನೆ ಕಟ್ಟೀಯಲ್ಲೋ, ಈ ಆಲೆಮಾವ ರಾಕ್ಷಸನ ತರ ಇದಾನಲ್ಲೋ'' ಅಂದಾಗ ಎಲ್ಲರೂ ಹುಬ್ಬೇರಿಸಿದರು. ಅವರಿಗೂ ಹಾಗೇ ಕಾಣ್ತಾ ಇತ್ತು. ಆಗಲೇ ಕತ್ತಲಾಗುತ್ತ ಬಂತು. ''ನನಗೆ ಊಟ ಬೇಡ'' ಎಂದ ಮಂಜ. ಮಾಳಕ್ಕೆ ಹೋಗಿ ಮಲಗಲು ನೋಡಿದ. ಏನು ಮಾಡಿದ್ರೂ ಮಾಳ ಏರಲಾಗದೇ ಮಾಳದ ಅಡಿಯಲ್ಲಿ ಮಲಗಿದ್ದ.

ಇತ್ತ ಪ್ಯಾಟಿ ಪೈಲ್ವಾನರು ಹೊರಟರು. ಟೈಟ್ ಆದವರೆಲ್ಲಾ ಹಿಂದೆ ಕುಳಿತರು. ಸಿಹಿಮೂತ್ರ ರೋಗ ಇದ್ದವರು ಸ್ವಲ್ಪ ಕಡಿಮೆ ಸೇವನೆ ಮಾಡಿದ್ದರಿಂದ ಬೈಕ್ ಓಡಿಸುವ ಧೈರ್ಯ ಮಾಡಿದ್ದರು. ಬೈಕ್ ಸ್ಟಾರ್ಟ್ ಮಾಡಿ, ''ಹಾಲು ತುಂಬಿದ ಕ್ಯಾನ್ ಕೊಡೋ ಆಲೆಮಾವ'' ಎಂದಾಗ ಹುಲಿಯನೂ ಕ್ಯಾನು ಕೊಟ್ಟು ''ಗಟ್ಟಿ ಹಿಡಿಕಳಿ ಬಿದ್ದುಹೋದೀತು'' ಎಂದು ಎಚ್ಚರಿಕೇನೂ ಕೊಟ್ಟಿದ್ದ.

ಬೈಕುಗಳು ಒಂದರ ಹಿಂದೆ ಒಂದು ಪ್ಯಾಟಿ ಕಡೆ ಮುಖ ಮಾಡಿದವು. ಎಲ್ಲರೂ ಮನೆಗೆ ಹೋಗಿ ಬೈಕ್ ನಿಲ್ಲಿಸಿದರು. ಬಾಗಿಲು ತಟ್ಟಿ ತಂತಮ್ಮ ಹೆಂಡಂದಿರನ್ನು ಕರೆದು, ''ಕ್ಯಾನು ತಗೊಳ್ಳೆ. ಗಟ್ಟಿ ಹಿಡ್ಕೊ, ತುಂಬಾ ಇದೆ, ಬಿದ್ದುಹೋದೀತು'' ಎಂದರು. ಹೆಂಡತಿಯರು ಮೂರ್ಛೆ ಹೋಗುವುದೊಂದೇ ಬಾಕಿ. ಏಕೆಂದರೆ ಅವರು ಕೊಟ್ಟಿದ್ದು ಬರೀ ಕ್ಯಾನಿನ ತೊಟ್ಟು ಮಾತ್ರ. ಕ್ಯಾನು ಹಿಂದೆಲ್ಲೋ ರಸ್ತೆಯಲ್ಲಿ ಬಿದ್ದುಹೋಗಿದೆಯೆಂದು ತಿಳಿದುಕೊಂಡರು ?!



ಆದರೆ ಆಲೆಮಾವ ಅವರ ಕೈಗೆ ಕ್ಯಾನು ಕೊಟ್ಟಿದ್ದರೆ ತಾನೆ ಬೀಳೋಕೆ! ಅವರಿಗೆಲ್ಲ ಕುಡಿಯಲು ಕೊಟ್ಟಿದ್ದ ಹಾಲಿಗೆ ಸ್ವಲ್ಪ ಭಂಗಿ ಬೆರೆಸಿದ್ದ ಆತ.

ಅಮಲಿನಲ್ಲಿದ್ದ ಅವರಿಗೆ ಏನೂ ತಿಳಿಯಲೇ ಇಲ್ಲ, ಕ್ಯಾನಿನ ತೊಟ್ಟು ಮಾತ್ರ ಕೊಟ್ಟು, ಕ್ಯಾನಿನಲ್ಲಿದ್ದ ಹಾಲನ್ನೆಲ್ಲ ಕೊಪ್ಪರಿಗೆಗೆ ಸುರುವಿ ತಾನು ಮಾತ್ರ ನಿಶ್ಚಿಂತೆಯಿಂದ ಮಲಗಿದ್ದ.

ಬೆಳಗಾಗೆದ್ದ ಮಂಜ, ''ಅಯ್ಯೋ ನನ್ನ ಪಕ್ಕದಲ್ಲಿ ರಾತ್ರಿ ಆನೆ ಮಲಗಿತ್ತು'' ಎಂದು ಬೊಬ್ಬೆ ಹೊಡೆಯುತ್ತ ಬಂದ. ಎಲ್ಲರೂ ''ಹೌದಾ !'' ಎಂದರು. ಆದರೆ ಪಕ್ಕದಲ್ಲಿ ಮಲಗಿದ್ದುದು ನಾಯಿಮರಿ ಎಂದು ಹುಲಿಯ ಹೇಳಲೇ ಇಲ್ಲ, ಯಾಕಂದ್ರೆ ಭಂಗಿ ವಿಚಾರ ಬಹಿರಂಗ ಆಗಬಾರದಲ್ಲ!


**ದತ್ತಗುರು ಕಂಠಿ**
ಉಂಚಳ್ಳಿ ಅಂಚೆ, ಸಿರಸಿ ತಾಲೂಕು ಉತ್ತರ ಕನ್ನಡ, ಪಿನ್ - ೫೮೧ ೩೧೮

ಬಿ. ಜಿ. ಕುಸುಮಾ

# ವಿಶ್ವ ವಿಖ್ಯಾತ ಸಸ್ಯಶಾಸ್ತ್ರಜ್ಞ



ಬೀರಬಲ್ ಸಾಹ್ನಿ

ನವೆಂಬರ್ ತಿಂಗಳು ಬಂತೆಂದರೆ ನಮ್ಮ ರಾಜ್ಯದಲ್ಲಿ ಎಲ್ಲರಿಗೂ ನೆನಪಾಗುವುದು ರಾಜ್ಯೋತ್ಸವ, ಅದರ ಆಚರಣೆ. ರಾಷ್ಟ್ರಮಟ್ಟದಲ್ಲಿ ಮತ್ತೊಂದು ಸಡಗರವೆಂದರೆ ನವೆಂಬರ್ ೧೪ರ ಮಕ್ಕಳ ದಿನಾಚರಣೆ. ಆ ದಿನ (ನವೆಂಬರ್ ೧೪) ಸ್ವತಂತ್ರ ಭಾರತದ ಮೊದಲ ಪ್ರಧಾನಿ ಪಂಡಿತ್ ಜವಾಹರ್‌ಲಾಲ್ ನೆಹ್ರೂರವರ ಜನ್ಮದಿನ. ಅದೇ ದಿನ, ಎಂದರೆ, ನವೆಂಬರ್ ೧೪ ಭಾರತವು ಹೆಮ್ಮೆಪಡಬೇಕಾದ ಮತ್ತೊಬ್ಬ ಮಹನೀಯರ ಜನ್ಮದಿನವೂ ಹೌದು. ಆ ಮಹನೀಯರು, ಜಗತ್ಪ್ರಸಿದ್ಧ ಸಸ್ಯವಿಜ್ಞಾನಿ ಡಾ|| ಬೀರ್‌ಬಲ್ ಸಾಹ್ನಿ.

ಡಾ|| ಬೀರಬಲ್ ಸಾಹ್ನಿಯವರು ೧೮೯೧ನೇ ಇಸವಿ ನವೆಂಬರ್ ೧೪ರಂದು ಶಹಾನಪುರ ಜಿಲ್ಲೆಯ ದೊಡ್ಡ ವ್ಯಾಪಾರ ಸ್ಥಳವಾದ ಭೇರಿಯ ಪಟ್ಟಣದಲ್ಲಿ ಜನಿಸಿದರು. (ಈಗ ಇದು ಪಾಕಿಸ್ತಾನಕ್ಕೆ ಸೇರಿದೆ). ಇವರ ತಂದೆ ರುಚಿರಾಮ ಸಾಹ್ನಿಯವರು ಲಾಹೋರಿನ ಸರ್ಕಾರಿ ಕಾಲೇಜಿನಲ್ಲಿ ರಸಾಯನಶಾಸ್ತ್ರದ ಪ್ರೊಫೆಸರು. ಅವರು ಭಾರತದ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರಿಯ ಪಾತ್ರ ವಹಿಸಿದವರು. ಆ ಕಾಲದ ಪ್ರಮುಖ ರಾಜಕಾರಣಿಗಳೆಲ್ಲ ಲಾಹೋರಿಗೆ ಬಂದಾಗ ರುಚಿರಾಮ ಸಾಹ್ನಿಯವರ ಮನೆಯಲ್ಲೇ ಇಳಿದುಕೊಳ್ಳುತ್ತಿದ್ದರು. ಇದರಿಂದಾಗಿ ಪ್ರೊ|| ಸಾಹ್ನಿಯವರು ತಮ್ಮ ಸರ್ಕಾರಿ ನೌಕರಿಯನ್ನು ಕಳೆದುಕೊಳ್ಳುವ ಸಾಧ್ಯತೆಯಿತ್ತು. ಆದರೆ ಅವರು ಅದನ್ನು ಲೆಕ್ಕಿಸದೆ ನಿರ್ಭಯವಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿದರು. ಅವರ ಪತ್ನಿ ಈಶ್ವರೀ ದೇವಿಯವರು ಪ್ರಗತಿಶೀಲ ಮನೋಭಾವದವರು. ಆ ಕಾಲದ ಸಾಮಾಜಿಕ ವಿರೋಧಕ್ಕೆ ಹೆದರದೆ, ತಮ್ಮ ಹೆಣ್ಣು ಮಕ್ಕಳಿಗೂ ಉನ್ನತ ವಿದ್ಯಾಭ್ಯಾಸ ಕೊಡಿಸಿದರು. ಗಂಡುಮಕ್ಕಳನ್ನು ಇಂಗ್ಲೆಂಡಿನಲ್ಲಿಯೂ, ಇತರ ಐರೋಪ್ಯ ದೇಶಗಳ ವಿಶ್ವವಿದ್ಯಾನಿಲಯಗಳಲ್ಲೂ ಓದಿಸಿದರು. ಇಂತಹ ಪರಿಸರದಲ್ಲಿ ಬೆಳೆದ ಬೀರಬಲ್ ಸಾಹ್ನಿಯವರು ರಾಷ್ಟ್ರಪ್ರೇಮಿಯೂ ಪ್ರಗತಿಪರ ಚಿಂತಕರೂ ವಿಜ್ಞಾನದಲ್ಲಿ ಆಸಕ್ತರೂ ಆಗಿದ್ದುದು ಅತ್ಯಂತ ಸಹಜವೇ.

ಬೀರಬಲ್ ಸಾಹ್ನಿಯವರು ತಮ್ಮ ಇಪ್ಪತ್ತನೇ ವಯಸ್ಸಿಗೆ ಲಾಹೋರ್ ವಿಶ್ವವಿದ್ಯಾಲಯದ ಪದವೀಧರರಾದರು. ಮಗ ಮುಂದೆ ಆಡಳಿತ ಸೇವೆಗೆ ಸೇರಲೆಂಬುದು ಅವರ ತಂದೆಯ ಆಸೆ. ಆದರೆ ಮಗನಿಗೋ ಸಸ್ಯಶಾಸ್ತ್ರದಲ್ಲಿ ಸಂಶೋಧನೆ ಮಾಡಬೇಕೆಂಬ ಹೆಬ್ಬಯಕೆ. ಸ್ವತಃ ವಿಜ್ಞಾನದ ಅಧ್ಯಾಪಕರಾದ ಪ್ರೊ|| ರುಚಿರಾಮ ಸಾಹ್ನಿಯವರು ಮಗನ ಅಪೇಕ್ಷೆಗೆ ಅಡ್ಡಿಯುಂಟುಮಾಡಲಿಲ್ಲ; ತಮ್ಮ ಆಸೆಯನ್ನು ಮಗನ ಮೇಲೆ, ಅವನ ಇಷ್ಟಕ್ಕೆ ವಿರುದ್ಧವಾಗಿ ಹೇರಲಿಲ್ಲ. ಇಂಗ್ಲೆಂಡಿನಲ್ಲಿ ಮಗನ ವಿದ್ಯಾಭ್ಯಾಸಕ್ಕೆ ಏರ್ಪಾಡು ಮಾಡಿ, ಸಂತೋಷದಿಂದಲೇ ಕಳಿಸಿಕೊಟ್ಟರು.

ಬೀರಬಲ್ ಸಾಹ್ನಿಯವರು ಇಂಗ್ಲೆಂಡಿನ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದ ಇಮ್ಯಾನ್ಯುಯಲ್ ಕಾಲೇಜಿನಲ್ಲಿ ಸಸ್ಯಶಾಸ್ತ್ರದ ಸ್ನಾತಕೋತ್ತರ ಪದವಿ ತರಗತಿಗೆ ಸೇರಿದರು. ಮೂರು ವರ್ಷಗಳಲ್ಲಿ ಸ್ನಾತಕೋತ್ತರ ಪದವೀಧರರಾಗಿ, ಅನಂತರ ಸಂಶೋಧನೆ ಮಾಡಲು ಇಂಗ್ಲೆಂಡಿನಲ್ಲಿಯೇ ಉಳಿದರು. ಅವರ ಸಂಶೋಧನೆಯ ವಿಷಯ ನಷ್ಟ ಜೀವಸಸ್ಯಗಳು ಅಥವಾ ಪ್ರಾಚೀನ ಯುಗದ ಸಸ್ಯಗಳು. ಅವರ ಮಾರ್ಗದರ್ಶಕರು, ಪ್ರಸಿದ್ಧರಾದ ಪ್ರೊ|| ಎ. ಸಿ. ಆರ್ನಾಲ್ಡ್‌ರವರು. ಪ್ರೊ|| ಎ. ಸಿ. ಆರ್ನಾಲ್ಡ್‌ರವರು ಶಿಷ್ಯನ ಸೂಕ್ಷ್ಮಬುದ್ಧಿ ಹಾಗೂ ತರ್ಕಬದ್ಧವಾದ ವಿಷಯ ನಿರೂಪಣಾ ರೀತಿ ಇವುಗಳನ್ನು ಗಮನಿಸಿ, ಅವರಿಗೆ ಗೊಂಡ್ವಾನ ಸಸ್ಯಾವಶೇಷಗಳ ಅಧ್ಯಯನವನ್ನು ವಹಿಸಿದರು.

**ಏನಿದು ಗೊಂಡ್ವಾನ ?** : ಈಗ ೨೦ ಕೋಟಿ ವರ್ಷಗಳಿಗೂ ಹಿಂದೆ ಭೂಮಿ ಒಂದು ಅಖಂಡ ಮುದ್ದೆಯಾಗಿತ್ತು. ಇದಕ್ಕೆ 'ಪ್ಯಾಂಜಿಯಾ' ಎಂದು ಹೆಸರು. ಇದನ್ನು ಸುತ್ತುವರೆದಿದ್ದ ಸಾಗರಕ್ಕೆ 'ಪ್ಯಾಂತಲಸ್ಸಾ' ಎಂದು ಹೆಸರು. ಅನಂತರ ಪ್ಯಾಂಜಿಯಾ ಇಬ್ಭಾಗವಾಯಿತು. ಹೀಗೆ ಇಬ್ಭಾಗವಾಗುವ ಮುನ್ನ ಈಗಿನ ದಕ್ಷಿಣ ಅಮೆರಿಕಾ, ಆಫ್ರಿಕಾ, ಇಂಡಿಯಾ, ಆಸ್ಟ್ರೇಲಿಯಾ ಮತ್ತು ಅಂಟಾರ್ಟಿಕಾಗಳು ಒಂದೇ ಒಂದು ಮಹಾಖಂಡವಾಗಿ ಒಟ್ಟುಗೂಡಿತ್ತು. ಇದೇ ಗೊಂಡ್ವಾನ ಖಂಡ. ಉಳಿದ ಈಗಿನ ಯೂರೋಪ್, ಉತ್ತರ ಅಮೆರಿಕಾ, ಏಷ್ಯಾದ ಬಹುಭಾಗಗಳು ಒಗ್ಗೂಡಿ ಆದ ಭಾಗಕ್ಕೆ ಲಾರೇಷ್ಯ ಎಂದು ಹೆಸರು.

**ಜೀವ್ಯವಶೇಷಗಳು** : ಸಸ್ಯಗಳಾಗಲೀ, ಪ್ರಾಣಿಗಳಾಗಲೀ ಕೀಟ, ಪಕ್ಷಿ ಮತ್ಯಾವುದೇ. ಆಗಲಿ, ಕೆಸರು, ಸುಣ್ಣಕಲ್ಲು, ಹಿಮಗಡ್ಡೆ, ಅಂಬರ್‌ನಂತಹ ಅಂಟು ಇವುಗಳಲ್ಲಿ ಸಿಕ್ಕಿಕೊಂಡಾಗ ಅಥವಾ ಹೂತುಹೋದಾಗ ಅದರ ಅಚ್ಚು, ಆ ವಸ್ತುವಿನಲ್ಲಿ ಮೂಡುತ್ತದೆ. ಇದೇ ಪಳೆಯುಳಿಕೆ ಅಥವಾ ಜೀವ್ಯವಶೇಷ. ಸಿಕ್ಕಿಕೊಂಡ ಸಸ್ಯ ಅಥವಾ ಪ್ರಾಣಿ ಕೊಳೆಯದೆ, ಅವುಗಳ ಜೈವಿಕ ಅಂಶಗಳು ಸ್ಥಳಾಂತರಗೊಳ್ಳುತ್ತವೆ. ಗಟ್ಟಿಭಾಗ ಮಾತ್ರ ಉಳಿದು ಈ ಪಳೆಯುಳಿಕೆ ಅಥವಾ ಜೀವ್ಯವಶೇಷ ರೂಪುಗೊಳ್ಳುತ್ತದೆ.

ಪಳೆಯುಳಿಕೆ ಅಥವಾ ನಷ್ಟಜೀವಿಗಳ ಅಧ್ಯಯನವು ಭೂಗ್ರಹದ ವಿಕಾಸ, ಹಾಗೂ ಭೂಮಿಯ ಮೇಲೆ ಜೀವವಿಕಾಸದ ವಿವಿಧ ಹಂತಗಳನ್ನು ತಿಳಿಸುತ್ತದೆ. ಭೂಖಂಡಗಳ ಅಲೆತ, ಬೇರೆ ಬೇರೆ ಭೂಭಾಗಗಳಲ್ಲಿ ಸಸ್ಯ, ಪ್ರಾಣಿಗಳ ವಿಕಾಸ, ಅವುಗಳ ಪರಸ್ಪರ ಸಂಬಂಧ ಇವೆಲ್ಲವನ್ನೂ ತಿಳಿಸುತ್ತದೆ. ಕೇವಲ ಸಸ್ಯಾವಶೇಷಗಳನ್ನೇ ಅಧ್ಯಯನ ಮಾಡುವ ವಿಭಾಗವೇ ಪಾಲಿಯೋ ಬಾಟನಿ. ಹೀಗೆ ಭೂವಿಜ್ಞಾನದ ಅಧ್ಯಯನದಲ್ಲಿ ಸಸ್ಯಾವಶೇಷಗಳ ಪಾತ್ರ, ಅದರ ಅಧ್ಯಯನದ ಮಹತ್ವವನ್ನು ತಿಳಿಸಿಕೊಟ್ಟವರಲ್ಲಿ ಬೀರಬಲ್ ಸಾಹ್ನಿಯವರೇ ಮೊದಲಿಗರು.

ಬೀರಬಲ್ ಸಾಹ್ನಿಯವರ ಹುಟ್ಟೂರಾದ ಭೇರಿಯಾ ಪಟ್ಟಣದ ಸಮೀಪವೇ ಅಥವಾ ಉಪ್ಪಿನ ಬೆಟ್ಟಗಳಿವೆ. ಅವುಗಳನ್ನು ಭೂವಿಜ್ಞಾನ ಸಂಗ್ರಹಾಲಯವೆಂದೇ ಹೇಳುವುದುಂಟು. ಬೀರಬಲ್ ಸಾಹ್ನಿಯವರು, ಚಿಕ್ಕಂದಿನಲ್ಲಿ ಆ ಪ್ರದೇಶಗಳಲ್ಲಿ ತಿರುಗಾಡುವಾಗ ಅಲ್ಲಿದ್ದ ಪ್ರಾಚೀನಾವಶೇಷಗಳನ್ನು ಗಮನಿಸಿದ್ದರು. ತಮ್ಮ ಆಸಕ್ತಿಯನ್ನು ಕೆರಳಿಸಿದ ಸಸ್ಯಾವಶೇಷಗಳನ್ನೇ ತಮ್ಮ ಸಂಶೋಧನೆಯ ವಿಷಯವಾಗಿ ಆರಿಸಿಕೊಂಡರು. ಶ್ರದ್ಧೆಯಿಂದ ಮಾಡಿದ ತಮ್ಮ ಸಂಶೋಧನೆಗಾಗಿ ಕೇಂಬ್ರಿಡ್ಜ್ ವಿಶ್ವವಿದ್ಯಾಲಯದಿಂದ ಡಿ.ಎಸ್‌ಸಿ. ಪದವಿಯನ್ನು ೧೯೧೯ರಲ್ಲಿ ಪಡೆದು ಭಾರತಕ್ಕೆ ಹಿಂದಿರುಗಿದರು.

ಡಾ॥ ಬೀರಬಲ್ ಸಾಹ್ನಿಯವರು ತಮ್ಮ ವೃತ್ತಿಜೀವನವನ್ನು ಕಾಶಿ ವಿಶ್ವವಿದ್ಯಾನಿಲಯದಲ್ಲಿ ಆರಂಭಿಸಿದರು. ಎರಡು ವರ್ಷಗಳನಂತರ ಅವರು ಲಕ್ನೋ ವಿಶ್ವವಿದ್ಯಾಲಯವನ್ನು ಸೇರಿದರು. ಆದರೆ ಅಲ್ಲಿ ಸಸ್ಯಶಾಸ್ತ್ರ ವಿಭಾಗವೇ ಇರಲಿಲ್ಲ. ಡಾ॥ ಸಾಹ್ನಿಯವರ ಸತತ ಪ್ರಯತ್ನದಿಂದ ಅಲ್ಲಿ ಸುವ್ಯವಸ್ಥಿತವಾದ ಸಸ್ಯಶಾಸ್ತ್ರ ವಿಭಾಗ ಆರಂಭವಾಯಿತು. ಶುರುವಿನಲ್ಲಿ, ಆ ವಿಭಾಗದಲ್ಲಿದ್ದುದು ಕೇವಲ ಮೂರು ಕೊಠಡಿಗಳು ಮಾತ್ರ. ಆದರೆ ಡಾ॥ ಸಾಹ್ನಿಯವರು ಉತ್ಸಾಹ ಕಳೆದುಕೊಳ್ಳದೆ, ಆ ವಿಭಾಗವನ್ನು ಅಭಿವೃದ್ಧಿಪಡಿಸಿದರು. ಮೂರೇ ವರ್ಷಗಳಲ್ಲಿ ಎಂ.ಎಸ್‌ಸಿ. ತರಗತಿಗಳನ್ನೂ ಪ್ರಾರಂಭಿಸಿದರು.

ಡಾ॥ ಸಾಹ್ನಿಯವರು ಪ್ರಾಧ್ಯಾಪಕರಾಗಿದ್ದುದಲ್ಲದೆ ತಮ್ಮ ಸಂಶೋಧನೆಗಳನ್ನೂ ಮುಂದುವರೆಸುತ್ತಿದ್ದರು. ಆದರೆ ಅವರಿಗಾಗಿ ಒಂದು ಪ್ರತ್ಯೇಕ ಕೊಠಡಿಯೂ ಇರಲಿಲ್ಲ. ಇದೇನೂ ಅವರ ಉತ್ಸಾಹಕ್ಕೆ ಭಂಗ ತರಲಿಲ್ಲ. ಅಲ್ಲಿದ್ದ ಸಸ್ಯಶಾಸ್ತ್ರ ಮತ್ತು ಭೂವಿಜ್ಞಾನಶಾಸ್ತ್ರದ ಸಂಗ್ರಹಾಲಯದ ಮಧ್ಯೆ, ಗ್ರಂಥಭಂಡಾರದ ಪುಸ್ತಕಗಳಿದ್ದ ಬೀರುಗಳನ್ನು ಜೋಡಿಸಿ, ತಮಗಾಗಿ ಒಂದು ಪ್ರತ್ಯೇಕ ಜಾಗ ಏರ್ಪಡಿಸಿಕೊಂಡರು. ಅವರ ಸಂಶೋಧನೆಗಳಿಗೆ ಅಗತ್ಯವಿದ್ದ ಅನೇಕ ಉಪಕರಣಗಳೂ ಇರಲಿಲ್ಲ. ಆದರೇನು ? ಡಾ॥ ಸಾಹ್ನಿಯವರು ತಾವೇ ಅನೇಕ ಸಲಕರಣೆಗಳನ್ನು ಸಿದ್ಧಪಡಿಸಿಕೊಳ್ಳುತ್ತಿದ್ದರು. ತಮ್ಮ ಸಂಶೋಧನೆಗಳ ಫಲವಾಗಿ ಅನೇಕ ಲೇಖನಗಳನ್ನೂ ಬರೆದು ಪ್ರಕಟಿಸಿದರು. ಸಸ್ಯವಿಜ್ಞಾನ ಕ್ಷೇತ್ರದಲ್ಲಿ ಅವರ ಹೆಸರು ಪ್ರಖ್ಯಾತವಾಯಿತು. ಹತ್ತು ವರುಷಗಳ ನಂತರ ಉತ್ತರಪ್ರದೇಶ ಸರ್ಕಾರವು, ಅವರಿಗೆ ಅಗತ್ಯವಾದ ಉಪಕರಣಗಳನ್ನು ಕೊಳ್ಳಲು ೪೦೦೦ ರೂ.ಗಳ ಸಹಾಯಧನವನ್ನು ನೀಡಿತು. ಹೀಗೆ ಯಂತ್ರಗಳ ಸಹಾಯ ದೊರಕಿ, ಸಾಹ್ನಿಯವರು ಕಡಿಮೆ ಕಾಲದಲ್ಲಿ ಹೆಚ್ಚು ಕೆಲಸ ಮಾಡಲು ಅನುಕೂಲವಾಯಿತು.



ಡಾ॥ ಬೀರಬಲ್ ಸಾಹ್ನಿಯವರ ಸಂಶೋಧನೆಗಳೂ, ಅದಕ್ಕೆ ಸಂಬಂಧಿಸಿ ಪ್ರಕಟವಾದ ಅವರ ಲೇಖನಗಳೂ ಅಪಾರ. ಅವುಗಳಲ್ಲಿ ಕೆಲವನ್ನು ಮಾತ್ರ ತಿಳಿಯೋಣ. ಅವರು ಶಂಕುವಿನಾಕಾರದ ವೃಕ್ಷಾವಶೇಷಗಳ ಬಗ್ಗೆ ಸಂಶೋಧನೆ ಮಾಡಿದರು. ಅದರಿಂದ ಆ ಅವಶೇಷಗಳು ಭೂಮಿಯ ಲಂಬ ಪದರಗಳಲ್ಲಿ ಹರಡಿರುವ ಬಗ್ಗೆ ಹೆಚ್ಚು ಮಾಹಿತಿ ದೊರೆಯಿತು ಪ್ರಾಣಿಗಳಲ್ಲಿ ಹೇಗೋ ಹಾಗೆಯೇ ಸಸ್ಯಗಳಲ್ಲೂ, ಒಂದು ಸಸ್ಯದ ಉತ್ಪತ್ತಿ, ಬೆಳವಣಿಗೆಗಳು, ಸಸ್ಯಕುಲದ ವಿಕಾಸದ ಚರಿತ್ರೆಯನ್ನು ತಿಳಿಸುತ್ತವೆ. ಫರ್ನ್ ಮತ್ತು ಕೋನಿಫರ್ ಪಳೆಯುಳಿಕೆಗಳ ಅಧ್ಯಯನ ಮಾಡಿ, ಡಾ॥ ಸಾಹ್ನಿಯವರು, ''ಪೆಂಟೋಕ್ಸಿಲಿಯಾ'' ಎಂಬ, ಪಳೆಯುಳಿಕೆಗಳ ಜಿಮ್ನೊಸ್ಪರ್ಮ್‌ಗಳ ಒಂದು ಹೊಸ ಗುಂಪನ್ನೇ ಕಂಡುಹಿಡಿದರು. ಪ್ರಾಚೀನ ಸಸ್ಯಗಳ ಬಗ್ಗೆ ಇವರ ಸಂಶೋಧನೆಗಳು ಭೂಖಂಡಗಳ ಅಲೆತದ ಸಿದ್ಧಾಂತಕ್ಕೂ ಬೆಂಬಲ ನೀಡಿದವು. ಬಾಲ್ಯದಲ್ಲಿ ಅವರ ಕುತೂಹಲ ಕೆರಳಿಸಿದ್ದ ಉಪ್ಪಿನ ಬೆಟ್ಟದ ಸಸ್ಯಾವಶೇಷಗಳನ್ನು, ಈಗ ವೈಜ್ಞಾನಿಕವಾಗಿ ಸಂಶೋಧನೆಗೆ ಒಳಪಡಿಸಿದಾಗ ಹೊಸ ವಿಷಯವೊಂದು ಹೊರಬಿತ್ತು. ಅದುವರೆಗೂ ಆ ಬೆಟ್ಟಗಳನ್ನು ಕೇಂಬ್ರಿಯನ್ ಯುಗಕ್ಕೆ ಸೇರಿದುವೆಂದು ಭಾವಿಸಲಾಗಿತ್ತು. ಆದರೆ ಡಾ॥ ಸಾಹ್ನಿಯವರು ತಮ್ಮ ಸಂಶೋಧನೆಯಿಂದ, ಆ ಬೆಟ್ಟಗಳು ಕೇಂಬ್ರಿಯನ್ ಯುಗಕ್ಕೆ ಸೇರಿದುವಲ್ಲ, ಬದಲಾಗಿ ಈವೋಸಿನ್ ಯುಗಕ್ಕೆ ಸೇರಿದವು ಎಂದು ಖಚಿತಪಡಿಸಿದರು. ಇದೇ ರೀತಿ ಅವರು ನಡೆಸಿದ ಅನೇಕ ಸಂಶೋಧನೆಗಳ ಬಗ್ಗೆ ಅವರೇ ಬರೆದು ಪ್ರಕಟಿಸಿದ ಲೇಖನಗಳು ಈಗ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಸಮಾವೇಶಗಳಲ್ಲಿ, ಸಂಕಿರಣಗಳಲ್ಲಿ ಚರ್ಚಿತವಾದವು; ಸಾಹ್ನಿಯವರು ಸಸ್ಯಶಾಸ್ತ್ರ, ಅದರಲ್ಲೂ ನಷ್ಟ ಸಸ್ಯ ಅಥವಾ ಪ್ರಾಚೀನ ಸಸ್ಯಗಳ ಸಂಶೋಧನೆ ವಿಭಾಗದಲ್ಲಿ ವಿಶ್ವವಿಖ್ಯಾತರಾದರು. ಇದರಿಂದಾಗಿ ಇವರಿಗೆ ಇಂಗ್ಲೆಂಡಿನ ಸುಪ್ರಸಿದ್ಧ ರಾಯಲ್ ಸೊಸೈಟಿಯ ಸದಸ್ಯತ್ವ ಲಭಿಸಿತು. ೧೯೨೯ರಲ್ಲಿ ಕೇಂಬ್ರಿಡ್ಜ್ ವಿಶ್ವವಿದ್ಯಾಲಯವು ಇವರಿಗೆ ಎಸ್.ಸಿ.ಡಿ. ಪದವಿ ಪ್ರದಾನ ಮಾಡಿತು. ಇದನ್ನು ಪಡೆದ ಭಾರತೀಯ ವಿಜ್ಞಾನಿಗಳಲ್ಲಿ ಡಾ॥ ಸಾಹ್ನಿಯವರೇ ಮೊದಲಿಗರು.

ಡಾ॥ ಸಾಹ್ನಿಯವರು ಕೇವಲ ಪ್ರಾಚೀನ ಸಸ್ಯಗಳನ್ನೇ ಅಲ್ಲದೆ ತತ್ಕಾಲೀನ ಸಸ್ಯಗಳನ್ನೂ ಅಧ್ಯಯನ ಮಾಡಿದರು. ಆ ಬಗ್ಗೆ ಅನೇಕ ಲೇಖನಗಳನ್ನೂ ಬರೆದರು. ಈ ಬಗ್ಗೆ ಅವರು ಬರೆದ ದೀರ್ಘ ಪ್ರಬಂಧವೊಂದು ರಾಯಲ್ ಸೊಸೈಟಿಯ ಫಿಲಸಾಫಿಕಲ್ ವರದಿಗಳಲ್ಲಿ ಪ್ರಕಟವಾಯಿತು.

ಒಂದು ಸಂಗ್ರಹಾಲಯದಲ್ಲಿದ್ದ ಕಾಶ್ಮೀರದ ಕೊಕ್ರಕಾಟ ಎಂಬ ಪ್ರದೇಶದ ಟೆರ್ರಾ ಕೋಟ ನಾಣ್ಯಗಳ ಅಚ್ಚು ಡಾ॥ ಸಾಹ್ನಿಯವರ ಕಣ್ಣಿಗೆ ಬಿತ್ತು. ಈ ವಿಷಯದಲ್ಲಿ ಸಂಬಂಧಪಟ್ಟ ಅಧಿಕಾರಿಗಳ ಸಹಕಾರ ಪಡೆದು ಸಂಶೋಧನೆ ನಡೆಸಿದರು. ಅಂತಹ ಅಚ್ಚುಗಳು ಭಾರತದ ಹತ್ತು ಪುರಾತನ ಪಟ್ಟಣಗಳಲ್ಲಿ ದೊರೆತಿರುವುದು ತಿಳಿಯಿತು. ಆ ಅಚ್ಚುಗಳ ಮಣ್ಣಿನಲ್ಲಿ ಮಿಶ್ರಿತವಾದ ಸಸ್ಯ ಚೂರುಗಳನ್ನು ಅವರು ಪರೀಕ್ಷಿಸಿದರು. ಅನಂತರ ಅವುಗಳನ್ನು ಡಾ॥ ಹೆಚ್. ಜೆ. ಭಾಭಾರವರ ಮೂಲಕ ''ಕ್ಷಕಿರಣಗಳ'' ಪರೀಕ್ಷೆಗೂ ಒಳಪಡಿಸಿದರು : ಈ ರೀತಿಯ ಸಂಶೋಧನೆಯಿಂದ, ಪುರಾತನ ಭಾರತೀಯರಿಗೆ ನಾಣ್ಯ ತಯಾರಿಕೆಯಲ್ಲಿದ್ದ ಕೌಶಲದ ಪರಿಚಯವಾಯಿತು. ಈ ಅಧ್ಯಯನ ಹಾಗೂ ಸಂಸ್ಕೃತದಲ್ಲಿದ್ದ ಪರಿಶ್ರಮದಿಂದಾಗಿ ಡಾ॥ ಸಾಹ್ನಿಯವರು ಕೊಕ್ರಕಾಟದ ಅಚ್ಚು ಮಹಾಭಾರತ ಕಾವ್ಯದ ಸಭಾಪರ್ವದಲ್ಲಿ ಬರುವ ಯೌಧೇಹ ರಾಜ್ಯಕ್ಕೆ ಸೇರಿದುದೆಂದು ತೀರ್ಮಾನಿಸಿದರು. ಹೀಗೆ ಪ್ರೊ॥ ಸಾಹ್ನಿಯವರು ತಮ್ಮ ಸಂಶೋಧನೆಯಿಂದ ಸಂಗ್ರಹಿಸಿದ ವಿಷಯು ಮಹಾಭಾರತದ ಇತಿಹಾಸ ಹಾಗೂ ಆ ಕಾಲದ ದೇಶಗಳ ವರ್ಣನೆಗೆ ಒಂದು ಖಚಿತ ಪ್ರಮಾಣವಾಗಿದೆ.

೨೮ ವರ್ಷ ಕಾಲ ಲಕ್ನೋ ವಿಶ್ವವಿದ್ಯಾಲಯದ ವಿಜ್ಞಾನ ಪ್ರಾಧ್ಯಾಪಕರಾಗಿದ್ದ ಸಾಹ್ನಿಯವರು, ಭಾರತದ ಮತ್ಯಾವುದೇ ಸಸ್ಯವಿಜ್ಞಾನಿಗಿಂತ ಹೆಚ್ಚು ಕೆಲಸ ಮಾಡಿದರು. ಮುಂದೆ ಅದೇ ವಿಶ್ವವಿದ್ಯಾಲಯದ ಡೀನ್ ಕೂಡ ಆಗಿ, ಕೊನೆತನಕ ಆ ಕಾರ್ಯವನ್ನೂ ಯಶಸ್ವಿಯಾಗಿ ನಿರ್ವಹಿಸಿದರು. ಡೀನ್ ಆಗಿ ತಮಗೆ ದೊರೆತ ಸಂಭಾವನೆಯನ್ನೆಲ್ಲ ಅದೇ ವಿಶ್ವವಿದ್ಯಾಲಯಕ್ಕೇ ಕೊಟ್ಟರು ಮತ್ತು ಆ ಹಣದಿಂದ ತಮ್ಮ ತಂದೆಯ ಹೆಸರಿನಲ್ಲಿ ಎಂ.ಎಸ್‌ಸಿ. ವಿದ್ಯಾರ್ಥಿಗಳಲ್ಲಿ ಸಂಶೋಧನಾ ಪ್ರತಿಭೆ ಪ್ರಕಟಿಸಿದವರಿಗೆ ಪಾರಿತೋಷಕ ಕೊಡಲು ಏರ್ಪಡಿಸಿದರು.

ಡಾ॥ ಸಾಹ್ನಿಯವರು ಪಡೆದ ಪ್ರಶಸ್ತಿ, ಗೌರವಗಳಿಗೆ ಲೆಕ್ಕವಿಲ್ಲ. ೧೯೩೦ ಹಾಗೂ ೧೯೩೫ರಲ್ಲಿ ಅಂತರರಾಷ್ಟ್ರೀಯ ಸಸ್ಯಶಾಸ್ತ್ರಕಾಂಗ್ರೆಸ್‌ಗೆ ಉಪಾಧ್ಯಕ್ಷರಾಗಿ ಆರಿಸಲ್ಪಟ್ಟರು. ಅಮೆರಿಕಾದ ಕಲೆ ಮತ್ತು ವಿಜ್ಞಾನ ಅಕಾಡೆಮಿ ತನ್ನ ಸದಸ್ಯತ್ವವನ್ನು ಕೊಟ್ಟು ಗೌರವಿಸಿತು. ಡಾ॥ ಸಾಹ್ನಿಯವರು ಇಷ್ಟು ದೊಡ್ಡ ಸಂಶೋಧಕ ವಿಜ್ಞಾನಿಯಾದರೂ ಯಾವಾಗಲೂ ಪ್ರಯೋಗ ಶಾಲೆಯಲ್ಲೇ ಮುಳುಗಿಹೋಗಿರಲಿಲ್ಲ. ಜೀವನದ ಇತರ ರಂಗಗಳಲ್ಲೂ ಅವರಿಗೆ ಆಸಕ್ತಿ. ಅವರು ಒಳ್ಳೆಯ ಹಾಕಿ ಮತ್ತು ಟೆನಿಸ್ ಆಟಗಾರರು. ದೊಡ್ಡ ಅಧಿಕಾರದಲ್ಲಿದ್ದರೂ ಈ ಕ್ರೀಡೆಗಳಲ್ಲಿ ಭಾಗವಹಿಸುತ್ತಿದ್ದರು. ಕೇಂಬ್ರಿಡ್ಜ್‌ನಲ್ಲಿದ್ದಾಗ ಫ್ಯಾನ್ಸಿ ಡ್ರೆಸ್ ಸ್ಪರ್ಧೆಗೂ ಸೇರಿದ್ದರು. ಗುಂಪಿನಲ್ಲಿದ್ದಾಗ ತಮಾಷೆಯಾಗಿ ಮಾತಾಡುತ್ತಾ ನಕ್ಕು ನಗಿಸುವುದರಲ್ಲೂ ಅವರು ಚತುರರಾಗಿದ್ದರು; ಒಳ್ಳೆಯ ಅಧ್ಯಾಪಕರು ಮತ್ತು ವಿದ್ಯಾರ್ಥಿ ಮಾರ್ಗದರ್ಶಿಯಾಗಿದ್ದರು.

ಡಾ॥ ಸಾಹ್ನಿಯವರು ತಾವು ಆರ್ಜಿಸಿದ ಹಣವನ್ನೆಲ್ಲ ಹಾಕಿ ಲಕ್ನೋ ನಗರದಲ್ಲಿ ವಿಶ್ವದಲ್ಲೆ ಮೊಟ್ಟಮೊದಲ ನಷ್ಟ ಸಸ್ಯಜೀವಿ ಸಂಶೋಧನಾ ಸಂಸ್ಥೆ ಸ್ಥಾಪಿಸಿದರು. ''ಸಾಹ್ನಿಯವರ ಇನ್‌ಸ್ಟಿಟ್ಯೂಟ್ ಆಫ್ ಪಾಲಿಯೋ ಬಾಟನಿ'' ಎಂಬ ಹೆಸರಿನ ಈ ಸಂಸ್ಥೆಯ ಕಟ್ಟಡದ ಶಂಕುಸ್ಥಾಪನೆಯನ್ನು ಅಂದಿನ ಪ್ರಧಾನಿ ಪಂ. ಜವಾಹರಲಾಲ್ ನೆಹ್ರೂರವರೇ ೧೯೪೯ರ ಏಪ್ರಿಲ್ ತಿಂಗಳಲ್ಲಿ ನೆರವೇರಿಸಿದರು. ಆ ಸಮಾರಂಭಕ್ಕೆ ದೇಶವಿದೇಶಗಳ ವಿಜ್ಞಾನಿಗಳು ಬಂದಿದ್ದರು. ಆದರೆ ಆ ಕಟ್ಟಡ ಪೂರ್ಣವಾಗಿ ಅದರಲ್ಲಿ ಸಂಶೋಧನಾ ಕಾರ್ಯಗಳು ನಡೆಯುವುದನ್ನು ನೋಡಲು ಡಾ॥ ಸಾಹ್ನಿಯವರಿಗೆ ಅವಕಾಶವೇ ಆಗಲಿಲ್ಲ. ಶಂಕುಸ್ಥಾಪನೆಯಾದ ಆರು ದಿನಗಳಲ್ಲೇ, ಏಪ್ರಿಲ್ ೯ರಂದು ಮಧ್ಯರಾತ್ರೆ ಡಾ॥ ಬೀರಬಲ್ ಸಾಹ್ನಿಯವರು ಕಾಲವಾದರು. ಅವರ ಪಾರ್ಥಿವ ಶರೀರವನ್ನು ಆ ಸಂಸ್ಥೆಯ ಪಕ್ಕದಲ್ಲೇ ಸಮಾಧಿ ಮಾಡಲಾಯ್ತು. ಈಗಲೂ ಅನೇಕರು ಆಸಕ್ತಿಯಿಂದ ಅಲ್ಲಿ ಸಂಶೋಧನೆ ನಡೆಸುತ್ತಿದ್ದಾರೆ. ಡಾ॥ ಸಾಹ್ನಿಯವರ ಶ್ರೇಷ್ಠ ವ್ಯಕ್ತಿತ್ವದ ಕುರುಹಾದ ಆ ಸಮಾಧಿಯೇ ಆ ವಿದ್ಯಾರ್ಥಿಗಳಿಗೆ ಸ್ಫೂರ್ತಿ.

**ಬಿ. ಜಿ. ಕುಸುಮಾ**
ನಂ. ೧೯೪, ೫ನೇ ಮುಖ್ಯರಸ್ತೆ, ೪ನೇ ಬ್ಲಾಕ್ ೩ನೇ ಫೇಸ್, ಬನಶಂಕರಿ ೩ನೇ ಹಂತ
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಕೃತಘ್ನ ಸಂಸ್ಕೃತಿ; ಧಾರ್ಮಿಕ ವೈಪರೀತ್ಯ

ಎಸ್. ಆರ್. ಗುರುನಾಥ್

ಅಮಾಯಕರೂ ಅನಕ್ಷರಸ್ಥರೂ ಶ್ರಮಿಕ ಸೇವಕರೂ ಆದ ದಲಿತರ ಮೇಲೆ ನಡೆದಷ್ಟು ದೌರ್ಜನ್ಯ ಯಾವ ದೇಶದಲ್ಲೂ ಯಾವ ಸಮುದಾಯಗಳ ಮೇಲೂ ನಡೆದಿರಲಿಕ್ಕಿಲ್ಲ. ಇದು ಧರ್ಮಾಂಧರ, ಜಾತಿವಾದಿಗಳ, ಪಟ್ಟಭದ್ರರ... ಕೃತಘ್ನ ಸಂಸ್ಕೃತಿ. ಇದರಿಂದ ನೊಂದು ಬೆಂದ ದಲಿತರು, ''ಎಲ್ಲವೂ ದೈವೇಚ್ಛೆ, ಹಿರೀಕರ ನಿಯಮ'' ಅಂದುಕೊಂಡು ಎಲ್ಲವನ್ನು ಭೂದೇವಿಯಂತೆ ಸಹಿಸಿಕೊಂಡರು. ಇದು ಯಾವ ಮಟ್ಟದ ಸಹನೆ ಎಂಬುದನ್ನು ಅರಿತುಕೊಳ್ಳದ ಅವರ ದಡ್ಡತನವು ಶೋಷಕರ ಪ್ರಾಬಲ್ಯಕ್ಕೆ ಮತ್ತಷ್ಟು ಪ್ರೋತ್ಸಾಹ ನೀಡಿದಂತಾಯಿತು. ಶೋಷಣೆಯೇ ಧರ್ಮ; ಶೋಷಣೆಯೇ ಸಂಸ್ಕೃತಿ; ಶೋಷಣೆಯೇ ಸಂಪ್ರದಾಯ ಎಂಬ ಮನೋಭಾವದ ಜನ ಯಾವತ್ತೂ ಆತ್ಮವಿಮರ್ಶೆ ಮಾಡಿಕೊಳ್ಳಲಿಲ್ಲ. ನಮ್ಮ ನಡವಳಿಕೆಗಳು ಸರಿಯೇ, ನ್ಯಾಯವೇ, ಎಂಬಂಥ ಒಂದೇ ಒಂದು ಸಣ್ಣ, ಪ್ರಶ್ನೆಯನ್ನೂ ಹಾಕಿಕೊಳ್ಳಲಿಲ್ಲ.

ಧಾರ್ಮಿಕ, ಸಾಮಾಜಿಕ, ರಾಜಕೀಯ ಇತ್ಯಾದಿ ಕ್ರಾಂತಿಗಳು ಹಾಗೂ ಆಂದೋಲನಗಳು ಚಿಗುರೊಡೆಯುವುದನ್ನು ತಡೆ ಹಿಡಿಯುವುದೇ ಕರ್ಮ ಸಿದ್ಧಾಂತದ ಮುಖ್ಯ ಉದ್ದೇಶ. ಇಂಥ ಹಲವಾರು ಕುತಂತ್ರದ ನೆಲೆಗಳಲ್ಲಿ ಯಶಸ್ಸು ಸಾಧಿಸಿದ ಸ್ವಾರ್ಥಪರ ಧರ್ಮವು ಜಾತೀಯತೆಯನ್ನು ಉಳಿಸಿ ಬೆಳೆಸುವಲ್ಲಿ ಮುಂದಾಳುತನ ವಹಿಸಿಕೊಂಡಿತು. ಇಂತಹ ಅವಲಕ್ಷಣಗಳನ್ನು ಗುರುತಿಸಲೆತ್ನಿಸಿದ ಕಣ್ಣುಗಳಿಗೆ ಮೌಢ್ಯದ ಬಟ್ಟೆ ಕಟ್ಟಿತು. ಚಿಂತಿಸುವ ಮನಸ್ಸುಗಳಿಗೆ ಧಾರ್ಮಿಕ ಕತ್ತಲ ಹರಿಸಿತು. ಆ ಅಂಧಕಾರದಲ್ಲಿ ಬ್ರಹ್ಮರಕ್ಕಸರ ಥಕಥೈ ಕುಣಿದಾಟ ಬಾಹ್ಯಜಗತ್ತಿಗೆ ಗೋಚರಿಸಲೇ ಇಲ್ಲ.

'ಎಲ್ಲಾ ಭಗವಂತನ ಇಚ್ಛೆ; ಅಂತೆಯೇ ಆಗಲಿ' ಎಂಬುದು ಜನಸಾಮಾನ್ಯರ ಧೋರಣೆ, ಹೀಗೆ ಪ್ರತಿಯೊಬ್ಬ ವ್ಯಕ್ತಿಯೂ ''ತತ್ವಜ್ಞಾನಿ''ಯಾಗಿರುವ ಕೀರ್ತಿ ಇಂಡಿಯಾದ ಜನತೆಗೆ ಮಾತ್ರ ಸಲ್ಲುವಂಥದ್ದು. ಶ್ರಮದ ಹಾಗೂ ಅಸಹ್ಯಕರ ಕೆಲಸಕಾರ್ಯಗಳನ್ನು ನಿರ್ವಹಿಸುವ ಸಮುದಾಯಗಳ ಬಗ್ಗೆ ಕಿಂಚಿತ್ತಾದರೂ ಕೃತಜ್ಞತಾಭಾವವಿಲ್ಲದ ಜನರು ನಮ್ಮ ಸಂಸ್ಕೃತಿಯೇ ಪರಮಶ್ರೇಷ್ಠ; ಪರಮಪವಿತ್ರ... ಎಂಬಂಥ ಬೊಗಳೆ ಬೀಜಗಳನ್ನು ಬಿತ್ತಿ ಬೆಳೆದರು. ಹೀಗಾಗಿ ಮೇಲುವರ್ಣದವರ, ಭೂಮಾಲೀಕರ ಹಾಗೂ ಬಂಡವಾಳಶಾಹಿಗಳ ತುಳಿತಕ್ಕೆ ಈಡಾದ ಶೂದ್ರರೂ ಹಾಗೂ ಅಸ್ಪೃಶ್ಯರೂ ತಮ್ಮ ಅಸ್ತಿತ್ವವನ್ನೇ ಕಳೆದುಕೊಂಡು, ವೈದಿಕ ಧರ್ಮಸಿದ್ಧಾಂತಗಳನ್ನು ಭಯ-ಭಕ್ತಿಯಿಂದ ನೋಡುತ್ತಲೇ ಅವುಗಳ ಸಮ್ಮೋಹಕ ಸೆಳೆತಕ್ಕೆ ಸಿಲುಕಿಬಿಟ್ಟರು. ಯಾವುದು ಸರಿ; ಯಾವುದು ತಪ್ಪು; ಯಾವುದು ಬರೀ ಬುರುಡೆ ಎಂದು ಮುಂತಾಗಿ ಚಿಂತಿಸುವ ಪರಿಜ್ಞಾನವಾದರೂ ಅವರಿಗೆ ಎಲ್ಲಿಯದು ?! ಮಂಕುಬೂದಿಯಿಂದ ಮತ್ತಷ್ಟು ಮಂಕಾದ ಜನರು ಸ್ವಾರ್ಥಿಗಳ, ಸು[illegible]ಕಾಂಕ್ಷಿಗಳ, ಕುತಂತ್ರಿಗಳ ಹಾಗೂ ಬುದ್ಧಿವಂತರ ಸೇವೆ ಮಾಡುವುದರಲ್ಲೇ ತಮ್ಮ ಪೀಳಿಗೆಯ ಶತಶತಮಾನಗಳ ನರಳುವಿಕೆಗೆ ಕಾರಣರಾಗಿಬಿಟ್ಟರು.

'ಸರ್ವೇ ಜನಾಃ ಸುಖಿನೋ ಭವಂತು' ಎಂಬಂಥ ಸುವರ್ಣಸದೃಶ ನುಡಿಮುತ್ತುಗಳನ್ನು ಭರತಖಂಡದಲ್ಲೆಲ್ಲಾ ಹರಡಿದ ಒಂದು ಸಂಸ್ಕೃತಿಯ ಅಂತರಂಗದ ಅರ್ಥ ಸ್ಪಷ್ಟವಾಗುತ್ತದೆ. ಈ ವಾಕ್ಯವು ಬಡವರ ಪರವಾದರೆ ಶ್ರೀಮಂತರಿಗೆ ಅಸಮಾಧಾನ; ಪ್ರಗತಿಪರರ ಪರವಾದರೆ ಪ್ರತಿಗಾಮಿಗಳಿಗೆ ತಳಮಳ; ದಲಿತರ ಪರವಾದರೆ ಬಲಿತವರಿಗೆ ಸಿಟ್ಟು ! ಆದ್ದರಿಂದ ಅಂಥ ನುಡಿಮುತ್ತುಗಳು ಸಂಸ್ಕೃತಿಯ ಆವರಣದಲ್ಲಿ ಸರ್ವರಿಗೂ ಸಲ್ಲುವಂಥವುಗಳಲ್ಲ. ಅವು ಕೇವಲ ಅಲಂಕಾರಿಕಗಳು ಮಾತ್ರ ಎನ್ನಬಹುದು.

ಜಾತಿ ಜಾತಿಗಳೆಂಬ ಅಸಮಾನತೆಯ ಹಸಿ ಇಟ್ಟಿಗೆಗಳಿಂದ ನಿರ್ಮಿಸಲ್ಪಟ್ಟಿರುವ ಧರ್ಮವು ಭವ್ಯವಾದ ಮಹಲು ಎಂಬಂತಾಗಿದೆ! ಒಂದರ್ಥದಲ್ಲಿ ಈ ದೇಶವನ್ನು ನಿರ್ಮಿಸಿದ ಶೂದ್ರರು ಮತ್ತು ಅಸ್ಪೃಶ್ಯರು ಯಾವ ಲೆಕ್ಕಕ್ಕೂ ಇಲ್ಲದಂತಾಗಿರುವುದು ದುರಂತವೇ ಸರಿ! ಹಾಗೆಯೇ ಮೂವತ್ಮೂರು ಕೋಟಿ ದೇವರು, ವೇದ, ಪುರಾಣ, ಸಂಸ್ಕೃತ-ಸಂಸ್ಕೃತಿಗಳಿಂದಲೇ ಈ ಭರತವರ್ಷ ಸೃಷ್ಟಿಯಾಗಿ ಮಿಂಚುತ್ತಿರುವುದು-ಎಂಬಂಥ ಬೊಗಳೆಯೂ ಕೂಡ ಹಾಸ್ಯಾಸ್ಪದ ಸಂಗತಿ. ಏನೇ ಆದರೂ ದುಡಿಯುವ ಹಾಗೂ ಸೇವೆ ಸಲ್ಲಿಸುವ ಸಮುದಾಯಗಳು ತಮ್ಮ ವಿರುದ್ಧದ ಕೃತಘ್ನತೆಯನ್ನು ಗಮನಿಸದೆ ತಾವು ಮಾತ್ರ ಕೃತಜ್ಞರಾಗಿಯೇ ಜೀವ ತೇಯುತ್ತಿರುವುದೊಂದು ವಿರೋಧಾಭಾಸವೇ ಸರಿ. ಮೇಲ್ಮೆಯನ್ನೂ ಶ್ರೇಷ್ಠತೆಯನ್ನೂ ಸಂಪಾದಿಸಿಕೊಂಡವರು ತಮ್ಮನ್ನು ತಾವೇ ಹೊಗಳಿಕೊಂಡು, ಆತ್ಮರತಿಯಿಂದ ಬೀಗುತ್ತಾ ತಮ್ಮ ಸ್ವಾರ್ಥಕ್ಕಾಗಿ ಶೂದ್ರರನ್ನೂ ಅಸ್ಪೃಶ್ಯರನ್ನೂ ನಿಯಂತ್ರಣದಲ್ಲಿರಿಸಿಕೊಂಡರು. ಸಾಮಾಜಿಕವಾಗಿ, ರಾಜಕೀಯವಾಗಿ ಯಾವುದೇ ಶಕ್ತಿ ಸಾಮರ್ಥ್ಯಗಳಿಲ್ಲದ ಕೆಳಜಾತಿಯ ಜನರು ಮೇಲಿನವರ ಸೇವೆಯೇ ತಮ್ಮ ಕರ್ತವ್ಯ; ಅವರ ನಿಯಂತ್ರಣದಲ್ಲಿರುವುದೇ ಪರಮಧರ್ಮ ಅಂದುಕೊಂಡದ್ದರ ಪರಿಣಾಮವೇ ಕೃತಘ್ನ ಮನೋಧರ್ಮದ ಕ್ರೂರ ಶೋಷಣೆ! ಕೆಳವರ್ಗ- ವರ್ಣ-ಜಾತಿಯ ಸಮುದಾಯಗಳನ್ನು ಹಿಂಸೆಯ ಮೂಲಕ ನಿಯಂತ್ರಿಸುವುದೇ ಮೇಲುವರ್ಗ-ವರ್ಣದವರ ಬದುಕಿನ ಉದ್ದೇಶ; ಶೋಷಣೆಯ ಪರಮ ಗುರಿ. ಇವುಗಳಿಗೆ ಸರಿಯಾದ ದೃಷ್ಟಾಂತಗಳೆಂದರೆ ಸ್ಮೃತಿಗಳು. ಸ್ಮೃತಿಕಾರರಲ್ಲಿ ಮುಖ್ಯನಾದ ಮನುಮಹಾಶಯನ ದೇಹ ಸತ್ತು ಎಷ್ಟೋ ಸಾವಿರ ವರ್ಷಗಳಾದರೂ ಆತ್ಮ ಮಾತ್ರ ಈಗಲೂ ಎಲ್ಲೆಲ್ಲೂ ಹರಿದಾಡುತ್ತಿದೆ!

ಅನುವಂಶಿಕ ಅಸ್ಪೃಶ್ಯತೆಯು ಹಿಂದೂಗಳ ನಡುವೆ ಬೆಳೆಯುತ್ತಾ ಹೋಗಿ ಇಂದು ಇಂಡಿಯಾದಲ್ಲಿ ಯಾವುದೇ ಒಂದು ನಿರ್ದಿಷ್ಟ ಜಾತಿಗಿಂತಲೂ ಅಸ್ಪೃಶ್ಯರೇ ಹೆಚ್ಚು ಸಂಖ್ಯೆಯವರಾಗಿದ್ದಾರೆ. ಈ ದೇಶದಲ್ಲಿ ಮೇಲುವರ್ಣಗಳ ಕೆಲವು ಜಾತಿಗಳ ಜನರಿಲ್ಲದ ಹಳ್ಳಿಗಳಿರಬಹುದು. ಆದರೆ ಕೆಳಜಾತಿ-ಅಸ್ಪೃಶ್ಯರಿಲ್ಲದ ಹಳ್ಳಿ-ಗ್ರಾಮಗಳು ಕಾಣಸಿಗುವುದಿಲ್ಲ. ಅಂದಹಾಗೆ, ಹಳ್ಳಿ-ಗ್ರಾಮಗಳಲ್ಲಿ ಅಲ್ಪಸಂಖ್ಯಾತರಾದ ಆ ಜನ ರಾಷ್ಟ್ರಮಟ್ಟದಲ್ಲಿ

ಹಲವು ಚರಿತ್ರಕಾರರ ಅಭಿಪ್ರಾಯದಂತೆ ಅಸ್ಪೃಶ್ಯರು ಮೂಲತಃ ಅಸ್ಪೃಶ್ಯರಲ್ಲ. ಅವರು ಈ ದೇಶದ ಮೂಲ ನಿವಾಸಿಗಳು. ಭೂ ಒಡೆಯರೂ ರಾಜರೂ ಆಗಿದ್ದವರು. ಆಗಂತುಕ ಆರ್ಯನ್ನರ ಜಾತಿವಾದದಿಂದಾಗಿ 'ಕೆಳಜಾತಿ' ಹಾಗೂ 'ಅಸ್ಪೃಶ್ಯತೆ' ಎಂಬಂಥ ಗುಣಪಡಿಸಲಾಗದ ರೋಗಗಳು ಹುಟ್ಟಿಕೊಂಡವು. ಈ ಹಂತದಲ್ಲಿ ಜಾತಿಯಿಂದ ಕಸುಬುಗಳು ಉದ್ಭವವಾದುವೋ ಅಥವಾ ಕಸುಬುಗಳಿಂದ ಜಾತಿಗಳು ಉದ್ಭವವಾದುವೋ ಎಂಬುದು ಇತ್ಯರ್ಥವಾಗದ ವಿಷಯ. ಏನೇ ಆದರೂ ಶ್ರಮಿಕರೂ ಸೇವಕರೂ ಆದ ಅಮಾಯಕ ಜನ ಕೃತಘ್ನತೆಗೆ ಸಿಲುಕಿ ಸಹಸ್ರಾರು ವರ್ಷಗಳಿಂದ ಹಿಂಸೆ-ಅವಮಾನ ಅನುಭವಿಸುವಂತಾಯಿತು. ಲೋಕಾಯತ, ಚಾರ್ವಾಕ, ನಾಸ್ತಿಕ ಮೊದಲಾದ ವಿಚಾರವಂತರಿಗೆ ಹೆಜ್ಜೆ ಹೆಜ್ಜೆಗೂ ಗಂಡಾಂತರಗಳು ಎದುರಾದವು. ಹೀಗಾಗಿ ವೈಚಾರಿಕ ಅಂತಃಸತ್ವದ ಧರ್ಮಗಳು ಹೇಳ ಹೆಸರಿಲ್ಲದೆ ನಾಶವಾಗಿ ಹೋಗಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಸವರ್ಣೀಯರ ನಡವಳಿಕೆಗಳಲ್ಲಿ ಕೃತಘ್ನತೆಯ ಬದಲು ಕೃತಜ್ಞತೆಯ ಪ್ರಮಾಣ ಸ್ವಲ್ಪ ಹೆಚ್ಚಾಗಿದ್ದಿದ್ದರೂ ಈ ದೇಶದ ಸ್ವರೂಪವೇ ಬದಲಾಗಿರುತ್ತಿತ್ತು.

ಬಹುಸಂಖ್ಯಾತರು. ಆದರೂ ಮುಷ್ಟಿಯಷ್ಟಿರುವ ಕೆಲವು ಜಾತಿಯ ಜನರಿಂದ ಆಳಿಸಿಕೊಳ್ಳುತ್ತಾ ಕೃತಘ್ನತೆಯನ್ನು ಸಹಿಸಿಕೊಂಡು ಕೃತಜ್ಞರಾಗಿಯೇ ಬದುಕುತ್ತಿದ್ದಾರೆ.

* * *

ದೇವ-ದೇವಿಯರೂ, ನರಮಾನವರೂ ಖಾಸಾ ಬಂಧು-ಮಿತ್ರರಂತೆ ಒಡನಾಡುತ್ತಿದ್ದ ಪುರಾಣ-ಪುಣ್ಯವಂತರ ಕಾಲದಲ್ಲೂ ವರ್ಣವ್ಯವಸ್ಥೆ ಅಸ್ತಿತ್ವದಲ್ಲಿತ್ತು. ಬ್ರಾಹ್ಮಣ ಶ್ರೇಷ್ಠ; ಕ್ಷತ್ರಿಯ ಹಾಗೂ ವೈಶ್ಯ ಮಧ್ಯಮ; ಶೂದ್ರ ಕನಿಷ್ಠ. ಇನ್ನು, ಚಂಡಾಳ-ದಸ್ಯು-ಶ್ವಪಚ ಎಂಬ ಅತ್ಯಂತ ಕೆಳ ಹಂತದ ಸಮುದಾಯಗಳು ಮನುಷ್ಯರು ಎನಿಸಿಕೊಳ್ಳು ವುದಕ್ಕೂ ಅನರ್ಹರಾಗಿದ್ದರು. ಅವರೆಲ್ಲಾ ಏಕೆ, ಹೇಗೆ, ಬದುಕುತ್ತಿದ್ದರೆಂಬುದೇ ಒಂದು ಸೋಜಿಗದ ಸಂಗತಿ! ಪ್ರತಿಸ್ಪರ್ಧಿಗಳಂತೆಯೂ ಇದ್ದ ಅವರನ್ನು ಹತ್ತಿಕ್ಕಲೆಂದೇ ರಚಿಸಲ್ಪಟ್ಟಿರುವ ಸ್ಮೃತಿಗಳು ಆಗಿನ ಕಾಲದ ಅಘೋಷಿತ ಸಂವಿಧಾನಗಳೇ ಆಗಿದ್ದುವು ಎಂಬುದರಲ್ಲಿ ಸಂದೇಹವಿಲ್ಲ.

'ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯ ವರ್ಣಗಳ ಹೆಸರನ್ನೆತ್ತಿ ಬೈಯುವ ಕೆಳಜಾತಿಯವನ ಬಾಯಲ್ಲಿ ಹತ್ತಂಗುಲ ಉದ್ದದ ಕಾದ ಕಬ್ಬಿಣದ ಸರಳನ್ನಿಡಬೇಕು'. (ನೋಡಿ, ಅನು : ಶೇಷನವರತ್ನ 'ಮನುಸ್ಮೃತಿ' ಅಧ್ಯಾಯ ೮ : ಶ್ಲೋಕ ೨೭೧)

'ಬ್ರಾಹ್ಮಣನಿಗೇ ಧರ್ಮವನ್ನು ಬೋಧಿಸುವ ಕೆಳಜಾತಿಯವನ ಕಿವಿಗೆ ಕಾದ ಎಣ್ಣೆಯನ್ನು ಹಾಕಬೇಕು'. (ಅಧ್ಯಾಯ ೮ : ಶ್ಲೋಕ ೨೭೨)

'ಬೇಕೆಂದೇ ಬ್ರಾಹ್ಮಣನ ಮೇಲೆ ಉಗುಳಿದರೆ ಅವನ ತುಟಿಯನ್ನು ಕತ್ತರಿಸಬೇಕು. ಮೂತ್ರ ವಿಸರ್ಜಿಸಿದರೆ ಶಿಶ್ನವನ್ನು ಕತ್ತರಿಸಬೇಕು. ಅವಮಾನಿಸಲು ಹೂಸು ಬಿಟ್ಟರೆ ಅವನ ಗುದ ಕತ್ತರಿಸಬೇಕು'. (ಅಧ್ಯಾಯ ೮; ಶ್ಲೋಕ ೨೮೨)

'ತಲೆಗೂದಲು, ಪಾದ, ಗಡ್ಡ, ಮೀಸೆ, ಕುತ್ತಿಗೆ ಹಾಗೂ ವೃಷಣಗಳನ್ನು ಹಿಡಿದೆಳೆದರೆ ಕೈ ಕತ್ತರಿಸಬೇಕು' (ಅಧ್ಯಾಯ ೮, ಶ್ಲೋಕ ೨೮೩)

'ಅಪರಾಧಿ ಬ್ರಾಹ್ಮಣನಿಗೆ ತಲೆ ಬೋಳಿಸಿದರೆ ಸಾಕು; ಇನ್ನಿತರರಿಗೆ ಮರಣದಂಡನೆ ವಿಧಿಸಬೇಕು'. (ಅಧ್ಯಾಯ ೮; ಶ್ಲೋಕ ೩೭೯)

ಕೆಳಜಾತಿಯವರ ಕ್ಷುಲ್ಲಕ ಕಾರಣಗಳಿಗೂ ಮಾರಣಾಂತಿಕ ಶಿಕ್ಷೆ! ಅದು ವೈದಿಕ ಸಂಸ್ಕೃತಿಯ ಕ್ರೌರ್ಯದ ಸಂಕೇತ. ಇದರಿಂದ ಅವರೇ ಪ್ರತಿಪಾದಿಸುವ ನ್ಯಾಯ, ನೀತಿ ಹಾಗೂ ಧರ್ಮಗಳ ಉದ್ದೇಶವೇನೆಂಬುದು ಆ ಕ್ರೌರ್ಯದ ಸ್ವರೂಪದಿಂದಲೇ ಅರ್ಥವಾಗುತ್ತದೆ.

ಹಲವು ಚರಿತ್ರಕಾರರ ಅಭಿಪ್ರಾಯದಂತೆ ಅಸ್ಪೃಶ್ಯರು ಮೂಲತಃ ಅಸ್ಪೃಶ್ಯರಲ್ಲ. ಅವರು ಈ ದೇಶದ ಮೂಲ ನಿವಾಸಿಗಳು. ಭೂ ಒಡೆಯರೂ ರಾಜರೂ ಆಗಿದ್ದವರು. ಆಗಂತುಕ ಆರ್ಯನ್ನರ ಜಾತಿವಾದದಿಂದಾಗಿ 'ಕೆಳಜಾತಿ' ಹಾಗೂ 'ಅಸ್ಪೃಶ್ಯತೆ' ಎಂಬಂಥ ಗುಣಪಡಿಸಲಾಗದ ರೋಗಗಳು ಹುಟ್ಟಿಕೊಂಡವು. ಈ ಹಂತದಲ್ಲಿ ಜಾತಿಯಿಂದ ಕಸುಬುಗಳು ಉದ್ಭವವಾದುವೋ ಅಥವಾ ಕಸುಬುಗಳಿಂದ ಜಾತಿಗಳು ಉದ್ಭವವಾದುವೋ ಎಂಬುದು ಇತ್ಯರ್ಥವಾಗದ ವಿಷಯ. ಏನೇ ಆದರೂ ಶ್ರಮಿಕರೂ ಸೇವಕರೂ ಆದ ಅಮಾಯಕ ಜನ ಕೃತಘ್ನತೆಗೆ ಸಿಲುಕಿ ಸಹಸ್ರಾರು ವರ್ಷಗಳಿಂದ ಹಿಂಸೆ-ಅವಮಾನ ಅನುಭವಿಸುವಂತಾಯಿತು. ಲೋಕಾಯತ, ಚಾರ್ವಾಕ, ನಾಸ್ತಿಕ ಮೊದಲಾದ ವಿಚಾರವಂತರಿಗೆ ಹೆಜ್ಜೆ ಹೆಜ್ಜೆಗೂ ಗಂಡಾಂತರಗಳು ಎದುರಾದವು. ಹೀಗಾಗಿ ವೈಚಾರಿಕ ಅಂತಃಸತ್ವದ ಧರ್ಮಗಳು ಹೇಳಹೆಸರಿಲ್ಲದೆ ನಾಶವಾಗಿ ಹೋಗಿರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಸವರ್ಣೀಯರ ನಡವಳಿಕೆಗಳಲ್ಲಿ ಕೃತಘ್ನತೆಯ ಬದಲು ಕೃತಜ್ಞತೆಯ ಪ್ರಮಾಣ ಸ್ವಲ್ಪ ಹೆಚ್ಚಾಗಿದ್ದಿದ್ದರೂ ಈ ದೇಶದ ಸ್ವರೂಪವೇ ಬದಲಾಗಿರುತ್ತಿತ್ತು.

ಪುರಾಣಗಳಲ್ಲಿ ಕಂಡುಬರುವ ಧಾರ್ಮಿಕ ದೌರ್ಜನ್ಯಗಳು ಒಂದು ಬಗೆಯ ಆಟಾಟೋಪಗಳೇ!

ವಿಚಾರವಂತ ವೇನ ಮಹಾರಾಜನನ್ನು ಅವನ ಮಗನಿಂದಲೇ ಒಣಹುಲ್ಲಿಗೆ ಹಾಕಿಸಿ ಜೀವಂತ ಸುಡಿಸಲಾಯಿತು! ಬಿಲ್ವಿದ್ಯಾ ಪಾರಂಗತನಾದ ಏಕಲವ್ಯನ ಹೆಬ್ಬೆರಳನ್ನೇ ಗುರುದಕ್ಷಿಣೆಯಾಗಿ ದ್ರೋಣಾಚಾರ್ಯರಿಂದ ಪಡೆಯಲಾಯಿತು! ಬ್ರಾಹ್ಮಣನೊಬ್ಬನ ಮಗನ ಸಾವಿಗೆ ಕಾರಣನಾದ ಎಂಬ ನೆಪದಿಂದ ಮಹಾತಪಸ್ವಿ ಶಂಬೂಕನನ್ನು ಶ್ರೀ ರಾಮಚಂದ್ರ ಎಂಬ ಮರ್ಯಾದಾ ಪುರುಷೋತ್ತಮನಿಂದ ಶಿರಚ್ಛೇದನ ಮಾಡಿಸಲಾಯಿತು! ಬಲಿ ಚಕ್ರವರ್ತಿಯನ್ನು ಹತ್ತಿಕ್ಕಲು ಮೂರು ಹೆಜ್ಜೆಗಳಷ್ಟು ಭೂದಾನ ಬೇಡಿದ ವಾಮನನಿಂದ ಪಾತಾಳಕ್ಕೆ ತುಳಿಸ ಲಾಯಿತು! ವಿಚಾರವಂತ ಚಾರ್ವಾಕನನ್ನು ನಿರ್ದಾಕ್ಷಿಣ್ಯವಾಗಿ ಕೊಂದುಹಾಕಲಾಯಿತು! ದಾನ ಸ್ವರ್ಗಕ್ಕೆ ದಾರಿ ಎಂಬಂಥ ಸಮ್ಮೋಹಕ ನುಡಿಗಳಿಂದ ಹರ್ಷವರ್ಧನ ರಾಜನಿಂದ ದಾನ ಪಡೆದೂ ಪಡೆದೂ ಲಂಗೋಟಿಗೂ ಗತಿಯಿಲ್ಲದಂತೆ ಮಾಡಲಾಯಿತು! ಇನ್ನೂ ಇಂಥ ದೃಷ್ಟಾಂತಗಳು ಎಲ್ಲೆಲ್ಲಿ ಎಷ್ಟೆಷ್ಟು ಅಡಗಿವೆಯೋ! ಸಾಕಷ್ಟು ಬಲಿಷ್ಠರೂ ಯೋಗ್ಯರೂ ಜನಪ್ರಿಯರೂ ಆದಂಥವರ ಸ್ಥಿತಿಯೇ ಹಾಗಿತ್ತು ಎಂದಾಗ ಇನ್ನು ಕೆಳಜಾತಿಯ ಅಸಹಾಯಕರ ಸ್ಥಿತಿ-ಗತಿ ಏನಾಗಿದ್ದಿರಬಹುದು? ಅದು ಕಲ್ಪನೆಗೂ ನಿಲುಕದ ಸಂಗತಿ.

ಪುರಾಣ-ಪುಣ್ಯಕಥೆಗಳಲ್ಲಿ ಅವಿಚಾರಿಗಳು ವಿಚಾರ ವಂತರನ್ನೂ, ಶೂದ್ರರನ್ನೂ ಹಾಗೂ ಅಸ್ಪೃಶ್ಯರನ್ನೂ ವಧಿಸಿದ ಉದಾಹರಣೆಗಳು ದೊರಕುತ್ತವೆ. ಆದರೆ ವಿಚಾರ ವಂತರು, ಶೂದ್ರರು ಹಾಗೂ ಅಸ್ಪೃಶ್ಯರು, ಅವಿಚಾರಿಗಳನ್ನು ವಧಿಸಿದ ಉದಾಹರಣೆಗಳು ಎಲ್ಲೂ ದೊರಕುವುದಿಲ್ಲ!

ಏಸುಕ್ರಿಸ್ತ ''ನಿನ್ನ ಕೆನ್ನೆಗೆ ಹೊಡೆದವನಿಗೆ ನಿನ್ನ ಇನ್ನೊಂದು ಕೆನ್ನೆಯನ್ನು ತೋರಿಸು'' ಎಂದ. ಬಸವಣ್ಣನವರು ''ದಯವೇ ಧರ್ಮದ ಮೂಲ'' ಎಂದರೆ, ಗಾಂಧೀಜಿಯವರು ''ಶತ್ರುಗಳ ಬಗ್ಗೆಯೂ ದಯೆ ಇರಲಿ'' ಎಂದರು. ಅಂಥವರ ನುಡಿಗಳನ್ನು ಅಕ್ಷರಶಃ ಪಾಲಿಸಿದವರೆಂದರೆ ಅಸ್ಪೃಶ್ಯರು. ಕೃತಘ್ನತೆಗೆ ತಕ್ಕಂಥ ಸೇಡು ತೀರಿಸಿಕೊಳ್ಳುವ ಸಾಮರ್ಥ್ಯ ಅವರಿಗೆ ಎಲ್ಲಿಂದ ಬರಬೇಕು? ಹಾಗೇನಾದರೂ ಆ ಸಾಮರ್ಥ್ಯ ಇದ್ದಿದ್ದರೆ ಈ ದೇಶದ ಇತಿಹಾಸವೇ ಬದಲಾಗಿರುತ್ತಿತ್ತು. ಸಾಮಾನ್ಯ ದೃಷ್ಟಿಯಲ್ಲಿ 'ದಲಿತ' ಎಂಬುದರಲ್ಲಿ 'ಯಾವುದೇ ನಿರ್ದಿಷ್ಟವಾದ ಪ್ರತಿಫಲಾಪೇಕ್ಷೆಯಿಲ್ಲದೆ ಸೇವಕನಾಗಿ ಜೀವ ಸವೆಸುವವನು' ಎಂಬಂಥ ಅರ್ಥ ಧ್ವನಿಸುತ್ತದೆ. ಈ ಅರ್ಥವು ಸವರ್ಣೀಯ ಮನೋನಿಘಂಟಿನಲ್ಲಿ ಮಾತ್ರ ದೊರಕುವಂಥದು.

* * *

ರಾಜಮಹಾರಾಜರು ಹಾಗೂ ಪಾಳೆಯಗಾರರ ಕಾಲದಲ್ಲಂತೂ ಅಸ್ಪೃಶ್ಯರಿಗೆ ಯಾವುದೇ ಕಿಂಚಿತ್ ಮಾನ್ಯತೆಯಾಗಲೀ ಗೌರವವಾಗಲೀ ಇರಲಿಲ್ಲ. ಸ್ಥಿತಿಗತಿ ಅತ್ಯಂತ ಹೀನಾಯವಾಗಿತ್ತು. ತಮ್ಮ ಮೇಲೆ ನಡೆಯುವ ಹಲ್ಲೆ ದೌರ್ಜನ್ಯಗಳ ವಿರುದ್ಧ ದೂರನ್ನು ಹೇಗೆ, ಯಾರಿಗೆ ಸಲ್ಲಿಸಬೇಕು? ನೋಡುವ ಕಣ್ಣು, ಕೇಳುವ ಕಿವಿ, ಅರಿಯುವ ಮನಸ್ಸುಗಳಾದರೂ ಆಗ ಎಲ್ಲಿದ್ದವು? ಅಸ್ಪೃಶ್ಯರ ವಿಷಯದಲ್ಲಿ ಅತ್ಯಂತ ಕೃತಘ್ನ ಪ್ರವೃತ್ತಿಗೆ ನಮ್ಮ ಇತಿಹಾಸವು ಒಂದು ಸೂಕ್ತ ಉದಾಹರಣೆ. ಸಾಂಪ್ರದಾಯಿಕ ಸಂಸ್ಕೃತಿಯ ಅಧಿಕಾರಶಾಹಿಯು ನಿರ್ದಾಕ್ಷಿಣ್ಯವಾಗಿ ಅವರಿಂದ ದುಡಿಸಿಕೊಳ್ಳುತ್ತಿತ್ತು; ಅಷ್ಟೇ ಅಮಾನುಷವಾಗಿ ನಿರ್ಲಕ್ಷಿಸುತ್ತಿತ್ತು. ಇದಕ್ಕೆಲ್ಲಾ ಅಪವಾದವೆಂಬಂತೆ ಮೈಸೂರು ಸಂಸ್ಥಾನದ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರು ೧೯೧೮ರಲ್ಲಿ ಸರ್ ಲೆಸ್ಲೀ ಮಿಲ್ಲರ್ ಅಧ್ಯಕ್ಷತೆಯಲ್ಲಿ ಆಯೋಗವೊಂದನ್ನು ರಚಿಸಿ, ದಲಿತರಿಗೆ ಮೀಸಲಾತಿ ನೀಡಲೆತ್ನಿಸಿದರು. ಅದನ್ನು ವಿರೋಧಿಸಿದ, ಅಂದು ದಿವಾನರಾಗಿದ್ದ ಸರ್ ಎಂ. ವಿಶ್ವೇಶ್ವರಯ್ಯನವರು ತಮ್ಮ ಹುದ್ದೆಗೆ ರಾಜೀನಾಮೆ ನೀಡಿದರು! 'ಮೀಸಲಾತಿ ಯಿಂದ ಪ್ರತಿಭೆಗೆ ಧಕ್ಕೆಯಾಗುತ್ತದೆ' ಎಂಬುದು ಅವರ ವಾದವಾಗಿತ್ತು. (ಸಂ. ವಿರೂಪಾಕ್ಷಿ ಪೂಜಾರಹಳ್ಳಿ 'ದಲಿತರು ಮತ್ತು ಚರಿತ್ರೆ' ೨೦೦೫ ಪು. ಸಂ. ೧೮೩) ಹಾಗೆಯೇ ದಲಿತರ ಪ್ರತ್ಯೇಕ ಚುನಾವಣಾ ಕ್ಷೇತ್ರಗಳ ಬಗ್ಗೆ ಡಾ|| ಅಂಬೇಡ್ಕರ್ ಒತ್ತಾಯಿಸಿದ್ದನ್ನು ವಿರೋಧಿಸಿದ ಗಾಂಧೀಜಿಯವರು ಉಪವಾಸ ಸತ್ಯಾಗ್ರಹ ನಡೆಸಿದರು! 'ದಲಿತರು ಮತ್ತೆ ಅದೇ ಪ್ರತ್ಯೇಕತೆಗೆ ಸಿಲುಕುತ್ತಾರೆ' ಎಂಬುದು ಅವರ ವಾದವಾಗಿತ್ತು! ದಲಿತರ ಸಂಕಷ್ಟಗಳಿಗೆ ಸ್ಪಂದಿಸುವ ಮಾನವೀಯ ಮನಸ್ಸುಗಳು ಶೇಕಡ ಎರಡ ರಷ್ಟಾದರೂ ಕಂಡುಬರುವುದು ವಿರಳ. ಇನ್ನುಳಿದ ತೊಂಬ ತ್ತೆಂಟರಷ್ಟು ಜನರ ಬಗ್ಗೆ ಹೇಳುವ ಅವಶ್ಯಕತೆಯೇ ಇಲ್ಲ.

ಅಸಹ್ಯಕರವಾದ ಸೇವಾಕಾರ್ಯಗಳನ್ನು ಭಯ ಭಕ್ತಿಯಿಂದ ನಿರ್ವಹಿಸುವ ಜನರನ್ನು ಊರಿನಿಂದ ಹೊರಗಿರಿಸಿದ ಸವರ್ಣೀಯರಿಗೆ ಕೃತಜ್ಞತೆಯ ಅರ್ಥವೇ ತಿಳಿದಿಲ್ಲವೇನೋ! ಕೇರಳದ ಈಳವ ಎಂಬ ಕೆಳಜಾತಿಯವರ ಸ್ಥಿತಿ ತುಂಬ ಹೀನಾಯವಾಗಿತ್ತು. ಆ ಜಾತಿಯ ಜನರಿಗೆ ಅಸ್ಪೃಶ್ಯರೆಂಬ ಮುದ್ರೆ ಒತ್ತಿ ರಸ್ತೆಗಳಲ್ಲಿ ನಡೆದಾಡದಂತೆ ಮಾಡಲಾಗಿತ್ತು! ನೆಲದ ಮೇಲೆ ಉಗುಳಲೂ ಸ್ವಾತಂತ್ರ್ಯವಿರಲಿಲ್ಲ. ಆದ್ದರಿಂದ ಕುತ್ತಿಗೆಗೆ ಕುಡಿಕೆ ಕಟ್ಟಿಕೊಳ್ಳಬೇಕಾಗಿತ್ತು. ಹೆಜ್ಜೆಯ ಗುರುತುಗಳು ನೆಲದ ಮೇಲೆ ಉಳಿಯಬಾರದೆಂದು ಸೊಂಟಕ್ಕೆ ಪೊರಕೆ ಕಟ್ಟಿಕೊಳ್ಳಬೇಕಾಗಿತ್ತು! ಮಹಾರಾಷ್ಟ್ರದ ಪೇಶ್ವೆಗಳ ಕಾಲದಲ್ಲೂ ಇದೇ ಪರಿಸ್ಥಿತಿಯೇ! ಅಸ್ಪೃಶ್ಯತೆಯ ವೈವಿಧ್ಯತೆಯನ್ನು ಸಂಕ್ಷಿಪ್ತವಾಗಿ ವಿವರಿಸುವುದು ಅಸಾಧ್ಯ!

ಕೆಳಜಾತಿಯ ಜನ ಯಾವಾಗಲೂ ಯಾರಿಗೂ ಯಾವ ಕಾರಣಕ್ಕೂ ಭಾರವಾಗಲಿಲ್ಲ. ಧರ್ಮ-ಶಾಸ್ತ್ರ-ಪಂಚಾಂಗ ಮುಂತಾದುವುಗಳ ಮೌಢ್ಯ ಹಬ್ಬಿಸಲಿಲ್ಲ; ಪುರಾಣ, ಇತಿಹಾಸ, ಜಾನಪದ ಮುಂತಾದವುಗಳಲ್ಲಿ ಅವರು ದೇಶದ್ರೋಹ ಅಥವಾ ಸಮಾಜದ್ರೋಹಗಳನ್ನೆಸಗಿದ ದೃಷ್ಟಾಂತಗಳು ಕಂಡುಬರುವುದಿಲ್ಲ. ಆಳರಸರ ನಡುವೆ ಯಾವುದೇ ಕುತಂತ್ರ ನಡೆಸಲಿಲ್ಲ. ಪರಕೀಯರಿಗೆ ಕೆಂಪು ಜಮಖಾನ ಹಾಸಲಿಲ್ಲ. ಸ್ವಾರ್ಥಕ್ಕಾಗಿ ಯಾರಿಗೂ ಡೊಗ್ಗು ಸಲಾಮು ಹೊಡೆಯಲಿಲ್ಲ. ಅಧಿಕಾರ-ಹುದ್ದೆಗಳಿಗಾಗಿ

ಹಪಹಪಿಸಲಿಲ್ಲ. ಯಾರನ್ನೂ ಯಾವ ಕಾರಣಕ್ಕೂ ಓಲೈಸಲಿಲ್ಲ. ಒಂದು ಕಾಲದಲ್ಲಿ ಸಾಮಾನ್ಯ ಜನರೂ ಕೂಡ ಯಾವ ಲೆಕ್ಕಕ್ಕೂ ಇರಲಿಲ್ಲ. ರಾಜನೇ ಅಲ್ಪನಾಗಿದ್ದ. ಪುರೋಹಿತರೇ ಸರ್ವಸ್ವವಾಗಿದ್ದರು! (ಹೆಚ್ಚಿನ ವಿವರಗಳಿಗೆ ನೋಡಿರಿ. ಸ್ವಾಮಿ ಧರ್ಮತೀರ್ಥ; ಅನು : ಭಗವಾನ್ – 'ಹಿಂದೂ ಸಾಮ್ರಾಜ್ಯಶಾಹಿ ಇತಿಹಾಸ' ೧೯೯೦)

ಧಾರ್ಮಿಕವಾಗಿ, ಸಾಮಾಜಿಕವಾಗಿ ಜಾತೀಯತೆಯನ್ನು ಬದಿಗೊತ್ತಿ ಮಾನವೀಯತೆಯನ್ನು ಮೆರೆದ ಸುಂದರ ಸಂದರ್ಭ ಎಲ್ಲೂ, ಯಾವಾಗಲೂ ಕಂಡುಬರುವುದಿಲ್ಲ. ಕೆಲವೇ ಕೆಲವು ಮಹಾಮಾನವರು ಮಾನವೀಯ ಧರ್ಮವನ್ನು ಎತ್ತಿಹಿಡಿಯಲೆತ್ನಿಸಿದರೂ ಯಾವುದೇ ಬದಲಾವಣೆಯಾಗಲಿಲ್ಲ. ಭಗವಾನ್ ಬುದ್ಧನ ಉಪದೇಶವೂ ಕೂಡ ಸನಾತನಧರ್ಮದಿಂದ ದೂರವಾಗಿ ತನ್ನದೇ ಧರ್ಮವನ್ನು ರೂಪಿಸಿಕೊಂಡಿತು. ಹಾಗೆಯೇ ಬಸವಣ್ಣನವರ ಚಳವಳಿಯು ಲಿಂಗಾಯತ ಧರ್ಮ/ಜಾತಿಯಾಗಿ ಕೆನೆಗಟ್ಟಿತು. ಇನ್ನು ಅಂಬೇಡ್ಕರ್ ಅವರ ಹೋರಾಟವೂ ಕೂಡ 'ದಲಿತ ಪರ' ಎಂಬಂತಾಗಿದೆ. ಇಲ್ಲಿಯ ಸಂಸ್ಕೃತಿಯು ಯಾವ ನೀರಲ್ಲೂ ಬೆರೆಯದ - ಯಾವ ನೀರನ್ನೂ ಬೆರೆಸಿಕೊಳ್ಳದ ತೈಲವಾಗಿಯೇ ಉಳಿದುಕೊಂಡಿತು.

ಜಾತಿಪದ್ಧತಿಯಲ್ಲೂ ಇರುವಂಥ ಸಂತಸಕರ ಸಂಗತಿಗಳನ್ನು ಗಮನಿಸಬೇಕು. ಕಠೋರವೂ ಅಮಾನವೀಯವೂ ಆದಂಥ ನಮ್ಮ ಸಂಸ್ಕೃತಿಯು ಅಸ್ಪೃಶ್ಯರ ಬಗ್ಗೆ ಒಂದಿಷ್ಟು ಮೃದುತ್ವವನ್ನು ತೋರಿದೆ ಎಂಬುದೊಂದು ವಿಶೇಷವೇ! ಭೂತಾಯಿಯ ಮೇಲೇ ಕಾಲಿಡಬಾರದು. ಪ್ರಕೃತಿದತ್ತ ಗಾಳಿಯಲ್ಲಿ ಉಸಿರಾಡಬಾರದು, ಯಾವುದೇ ಮೂಲದ ಬೆಳಕನ್ನು ಪಡೆಯಬಾರದು, ಸತ್ತವನನ್ನು ಮಣ್ಣಲ್ಲಿ ಹೂಳಬಾರದು, ದೈವದತ್ತ ಪಂಚೇಂದ್ರಿಯಗಳನ್ನು ಸಕ್ರಿಯಗೊಳಿಸಿಕೊಳ್ಳಬಾರದು, ಮಲ ವಿಸರ್ಜಿಸಿ ತೊಳೆದುಕೊಳ್ಳಬಾರದು... ಎಂಬಂಥ ನಿಯಂತ್ರಣಗಳನ್ನು ಹೇರಲಿಲ್ಲವಲ್ಲ, ಸದ್ಯ! ಅಷ್ಟರಮಟ್ಟಿಗೆ ಅದೇ ಮೇಲ್ಜಾತಿಯವರ ದೊಡ್ಡತನ; ''ಅಸ್ಪೃಶ್ಯರ ಭಾಗ್ಯವಿಶೇಷ''!

ಮಾನವ ಅದೆಷ್ಟೇ ಹಿಂದುಹಿಂದಕ್ಕೆ ಹೋಗಬೇಕು, ಅಲ್ಲೇ ನಿಲ್ಲಬೇಕು ಎಂದು ಹಂಬಲಿಸಿದರೂ ಕಾಲಧರ್ಮ ಎಂಬುದು ಒಡಂಬಡುವುದಿಲ್ಲ. ಅದು ತನ್ನಷ್ಟಕ್ಕೆ ತಾನು ಮುಂದುವರಿಯುತ್ತಲೇ ಹೋಗುತ್ತದೆ, ಬದಲಾಗುತ್ತಲೇ ಇರುತ್ತದೆ. ಅದರಲ್ಲಿ ದಲಿತರು ಇತ್ತೀಚೆಗೆ ಅಕ್ಷರಸ್ಥರಾಗುತ್ತಿದ್ದಾರೆ; ಕುಲಕಸುಬುಗಳನ್ನು ದೂರೀಕರಿಸುತ್ತಿದ್ದಾರೆ. ಕಾಲಕ್ಕೆ ತಕ್ಕಂತೆ ಹೆಜ್ಜೆ ಹಾಕುತ್ತಿದ್ದಾರೆ. 'ಹೀಗೇ ಮುಂದುವರಿದರೆ ನಮ್ಮ ಧರ್ಮ-ಸಂಸ್ಕೃತಿ ಯಕ್ಕುಟ್ಟಿ ಹೋದೀತು' ಎಂಬ ಭಯ ಕೆಲವರನ್ನು ಕಾಡಲಾರಂಭಿಸಿರಬಹುದು. ''ಕಾಲ ಕೆಟ್ಟು ಹಾಳಾಗಿಹೋಯಿತು! ಹಿಂದೆ ನಮ್ಮ ದೇಶ ಹೆಂಗಿತ್ತು! ನಮ್ಮ ಹಿರೀಕರು ಹೆಂಗಿದ್ದರು! ಆಚಾರ ಸಂಪ್ರದಾಯಗಳೆಲ್ಲಾ ಹೆಂಗಿದ್ದವು !! ಮನುಷ್ಯ ಮನುಷ್ಯನನ್ನೇ ತಿನ್ನುವ ಕಾಲ ಬಂತು! ಥೆ! ಥೆ! ನಾವೇ ಇದನ್ನೆಲ್ಲಾ ನೋಡಬೇಕಾಗಿ ಬಂತಲ್ಲ, ಭಗವಂತ...!!'' ಎಂದೆಲ್ಲಾ ಕುದಿಯುತ್ತಿರುವವರೂ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ.

ಸುಮಾರು ಇನ್ನೂರೈವತ್ತು ವರ್ಷಗಳ ಹಿಂದೆ ಆಂಧ್ರ-ಕರ್ನಾಟಕ ಗಡಿಯಲ್ಲಿರುವ ಎರಡುಕೆರೆ ಎಂಬ ಗ್ರಾಮದ ಬಳಿ ಮರಿಯಗೌಡ ಎಂಬುವವನು ಕಟ್ಟಿಸಿದ ಕೆರೆಯ ಏರಿಯು ಸಣ್ಣಪುಟ್ಟ ಮಳೆಯ ನೀರಿಗೇ ಒಡೆದುಹೋಗುತ್ತಿತ್ತು. ಪುನಃ ಪುನಃ ದುರಸ್ತಿ



ನಾನು ಯಾವ ನೆಲದಲ್ಲಾದರೂ ನಡೆದಾಡಲಿ
ನನ್ನ ಮಾತೃಭೂಮಿಯ ಮಣ್ಣ ವಾಸನೆಯೇ ಸೂಸಿಬರಲಿ
ನಾನು ಕಾಶ್ಮೀರ ಕಣಿವೆಯ ಸುವಾಸನೆ ಮೂಸಿರುವೆನು
ದ್ವೇಷದ ವಿಷಗಾಳಿ ವರ್ಜ್ಯವಾಗಿದೆ ನನಗೆ
ಸ್ಫೋಟಕ ಮದ್ದಿನ ಘಮಟು ವಾಸನೆ ಒಗ್ಗಲಾರದು ನನಗೆ
ಹಿಮಾಚ್ಛಾದಿತ ಹಿಮಾಲಯವೇ ಅಚ್ಚುಮೆಚ್ಚು
ಆದರೂ ಅವರೇಕೆ ಹೇಳುತ್ತಿದ್ದಾರೆ
ನನಗೆ ರಾಸಪರ್ವತವೇ ಪ್ರಿಯವೆಂದು ?

ನಾನು ಹಜ್ ಯಾತ್ರೆ ಕೈಕೊಂಡರೂ
ಮದೀನಾದ ನೆಲದಲ್ಲಿ ಪ್ರಾರ್ಥಿಸಿದರೂ
ಭಾರತದ ಏಳ್ಗೆಗಾಗಿಯೇ ಪ್ರಾರ್ಥಿಸುವೆನು
ನನ್ನ ದೇಶದ ಸುಖ ಸಮೃದ್ಧಿಯನೇ ಬಯಸುವೆನು
ನನಗೆ ಆಡಲು ಮಡಿಲು ನೀಡಿದ
ನೀರು, ಆಹಾರ, ಗಾಳಿ ಕೊಟ್ಟು ಪೋಷಿಸಿದ
ಮಾತೃಭೂಮಿಯ ಶ್ರೇಯಸ್ಸು ಬಯಸುವೆ
ನನ್ನ ದೇಹದ ಹನಿ ಹನಿ ರಕ್ತದಲ್ಲೂ
ಭಾರತದ ಹೆಸರೇ ಪ್ರತಿಧ್ವನಿಸುತ್ತಿರುತ್ತದೆ
ಆದರೂ ಅವರೇಕೆ ಹೇಳುತ್ತಿದ್ದಾರೆ
ನಾನು ಗಡಿಯಾಚೆಯವಳೆಂದು ?

ನನ್ನ ದೇಶದಲ್ಲಿ ನಿರಂತರ ಹರಿಯುತ್ತಿರುವ
ಗಂಗೆ, ಯಮುನೆ, ಕೃಷ್ಣೆ ಕಾವೇರಿಯರು
ಪ್ರೀತಿಯ ತಾಜಮಹಲು ನನ್ನ ದೇಶದಲ್ಲಿಯೇ ಇದೆ.
ಚಾರ್‌ಮಿನಾರ್, ಕುತುಬ್‌ಮಿನಾರ್‌ಗಳು
ಬದುಕಿರುವೆನು ನಾನು ಕಾಶಿ, ಮಥುರಾ
ಅಜ್ಮೀರ್‌ಬಾಬಾನ ಸೌಹಾರ್ದ ನೆಲೆಗಳಲ್ಲಿ
ಸೌಹಾರ್ದ ತಾಣ ಸುಂದರ ಹೂಬನ
ಪೋಷಿಸಿದವಳು ನಾನು
ಆದರೂ ಅವರೇಕೆ ಹೇಳುತ್ತಿದ್ದಾರೆ
ನನಗೆ, ಕೋಮಲ ಹೂಗಳ ದ್ವೇಷಿಯೆಂದು ?

ನಾನು ಲೋಕದ ಯಾವ
ಮೂಲೆಯಲ್ಲಾದರೂ ಕೊನೆಯುಸಿರೆಳೆಯಲಿ
ದೂರದಿಂದಲಾದರೂ ನನ್ನ ಭಾರತದ
ಗಡಿ ಕಾಣುತ್ತಿರಲಿ ಎಂದು ಬಯಸುವೆನು
ಯಾವ ದೇಶದ ನೀರೇ ಕುಡಿಯಲಿ
ಪವಿತ್ರ ಝಂಝಂ ಸೇವಿಸಿದರೂ ಸಹ
ಅದರಲ್ಲಿ ಗಂಗೆಯ ಸ್ವಾದ ಹುಡುಕುವೆನು.
ಪ್ರಾರ್ಥನೆಗೆ ಕೈ ಎತ್ತಿದ ಪ್ರತಿ ಬಾರಿಯೂ
ನನ್ನ ದೇಶದ ಏಳ್ಗೆಯನೇ ಬಯಸುವೆನು
ಆದರೂ ಅವರೇಕೆ ಹೇಳುತ್ತಿದ್ದಾರೆ ನನಗೆ
ನಿನ್ನ ಬದ್ಧತೆಯನು ಸಾಬೀತುಪಡಿಸು ಎಂದು ?

ಕೆ. ಷರೀಫಾ
ಆಫೀಸ್ ಆಫ್ ದ ಡೈರೆಕ್ಟರ್ ಆಫ್ ಆಗ್ರಿಕಲ್ಚರ್ ಮಾರ್ಕೆಟ್
ಪಿ.ಬಿ. ನಂ. ೫೩೦೯, ೧೬/೨, ರಾಜಭವನ ರಸ್ತೆ, ಬೆಂಗಳೂರು - ೧

ಮಾಡಿಸಿದರೂ ಪ್ರಯೋಜನವಾಗಲಿಲ್ಲವಾದ್ದರಿಂದ ನಿದ್ರಾಹಾರಗಳನ್ನು ತೊರೆದು ಚಿಂತಾಕ್ರಾಂತನಾದ ಗೌಡನ ಕನಸಿನಲ್ಲಿ ಕಾಣಿಸಿಕೊಂಡ ಗಂಗಾದೇವಿ ''ತುಂಬು ಗರ್ಭಿಣಿಯಾದ ನಿನ್ನ ಸೊಸೆಯನ್ನು ಕೆರೆಗೆ ಹಾರ ನೀಡಿದರೆ ಮಾತ್ರ ಏರಿ ನಿಲ್ಲುವುದು'' ಎಂದು ಹೇಳಿದಂತಾಯಿತಂತೆ! ಶ್ರೀಮಂತರ ಮಗಳೂ ಏಕೈಕ ಪುತ್ರನ ಹೆಂಡತಿಯೂ ಚೊಚ್ಚಲ ಬಸುರಿಯೂ ಆದ ತನ್ನ ಸೊಸೆಯನ್ನು ಬಲಿಕೊಡುವುದು ಹೇಗೆಂದು ಮರಿಗೌಡ ಚಿಂತೆಗೀಡಾದಾಗ, ಶಾನುಭೋಗನ ಸಲಹೆಯ ಮೇರೆಗೆ ಮನೆಯ ಆಳುಮಗ ಮಾದಿಗರ ತಿಮ್ಮಿಗನ ಹೆಂಡತಿ ಬಂದಮ್ಮನನ್ನು ತನ್ನ ಸೊಸೆಯೇ ಅಂದುಕೊಂಡು, ಅವಳನ್ನು ಕೆರೆಯ ಏರಿಯ ಗುಂಡಿಗೆ ಹಾಕಿ ಮಣ್ಣು ಮುಚ್ಚಿಸಿದ. ಆ ಸಮಾಧಿ-ಗುಡಿ, ಆಕೆಯ ಗಂಡನ ಮನೆಯವರಿಗೆ ನೀಡಿದ ಉಂಬಳಿ ಭೂಮಿ, ಇಂದಿಗೂ ವರ್ಷಕ್ಕೊಮ್ಮೆ ನಡೆಯುವ ಪೂಜೆ ಮುಂತಾದವುಗಳು ಆ ಘಟನೆಗೆ ಸಾಕ್ಷಿಯಾಗಿವೆ. ಇದು ಇತಿಹಾಸ (ವಿವರಗಳಿಗೆ ನೋಡಿ : ಎಸ್. ಆರ್. ಗುರುನಾಥ್ : 'ಕೆರೆಗೆ ಹಾರವಾದ ಬಂದಮ್ಮನ ಇತಿಹಾಸ' ೨೦೦೩ ಹಾಗೂ 'ಕೆರೆ ಏರಿಗೆ ಹಾರ' ೨೦೦೫)

ದಲಿತ ಮಹಿಳೆಯ ತ್ಯಾಗ ಬಲಿದಾನವು ಯಾವುದೇ ಲೆಕ್ಕಕ್ಕೂ ಇಲ್ಲವಾಗಿ ಜನಪದ ಧೋರಣೆಯ ಜಾನಪದ ಗೀತೆಯೊಂದರ ಪ್ರಕಾರ ಕೆರೆಗೆ ಬಲಿಯಾದವಳು 'ಭಾಗೀರತಿ' ಎಂಬ ಗೌಡನ ಖಾಸಾ ಸೊಸೆ ಎಂದೇ ನಾಡಿನಲ್ಲೆಲ್ಲ ಪ್ರಚಲಿತವಾಗಿದೆ! ಕಾಲ್ಪನಿಕ ಭಾಗೀರತಿಯ ಬಗ್ಗೆ ಕಣ್ಣೀರು ಸುರಿಸಲಾಗುತ್ತಿದೆಯೇ ವಿನಾ ವಾಸ್ತವದ ಬಂದಮ್ಮನನ್ನು ಗಮನಿಸಲಾಗುತ್ತಿಲ್ಲ. ಏಕೆಂದರೆ ಹೇಳಿ ಕೇಳಿ ಆಕೆ ಅಸ್ಪೃಶ್ಯ ಜಾತಿಯವಳು ತಾನೆ!

ಕರ್ನಾಟಕದಲ್ಲಿ ಕೆರೆಗೆ ಬಲಿಯಾದ ಇಂಥ ಹಲವಾರು ಘಟನೆಗಳು ಜರುಗಿವೆ. ಅವುಗಳಲ್ಲಿ ಬಲಿಯಾದ ಮಹಿಳೆಯರೆಲ್ಲಾ ಬಹುಪಾಲು ಕೆಳಜಾತಿಯವರೇ ಎಂಬುದರಲ್ಲಿ ಸಂದೇಹವಿಲ್ಲ. ಏಕೆಂದರೆ ಕತ್ತೆ, ಕುರಿ, ಕೋಳಿಪಿಳ್ಳೆಗಳಿಗಿಂತಲೂ ಸುಲಭವಾಗಿ ದೊರಕುವವರು ಅವರೇ ಅಲ್ಲವೇ ?! ತ್ಯಾಗ ಬಲಿದಾನಗಳು ಕೆಳಜಾತಿಯ ಜನರವು; ಹೆಸರು, ಕೀರ್ತಿಗಳು ಮಾತ್ರ ಮೇಲುಜಾತಿಯ ಜನರವು! ಕೃತಘ್ನತೆ ಎಂದರೆ ಅದೇ!

* * *

ಎದೆ ತುಂಬಿ ಕೊಂಡಾಡಲಾಗುತ್ತಿರುವ ಜಾನಪದ ಸಾಹಿತ್ಯದ ಒಡಲಲ್ಲಿ ತುಂಬಿ ತುಳುಕುತ್ತಿರುವ 'ಅಶ್ಲೀಲ' ಕಥೆ-ಗೀತೆಗಳೆಲ್ಲಾ ಕೆಳಜಾತಿಗಳ ಸಂಸ್ಕೃತಿಯನ್ನು ಬಿಂಬಿಸುವಂಥವುಗಳು. ಅಂದಹಾಗೆ ಜಾನಪದವು ಮೇಲುಜಾತಿಗಳನ್ನು ಓಲೈಸುತ್ತವೆ; ಅವರಿಗೆ ಮನರಂಜನೆ ನೀಡುತ್ತವೆ. ಅದೇ ಅದರ ಉದ್ದೇಶವೆಂದರೂ ಸರಿಯೆ.

ವೈದಿಕರು ಭೌತಿಕವಾಗಿ ಅಸ್ಪೃಶ್ಯರ ಮೇಲೆ ಹಲ್ಲೆ, ದೌರ್ಜನ್ಯ ಮುಂತಾದುವುಗಳನ್ನು ಎಸಗಿದ ದೃಷ್ಟಾಂತಗಳು ಪುರಾಣ, ಇತಿಹಾಸ, ಜಾನಪದ ಸಂದರ್ಭಗಳಲ್ಲಿ ದೊರಕುವುದು ವಿರಳ. ಹಲ್ಲೆ ದೌರ್ಜನ್ಯಗಳೇನೇ ಇದ್ದರೂ ಅವು ಶೂದ್ರವರ್ಣದ ಕೆಲವು ಜಾತಿಗಳಿಗೆ ಮೀಸಲು. ಅಸ್ಪೃಶ್ಯರ ಪಾಲಿಗೆ ಆ ಜಾತಿಗಳ ಜನರೇ ಯಮದೂತರು! ಸಿಂಹಸ್ವಪ್ನಗಳು! ಅದರೂ ಇದಕ್ಕೆಲ್ಲಾ ಕಾರಣ ಸಾಂಸ್ಕೃತಿಕ ಮುಖ್ಯವಾಹಿನಿಯೇ ಎಂಬುದನ್ನಂತೂ ಅಲ್ಲಗಳೆಯುವಂತಿಲ್ಲ. ಯಾರದೋ ತಪ್ಪಿಗೆ ಯಾರಿಗೋ ಶಿಕ್ಷೆ! ಅಸ್ಪೃಶ್ಯನೊಬ್ಬನ ತಪ್ಪಿಗೆ ಇಡೀ ಕೇರಿಗೇ ದಂಡನೆ ವಿಧಿಸುತ್ತಿದ್ದ ಉದಾಹರಣೆಗಳೂ ಉಂಟು!

ಶೋಷಣೆಯ ವಿಷಯದಲ್ಲಿ ಪುರಾಣಗಳಿಂದ ಹಿಡಿದು ವರ್ತಮಾನ ಕಾಲದವರೆಗೂ ಅದೇ ಧೋರಣೆ; ಅದೇ ನಿಲುವು. ಯಾವುದೇ ಕಾರಣಕ್ಕೂ ಅಸ್ಪೃಶ್ಯರು ಎಚ್ಚರಗೊಂಡು ಎದ್ದು ನಿಲ್ಲುವುದನ್ನು ತಡೆಗಟ್ಟಲು ಎಷ್ಟು ಬೇಕೋ ಅಷ್ಟು; ಹೇಗೆ ಬೇಕೋ ಹಾಗೆ ನಿಯಂತ್ರಣ ಹೇರಲಾಗಿದೆ. ಮೇಲುಜಾತಿಯವನ ಕಳ್ಳತನವನ್ನು 'ದೈವನಿರ್ಣಯ' ಎಂದು ಪರಿಗಣಿಸಿ ಸುಮ್ಮನಾಗುವುದೂ ಕೆಳಜಾತಿಯವನ ಕಳ್ಳತನವನ್ನು 'ದೈವದ್ರೋಹ' ಎಂದು ಶಿಕ್ಷಿಸುವುದು ಧಾರ್ಮಿಕ ನ್ಯಾಯ, ಎನಿಸಿಕೊಳ್ಳುತ್ತದೆ. ಆರೋಪಿ ಅಸ್ಪೃಶ್ಯನ ಗೈರುಹಾಜರಿಯಲ್ಲೇ ಪಂಚಾಯಿತಿ ನಡೆಸುವುದು, ಮನುವಿನ ಆದೇಶದಂತೆ ಮಿತಿಮೀರಿ ದಂಡ ವಿಧಿಸುವುದು ಬೆತ್ತಲೆ ಮೆರವಣಿಗೆ ಮಾಡುವುದು ಬಹಿಷ್ಕಾರ ವಿಧಿಸುವುದು, ಕೇವಲ ಅಸ್ಪೃಶ್ಯಾಚರಣೆಗಳಲ್ಲ; ಕೃತಘ್ನ ಮನೋಭಾವದ ಪ್ರತೀಕಗಳು.

* * *

ಎಲ್ಲಾ ಜಾತಿಗಳಲ್ಲೂ ಬಡವರಿದ್ದಾರೆ, ನಿಜ. 'ಅವರೆಲ್ಲರೂ ದಲಿತರೇ' ಎನ್ನಲಾಗುತ್ತಿದೆ. ಇಲ್ಲಿ ಮೇಲುಜಾತಿಯವನ ಬಡತನವೇ ಬೇರೆ; ಅಸ್ಪೃಶ್ಯನ ದಾರಿದ್ರ್ಯವೇ ಬೇರೆ. ಮೇಲುಜಾತಿಯ ಬಡವನಿಗೆ ನಿಧಿ ದೊರಕಿದರೆ ರಾತ್ರೋರಾತ್ರಿ ಮೇಲುವರ್ಗಕ್ಕೆ ಸೇರಿಬಿಡುತ್ತಾನೆ! ಆದರೆ ಅಸ್ಪೃಶ್ಯನ ವಿಷಯ ಹಾಗಲ್ಲ. ಅವನು ಎಂಥ ಶ್ರೀಮಂತನಾದರೂ, ವಿದ್ವಾಂಸನಾದರೂ, ನಾಗರಿಕನಾದರೂ ಕೀಳುಜಾತಿಯಿಂದ ಹೊರಬರಲಾರ. ಅವನಿಗೆ ಎಂದೂ ಬಿಡದಂಥ ಅಸ್ಪೃಶ್ಯತೆ ಮೆತ್ತಿಕೊಂಡಿರುತ್ತದೆ. ಸಾಮಾಜಿಕ ನಿರ್ಬಂಧಗಳಿರುತ್ತವೆ. ಧಾರ್ಮಿಕ ನಿಯಂತ್ರಣಗಳಿರುತ್ತವೆ. ಹೀಗಾಗಿ 'ದಲಿತ' ಎಂಬ ಅಭಿಧಾನಕ್ಕೆ ಅನ್ವರ್ಥಕವಾದ ವ್ಯಕ್ತಿಯೆಂದರೆ ಅಸ್ಪೃಶ್ಯನೇ. ಅಂದಹಾಗೆ 'ಅಸ್ಪೃಶ್ಯ' ಎಂದರೆ ದಲಿತ; 'ದಲಿತ' ಎಂದರೆ ಅಸ್ಪೃಶ್ಯ.

ಧರ್ಮದಿಂದ ಜಾತಿಗಳು; ಜಾತಿಗಳಿಂದ ಅಸ್ಪೃಶ್ಯತೆ; ಅಸ್ಪೃಶ್ಯತೆಯಿಂದ ವಿವಿಧ ಬಗೆಯ ಶೋಷಣೆ ನಡೆಯುತ್ತಿದೆ. ಈ ಶೋಷಣೆಯಿಂದ ದೇಶದ ಸಮಗ್ರತೆಗೆ ಹಾಗೂ ಸಾರ್ವಭೌಮತ್ವಕ್ಕೇ ಅಪಾಯವಿದೆ. ಬೇರೆ ಧರ್ಮಗಳಲ್ಲೂ ಒಳಪಂಗಡಗಳಿವೆ. ಆದರೆ ಅವುಗಳಲ್ಲಿ ಮೇಲು-ಕೀಳು ಎಂಬ ವ್ಯತ್ಯಾಸಗಳಿಲ್ಲ. ಧಾರ್ಮಿಕತೆಯಲ್ಲಿ ಅವುಗಳೆಲ್ಲಾ ಸರಿಸಮಾನವಾದವುಗಳು. ಆದುದರಿಂದಲೋ ಏನೋ ಅವುಗಳಲ್ಲಿ ಕೆಲವು ಜಾಗತಿಕ ಮಟ್ಟದ ವ್ಯಾಪ್ತಿಯನ್ನು ಪಡೆದುಕೊಂಡಿವೆ. ಒಂದಕ್ಕೊಂದು ಹೊಂದಾಣಿಕೆಯಿಲ್ಲದ ಜಾತಿಗಳ ಧರ್ಮವು ಸೀಮಿತ ಪ್ರದೇಶಕ್ಕೇ ಸೀಮಿತವಾಗಿಬಿಟ್ಟಿದೆ.

ಶ್ರೇಣೀಕೃತ ಜಾತಿಗಳು ತಮಗಿಂತ ಕೆಳಗಿನವುಗಳನ್ನು ತುಳಿಯುವುದೇ ಜಾತಿಯ ಮೇಲಣ ಒಂದು ಅಭಿಮಾನ ಹಾಗೂ ಧರ್ಮನಿಷ್ಠೆ ಎಂಬಂಥ ಹೆಮ್ಮೆಗೆ ಈಡಾಗಿವೆ. ಎಲ್ಲವೂ ಸೇರಿ ಅಸ್ಪೃಶ್ಯ ಜಾತಿಗಳನ್ನು ದೈಹಿಕವಾಗಿಯೂ ಮಾನಸಿಕವಾಗಿಯೂ ತುಳಿಯುತ್ತಾ ತಮ್ಮತನವನ್ನು ಮೆರೆಯುತ್ತಿವೆ. ಇದನ್ನೆಲ್ಲಾ ಕೆಲವರು 'ಸಾಂಸ್ಕೃತಿಕ ವೈವಿಧ್ಯತೆ' ಎನ್ನುತ್ತಾರೆ; 'ಉಪಸಂಸ್ಕೃತಿ' ಎಂದೂ ಕರೆಯುತ್ತಾರೆ. ಇಂಥ ಧೋರಣೆಯಿಂದ ಜಾತಿ ಜಾತಿಗಳು ಮತ್ತಷ್ಟು ಕೆನೆಗಟ್ಟುತ್ತವೆ. ಜಾತೀಯ ಸಭೆ-ಸಮ್ಮೇಳನ-ಸಮಾವೇಶಗಳು ಸ್ಪರ್ಧಾತ್ಮಕವಾಗಿ ನಡೆಯುತ್ತವೆ. ಇವುಗಳಿಗೆ ದಯಮಾಡಿಸುವ ಮಠಾಧೀಶರೂ ರಾಜಕಾರಣಿಗಳೂ ಗಣ್ಯರೂ ಆ ಜಾತಿಯ ಪರವಾಗಿ, ''ಇದು ಅತ್ಯಂತ ನಿರ್ಲಕ್ಷಿತ ಜಾತಿ, ಈ ಜಾತಿಯ ಎಲ್ಲರೂ ಸಂಘಟಿತರಾಗಬೇಕು. ಹಕ್ಕುಗಳಿಗೆ ಒತ್ತಾಯ ಮಾಡಬೇಕು. ಸವಲತ್ತುಗಳಿಗಾಗಿ ಹೋರಾಡಬೇಕು...'' ಎಂದೆಲ್ಲಾ ಭಾಷಣ ಬಿಗಿದು ಆಕರ್ಷಕ ಭರವಸೆಗಳನ್ನು ನೀಡಿ ಚಪ್ಪಾಳೆ ಗಿಟ್ಟಿಸುತ್ತಾರೆ. ಇದನ್ನೆಲ್ಲಾ 'ಜಾಗೃತಿ' ಎನ್ನಬೇಕೋ, 'ಜಾತಿವಾದ' ಎನ್ನಬೇಕೋ ಎಂಬುದು ಅರ್ಥವಾಗದ ಸಂಗತಿ. ಒಟ್ಟಿನಲ್ಲಿ ಮಠಗಳು ತಮ್ಮ ಜಾತಿಯ ಪ್ರಾಬಲ್ಯವನ್ನು ಗಮನಿಸಿದರೆ ರಾಜಕಾರಣಿಗಳು ಓಟುಗಳಿಸುವತ್ತ ಆಸಕ್ತಿ ವಹಿಸುತ್ತಾರೆ.

ಕಳೆದ ನಾಲ್ಕು ವರ್ಷಗಳಲ್ಲಿ ದಲಿತರ ಮೇಲೆ ದೌರ್ಜನ್ಯವೆಸಗಿ ಅವರ ಸೌಲಭ್ಯಗಳನ್ನು ದುರುಪಯೋಗಪಡಿಸಿಕೊಂಡ ಪ್ರಕರಣಗಳಲ್ಲಿ ಶಿಕ್ಷೆಯಾಗಿರುವ ಪ್ರಮಾಣ ಕೇವಲ ಶೇಕಡ ೨ರಷ್ಟು ಮಾತ್ರ! ದೌರ್ಜನ್ಯ ಮತ್ತು ಸೌಲಭ್ಯಗಳ ದುರ್ಬಳಕೆ ಪ್ರಕರಣಗಳನ್ನು ದಾಖಲಿಸಿಕೊಂಡು ತನಿಖೆ ನಡೆಸಿ, ದಲಿತ ಸಮುದಾಯಕ್ಕೆ ನ್ಯಾಯ ಒದಗಿಸಲು ರಾಜ್ಯ ಸರ್ಕಾರ ವಿಫಲವಾಗಿದೆ. ಪ್ರಕರಣಗಳ ವಿಚಾರಣೆಗೆ ತಗಲಿರುವ ವೆಚ್ಚ ಮಾತ್ರ ವಾರ್ಷಿಕ ಬರೋಬ್ಬರಿ ಐದು ಕೋಟಿ ರೂಗಳು! ದಲಿತರು ನೀಡಿದ ದೂರುಗಳ ಬಗ್ಗೆಯೂ ಉದಾಸೀನ ಮತ್ತು ನಿರ್ಲಕ್ಷ್ಯ ತೋರಲಾಗುತ್ತದೆ. ದಲಿತ ವಿರೋಧಿ ರಾಜಕಾರಣಿಗಳ ಹಾಗೂ ಅಧಿಕಾರಿಗಳ ಕೃತ್ಯದ ಪರಿಣಾಮವಿದು ('ಕನ್ನಡಪ್ರಭ' ದಿನಾಂಕ ೧೦-೦೫-೨೦೧೧ ಪುಟ ಸಂಖ್ಯೆ ೫).




ಮೃಗೀಯ ಮನಸ್ಸುಗಳು ಎಷ್ಟು ವಿಕೃತವೆಂದರೆ ದಲಿತ ಮಹಿಳೆಯರನ್ನು ಕೆರೆಗಳಿಗೆ ಬಲಿಕೊಟ್ಟ ಹಾಗೆಯೇ ಅವರನ್ನು ಪ್ರಾಣಿಗಳಂತೆ ಮಾರಾಟ ಮಾಡುತ್ತಿದ್ದ ಉದಾಹರಣೆಗಳೂ ಉಂಟು! ಕೆಳದಿ ಅರಸರ ಕಾಲದ ನಂತರ ಅಂದರೆ ಕ್ರಿ.ಶ. ೧೮೦೮ರ ಒಂದು ತಾಮ್ರ ಶಾಸನದಂತೆ ಇಕ್ಕೇರಿ ಶೇಷಾಚಾರ್ಯರ ಮಗ ಭೀಮಾಚಾರ್ಯನು ಹುಲಿಮನೆ ಕಾಳಸುಬ್ಬಣ್ಣನವರ ಮಗ 'ನನ್ನ ಅವಸರ ನಿಮಿತ್ತವಾಗಿ ನನ್ನ ಹೊಲೆಯಾಳು ಕರಿಯನ ಹೆಂಡತಿ ಚವುಡಿ ಎಂಬ ಹುಡುಗಿಯನ್ನು ಬುದ್ಧಿವಂತರು ಕಟ್ಟಿದ ಕ್ರಯ ಮೂರು ವರಹಗಳಿಗೆ ಅಹೋಬಲ ಸೋಮಯಾಜಿ ಎಂಬುವವರಿಗೆ ಮಾರಿ...'ದ ದಾಖಲೆಯು ಶೃಂಗೇರಿ ಮಠದಲ್ಲಿದೆ ('ಕರವೇ ನಲ್ನುಡಿ' ಏಪ್ರಿಲ್ ೨೦೧೧ ಪುಟ ಸಂಖ್ಯೆ ೭೭). ಇದು ಕೇವಲ

ಅಸ್ಪೃಶ್ಯತೆ ಮಾತ್ರವಲ್ಲ, ಸವರ್ಣೀಯ ಸಂಸ್ಕೃತಿಯ ಕೃತಘ್ನತೆಯೂ ಹೌದು !

ಬಾಗಲಕೋಟೆಯಿಂದ ಎರಡು ಮೈಲು ದೂರದ ಭಬ್ಬಿ ಗ್ರಾಮದಲ್ಲಿ ವರ್ಷಕ್ಕೊಮ್ಮೆ 'ಓಕುಳಿ' ಆಚರಿಸಲಾಗುತ್ತದೆ. ದಲಿತ ಮಹಿಳೆಯರಿಗೆ ಬೊಗಸೆ ಕಳ್ಳೆಪುರಿ-ತೆಂಗಿನ ಚೂರುಗಳ ಭಿಕ್ಷೆ ನೀಡಿ, ಗಂಡಸರು ಆ ಮಹಿಳೆಯರ ಮೇಲೆ ಓಕುಳಿ ನೀರನ್ನೆರಚಿ, ಸಂಪೂರ್ಣ ತೋಯಿಸಿ, ಕಡೆಗೆ ಅನಾಮತ್ತಾಗಿ ಎತ್ತಿ ಓಕುಳಿ ಹೊಂಡಕ್ಕೆ ಹಾಕಿ, ಮನುಷ್ಯರು ತಲೆ ತಗ್ಗಿಸುವಂತೆ 'ರಸಿಕತನ' ಮೆರೆಯುತ್ತಾರೆ ! ಕೆಲವು ವರ್ಷಗಳ ಹಿಂದೆ ಮಹಿಳೆಯರನ್ನು ಪೂರ್ಣ ಬೆತ್ತಲೆಗೊಳಿಸಿ, ಕೇಕೆ ಹಾಕಿ ಸಖತ್ ಮನರಂಜನೆ ನೀಡುತ್ತಿದ್ದರಂತೆ ! (ವಿವರಗಳಿಗೆ ನೋಡಿ : ಬಿ. ವಿ. ನಾಗರಾಜು ಅವರ 'ಪಾಂಚಾಲಿ' ೨೦೧೧) ಇಂಥ ಕ್ರೌರ್ಯ, ಮೃಗೀಯ ಸಂಪ್ರದಾಯ, 'ಹಿರೀಕರ ಪದ್ಧತಿ', ಮುಂತಾದುವುಗಳು ಧಾರ್ಮಿಕ-ಸಾಂಸ್ಕೃತಿಕ ಹೆಮ್ಮೆ ಎಂಬಂತಾಗಿದೆ! ಸವದತ್ತಿಯ ದೇವದಾಸಿಯರು, ಕೋಲಾರದ ಬಳಿಯ ನಾಯಕಸಾನಿಯರು, ಮಾಲೂರು-ಮುಳಬಾಗಿಲು-ಶ್ರೀನಿವಾಸಪುರ ತಾಲ್ಲೂಕುಗಳಲ್ಲಿಯ ಹನ್ನೆರಡು-ಹದಿಮೂರು ವರ್ಷಗಳ ಹೆಣ್ಣು ಮಕ್ಕಳಿಗೇ ಮದುವೆ. ಅಂದರೆ ಸಾವಿರ ಎರಡು ಸಾವಿರ ರೂಪಾಯಿಗಳಿಗೆ ಸೋಬನ ! ನಂತರ ಶೋಷಣೆ ಎಂಬ ರಕ್ಕಸ ಕುಣಿತ ! ಇವುಗಳೆಲ್ಲಾ ದಲಿತ ಕೇರಿಗಳಲ್ಲೇ ನಡೆಯುವ ಸಾಂಸ್ಕೃತಿಕ ವೈಭವಗಳು !

ಜಾತೀಯತೆ, ಅಸ್ಪೃಶ್ಯತೆ, ದೌರ್ಜನ್ಯ ಮುಂತಾದವುಗಳಿಗೇನಾದರೂ ಕಾರಣಗಳಿರಲೇ ಬೇಕಲ್ಲ! ಅವುಗಳ ನೆಲೆಯಲ್ಲಿ ಜಾತಿವಾದಿಗಳ ಪ್ರಕಾರ ದಲಿತರ ಅಪರಾಧಗಳೆಂದರೆ : ಕೆರೆ, ಬಾವಿಗಳ ನೀರು ಮುಟ್ಟುವುದು, ಸಾರ್ವಜನಿಕ ಸ್ಥಳಗಳಿಗೆ ಪ್ರವೇಶಿಸಲೆತ್ನಿಸುವುದು, ಅರಳಿಕಟ್ಟೆಯ ಮೇಲೆ ಕುಳಿತುಕೊಳ್ಳುವುದು, ವಿದ್ಯಾರ್ಥಿಗಳು ಪಾಸಾಗುವುದು, ಶುಭ್ರ ವಸ್ತ್ರ ಧರಿಸುವುದು, ಸವರ್ಣೀಯ ಬೀದಿನಾಯಿಗಳಿಗೆ ರೊಟ್ಟಿ ಚೂರು ಹಾಕುವುದು, ಗಂಡು ನಾಯಿಗಳನ್ನು ಸಾಕುವುದು, ಸತ್ತ ದನ ಹೊರದಿರುವುದು, ಮೆಟ್ಟು ಮಾಡಿಕೊಡದಿರುವುದು, ಊರ ಮುಂದಲ ಕಸ ಗುಡಿಸದಿರುವುದು, ತಮಟೆ ಹುರುಮೆ ಬಡಿಯದಿರುವುದು, ಡೊಗ್ಗುಸಲಾಮು ಹೊಡೆಯುತ್ತಾ ಹೇಳಿದ ಸೇವಾಕಾರ್ಯ ಮಾಡದಿರುವುದು... ಮುಂತಾದವು ಗಳನ್ನೆಲ್ಲಾ ಪಟ್ಟಿ ಮಾಡುವುದು ಕ್ಲಿಷೆಯಾದೀತು ! ಇಂಥವುಗಳು ಅಸ್ಪೃಶ್ಯರಿಗೆ ಮಾತ್ರ ಆಗುವ ಅವಮಾನವಲ್ಲ; ಈ ಶತಮಾನದಲ್ಲೂ ಅಂಥವುಗಳನ್ನು ಆಚರಿಸಲೆತ್ನಿಸುವ ಸ್ಪೃಶ್ಯರಿಗೇ ಆಗುವಂಥ ಅವಮಾನ ಅದು. ಯಜಮಾನ ಸಂಸ್ಕೃತಿಯ ಜನರಂತೆ ಮುಸಲ್ಮಾನರೂ, ಕ್ರೈಸ್ತರೂ ಅಸ್ಪೃಶ್ಯತೆ ಆಚರಿಸುವುದುಂಟು. ಇದಕ್ಕೆ ಅವರು ಅಸ್ಪೃಶ್ಯರಿಗಿಂತ ನಾವು ಮೇಲು ಅಂದುಕೊಂಡಿರುವುದೇ ಕಾರಣವಿರಬಹುದು !

ಅಸ್ಪೃಶ್ಯತೆ ಆಚರಿಸುವವರನ್ನು ಕುರಿತು ''ಅಸ್ಪೃಶ್ಯತೆಯನ್ನೇಕೆ ಆಚರಿಸುತ್ತೀರಿ ?'' ಎಂದು ಪ್ರಶ್ನಿಸಿದರೆ ''ಅವರು ಕೀಳುಜಾತಿಯ ಜನ, ಅದಕ್ಕೇ'' ಎನ್ನಬಹುದು. ''ಮೇಲು ಹೇಗೆ ? ಕೀಳು ಹೇಗೆ ?'' ಎಂದರೆ ''ಅವರು ಮಾಂಸ ತಿಂತಾರಲ್ಲ!'', ಎನ್ನಲೂಬಹುದು. ''ಮೇಲು ಜಾತಿಯಲ್ಲೂ ಕದ್ದೂ ಮುಚ್ಚಿ ಮಾಂಸ ತಿನ್ನುವವರಿಲ್ಲವೆ'' ಎಂದರೆ ತಬ್ಬಿಬ್ಬಾಗುವುದಂತೂ ಖಾತರಿ ! ಅಸ್ಪೃಶ್ಯತಾಚರಣೆಗೆ ಮಾಂಸಾಹಾರವೇ ಒಂದು ಮುಖ್ಯ ಕಾರಣವಲ್ಲ ಶೂದ್ರವರ್ಣದ ಹಲವು ಜಾತಿಗಳಲ್ಲಿ ವಿವಿಧ ಬಗೆಯ ಮಾಂಸಾಹಾರವನ್ನು 'ಸಖತ್ತಾಗಿ' ತಿನ್ನುವವರಿಲ್ಲವೆ ! ಇಲ್ಲಿ ಅಸ್ಪೃಶ್ಯರ ಬದುಕಿನ ಕೊಳಕಿಗಿಂತ ಸ್ಪೃಶ್ಯರ ಮಾನಸಿಕ ಕೊಳಕೇ ಮುಖ್ಯವಾದುದು.

'ಹೊಲಸು ತಿನ್ನುವವನೇ ಹೊಲೆಯ' ಎಂಬ ವಚನವೊಂದರ ವಾಕ್ಯವನ್ನು ಅತ್ಯಂತ ಸರಳೀಕರಿಸಿ 'ಹೊಲಸು' ಎಂದರೆ 'ಮಾಂಸ' ಎಂಬುದಾಗಿ ಗ್ರಹಿಸಲಾಗುತ್ತದೆ. ಆದರೆ ವಾಸ್ತವವಾಗಿ ಮಾಂಸ ಎಂಬುದು ಹೊಲಸಲ್ಲ. ಅದು ಅತ್ಯಂತ ದುಬಾರಿ ಬೆಲೆಯ ಆಹಾರ ಪದಾರ್ಥ. ಜಗತ್ತಿನ ಶೇಕಡ ತೊಂಬತ್ತೈದು ಮಂದಿಗೆ ಇಷ್ಟವಾದ ಖಾದ್ಯ. ಸ್ವಾಮಿ ವಿವೇಕಾನಂದರ ಪ್ರಕಾರ, ''ಅದು ಶ್ರಮಜೀವಿಗಳಿಗೆ ತೀರಾ ಅವಶ್ಯಕವಾದುದು.'' ದಂಗುಬಡಿಸುವಂಥ ಅದ್ಭುತಗಳನ್ನು ನಿರ್ಮಿಸಿದವರು, ನಿರ್ಮಿಸುವವರು ಶ್ರಮಜೀವಿ ಮಾಂಸಾಹಾರಿಗಳೇ. ಆ ಪೌಷ್ಟಿಕ ಆಹಾರ ಹೊಲಸು ಹೇಗಾದೀತು ?! ಒಂದು ವಚನದ ಪ್ರಕಾರ 'ಹೊಲಸು' ಎಂದರೆ ಅನ್ಯಾಯ, ಮೋಸ, ವಂಚನೆ, ಭ್ರಷ್ಟಾಚಾರ... ಮುಂತಾದುವುಗಳಿಂದ ಗಳಿಸಿದ್ದು. ಹಾಗೂ ಅಮಾಯಕ, ವಿಧವೆ, ಬಡವ, ಭಿಕ್ಷುಕ... ಮುಂತಾದವರಿಂದ ಲಪಟಾಯಿಸಿದ್ದು ! ಇನ್ನು ಭೌತಿಕವಾಗಿ ವಿಷಯದಲ್ಲಿ ಮೇಲು ಜಾತಿಯವರೆಲ್ಲಾ ಶುಚಿರ್ಭೂತರಲ್ಲ; ಕೆಳಜಾತಿಯವರೆಲ್ಲಾ ಕೊಳಕರಲ್ಲ ಕೆಳಜಾತಿಯವರು ಮಾತ್ರ ಕೊಳಕರು ಎಂಬುದು ಕೊಳಕು ಮನಸುಗಳ ಪಾರಂಪರಿಕ ಅಭಿಪ್ರಾಯ.

೧೯೯೧ರಲ್ಲಿ ಕಾವೇರಿ ನೀರಿನ ಹಂಚಿಕೆಯ ವಿಷಯಕ್ಕೆ ನಡೆದ ಗದ್ದಲದಲ್ಲಿ ತಮಿಳುನಾಡಿನ ಮೇಲಿನ ಆಕ್ರೋಶವನ್ನು ಕರ್ನಾಟಕದಲ್ಲಿ ಕೂಲಿನಾಲಿ ಮಾಡಿಕೊಂಡು ಬದುಕುತ್ತಿದ್ದ ತಮಿಳು ದಲಿತರ ಮೇಲೆ ಹಲ್ಲೆ ದೌರ್ಜನ್ಯಗಳ ಮೂಲಕ ವ್ಯಕ್ತಪಡಿಸಲಾಯಿತು ! ಎಷ್ಟೋ ಕುಟುಂಬಗಳು ದೈಹಿಕವಾಗಿಯೂ ಮಾನಸಿಕವಾಗಿಯೂ ಚಿಂದಿಯಾಗಿಹೋದವು ! ಆದರೆ ಅದೇ ಸಂದರ್ಭದಲ್ಲಿ ತಮಿಳು ಸವರ್ಣೀಯರ ಕೂದಲೂ ಕೊಂಕಲಿಲ್ಲ! ಹಿಂದೂಧರ್ಮದ ಸಾಂಪ್ರದಾಯಿಕ ಟ್ರ್ಯಾಕಿನಲ್ಲೇ ಬದುಕುವ ದಲಿತರ ಮೇಲೆ ನಡೆಯುವ ಅನ್ಯಾಯ, ಅಕ್ರಮ, ದರ್ಪ, ದೌರ್ಜನ್ಯ...ಗಳು ಕಥೆ, ಕವನ, ಕಾದಂಬರಿಗಳಿಗೆ ವೈವಿಧ್ಯ ಮಯವಾದ ವಸ್ತುವಿಷಯಗಳನ್ನು ಒದಗಿಸುವಂಥ ಪ್ರಕರಣಗಳದೇ ಒಂದು ರೋಚಕ ಪ್ರಪಂಚ !

ಬಿಹಾರದ ಬೆಲ್ಚಿ ಗ್ರಾಮದಲ್ಲಿ ಕೃಷಿ ಕೂಲಿಕಾರರು ಶ್ರಮಕ್ಕೆ ತಕ್ಕ ಕೂಲಿ ಬೇಡಿದ್ದಕ್ಕೆ ಭೂ ಮಾಲೀಕರು ಇಡೀ ಗುಡಿಸಲುಗಳ ಜೊತೆಗೆ ಅವುಗಳಲ್ಲಿದ್ದ ಹನ್ನೊಂದು ಜನರನ್ನು ಜೀವಂತ ದಹಿಸಿದರು ! ಆಂಧ್ರ ಪ್ರದೇಶದ ಕರಮಚೇಡು ಎಂಬಲ್ಲಿ ದಲಿತ ಹುಡುಗನೊಬ್ಬ ಕೆರೆಯ ಅಂಚಿನಲ್ಲಿ ಎಮ್ಮೆಯ ಮೈ ತೊಳೆದದ್ದಕ್ಕೆ ಇಡೀ ರಾತ್ರಿ ಕೇರಿಯನ್ನು ಧ್ವಂಸ ಮಾಡಲಾಯಿತು. ಕುಣಿಗಲ್ ತಾಲ್ಲೂಕಿನ ಅಮೃತೂರು ಗ್ರಾಮದ ದಲಿತರು ಊರಿನ ಜಾತ್ರೆ ಸಂದರ್ಭದಲ್ಲಿ, ''ದೇವರು ನಮ್ಮ ಕೇರಿಗೂ ಬರಲಿ, ದೇವಾಲಯ ಪ್ರವೇಶಾವಕಾಶ ನಮಗೂ ದೊರಕಲಿ'' ಎಂದುದಕ್ಕೆ ಅಪಾರ ದೌರ್ಜನ್ಯ ನಡೆದುಹೋಯಿತು. ಬಳ್ಳಾರಿಯ ಸಂಗನಕಲ್ಲು ಗ್ರಾಮದಲ್ಲಿ ದಲಿತರು ಹೋಟಲೊಂದಕ್ಕೆ ನೀರು ಕುಡಿಯಲು ಹೋದುದಕ್ಕೆ ಒಂದುನೂರ ಮುವತ್ತೈದು ಗುಡಿಸಲುಗಳು ಭಸ್ಮವಾದವು. ಕೋಲಾರದ ಮುನಿವೆಂಕಟಪ್ಪ ಎಂಬ ವಿದ್ಯಾರ್ಥಿ ಹೆಚ್ಚು ಅಂಕ ಗಳಿಸಿದ್ದಕ್ಕೆ ಅವನನ್ನು ಹೊಡೆದು ಕೊಲ್ಲಲಾಯಿತು. ಗುಂಡಪ್ಪ ಎಂಬುವವನು ಹೊರೋಳಿ ಗ್ರಾಮಪಂಚಾಯಿತಿ ಛೇರ್ಮನ್ ಆಗಿದ್ದಕ್ಕೆ ಅವನ ಕೈಕಾಲುಗಳನ್ನು ಕತ್ತರಿಸಲಾಯಿತು. ಅಂಬೇಡ್ಕರ್ ಮೆರವಣಿಗೆ ಸವರ್ಣೀಯರ ಬೀದಿಗೆ ಬರಲು ಕಾರಣನಾದ ಎಂಬ ಕಾರಣಕ್ಕೆ ತುಕಾರಾಮ ಕುಂದ್ರೆ ಎಂಬಾತನನ್ನು ಬೆಂಕಿಗೆ ಹಾಕಲಾಯಿತು ! ಜೀತದಿಂದ ಮುಕ್ತನಾದ ಎಂಬ ಕಾರಣಕ್ಕೆ ಪತ್ರೆ ಸಂಗಪ್ಪ ಎಂಬಾತನನ್ನು ಕೊಲೆ ಮಾಡಲಾಯಿತು ! ಮಹಾರಾಷ್ಟ್ರದ ಖೈರ್ಲಾಂಜಿ ಎಂಬಲ್ಲಿ ದಲಿತ ಬಾಲಕಿಯೊಬ್ಬಳು ಸೈಕಲ್ ಮೇಲೆ ಶಾಲೆಗೆ ಹೋಗುತ್ತಿದ್ದಳೆ ಎಂಬ ಕಾರಣಕ್ಕೆ ಅವಳನ್ನು ಕೊಲ್ಲಲಾಯಿತು ! ಜಾಫರ್‌ವಾಲ್ ತಾಲ್ಲೂಕಿನ ಜಗ್ವಾಲ್ ಎಂಬ ಹಳ್ಳಿಯಲ್ಲಿ ಒಂದು ಕರು ಬಾವಿಗೆ ಬಿದ್ದಿತು. ತಕ್ಷಣ ಅಸ್ಪೃಶ್ಯ ಜಾತಿಯ ರಾಮ್‌ಮಹಾಶಯ ಎಂಬುವವನು ಬಾವಿಗೆ ಜಿಗಿದು ಅದನ್ನು ರಕ್ಷಿಸಿದನು. ಆದರೂ ಬಾವಿಯನ್ನು ಅಪವಿತ್ರಗೊಳಿಸಿದನೆಂದು ಅವನನ್ನು ಚೆನ್ನಾಗಿ ಥಳಿಸಲಾಯಿತು. ಕಲ್ಲಿಕೋಟೆ ಬಳಿಯ ಕಾಲಡಿ ಎಂಬ ಹಳ್ಳಿಯಲ್ಲಿ ಮಗುವೊಂದು ಬಾವಿಗೆ ಜಾರಿತು. ಹತ್ತಿರದಲ್ಲಿದ್ದವರಾರೂ ಅದನ್ನು ಬದುಕಿಸುವ ಸಾಹಸಕ್ಕೆ ಮುನ್ನುಗ್ಗಲಿಲ್ಲ. ಅದನ್ನು ಕಂಡ ವ್ಯಕ್ತಿಯೊಬ್ಬ ಬಾವಿಗೆ ಧುಮುಕಿ ಮಗುವನ್ನು ಬದುಕಿಸಿದ. ಆ ವ್ಯಕ್ತಿ ಅಸ್ಪೃಶ್ಯ ಎಂಬುದು ತಿಳಿದಾಗ ಇನ್ನಿತರರು ವಾಚಾಮಗೋಚರ ಬೈದು ಚೆನ್ನಾಗಿ ಥಳಿಸಿದರು. ನಾಸಿಕ್‌ನಲ್ಲಿ ಅಭೂತ್ ಎಂಬ ಅಸ್ಪೃಶ್ಯ ಕುಟುಂಬವೊಂದರ ಮೇಲೆ ಹಲ್ಲೆ ನಡೆಸಿ, ವೃದ್ಧೆಯೊಬ್ಬಳ ಕೈಕಾಲು ಕಟ್ಟಿ ಬೆಂಕಿಗೆ ಹಾಕಿದರು. ಇದಕ್ಕೆ ಕಾರಣ ಹಳ್ಳಿಯಲ್ಲಿ ತಲೆದೋರಿದ್ದ ಯಾವುದೋ ಒಂದು ಕಾಯಿಲೆಗೆ ಇವಳೇ ಕಾರಣ ಎಂಬ ಗುಮಾನಿಯಾಗಿತ್ತು.

ಉತ್ತರ ಪ್ರದೇಶದ ಕೆಲವು ಹಳ್ಳಿಗಳಲ್ಲಿ ಅಸ್ಪೃಶ್ಯರಿಗೆ ಕೊಡಲಾಗುವ ಕೂಲಿ ರೂಪದ ದವಸಕ್ಕೆ 'ಗೋಬರಾಹ ' ಎನ್ನುತ್ತಾರೆ. ಸುಗ್ಗಿಯ ಕಾಲದಲ್ಲಿ ದವಸಗಳನ್ನು ತಿಂದ ದನಗಳು ಹಾಕುವ ಸಗಣಿಯಲ್ಲಿ ಕಾಳುಗಳು ಹಾಗೆಯೇ ಇರುತ್ತವೆ. ಸಗಣಿಯಿಂದ ಬೇರ್ಪಡಿಸುವ ಆ ಕಾಳುಗಳೇ ಗೋಬರಾಹ ! (ಸಂಗ್ರಹ ವಿವಿಧ ಮೂಲಗಳಿಂದ).

ಸವರ್ಣೀಯ ವ್ಯಕ್ತಿ ಅನಕ್ಷರಸ್ಥನೇ ಆಗಿರಲಿ ಅರೆಹುಚ್ಚನೇ ಆಗಿರಲಿ ದಲಿತರ ಎದುರು ಮಾತ್ರ ದರ್ಪವೋ ದರ್ಪ ! ದಲಿತ ವ್ಯಕ್ತಿ ಎಂಥ ವಿದ್ಯಾವಂತನಾಗಿರಲಿ, ನಾಗರಿಕನಾಗಿರಲಿ ಸವರ್ಣೀಯರ ಎದುರು ತಗ್ಗಿಬಗ್ಗಿಯೇ ನಡೆಯಬೇಕು; ಇನ್ನಿತರ ದಲಿತರಂತೆಯೇ ವರ್ತಿಸಬೇಕು ! ಕೆಲವು ಬಾರಿ ಸ್ವಲ್ಪ ರಿಯಾಯಿತಿ ಸಿಕ್ಕರೂ ಸಿಗಬಹುದು ! ಅದೇ ಒಂದು ವಿಶೇಷ !

* * *

ಗೌಡರು ಕರಿಯನನ್ನು 'ಕರಿಯಪ್ಪಾ ' ಎಂದುಬಿಟ್ಟರೆ ಕರಿಯ ಉಬ್ಬಿಹೋಗುತ್ತಾನೆ; ಕರಗಿ ನೀರಾಗುತ್ತಾನೆ; ಕೃತಜ್ಞತೆಯಿಂದ ಭಾರವಾಗುತ್ತಾನೆ; ಬಂಡಿಗಟ್ಟಲೆ ಸೌದೆ ಒಡೆದುಕೊಟ್ಟು ಬೆವರು ಒರೆಸಿಕೊಳ್ಳುತ್ತಾನೆ... ಗೌಡತಿ ಮಾಳಿಯನ್ನು 'ಮಾಳವ್ವಾ' ಎಂದುಬಿಟ್ಟರೆ ಮಾಳಿ ಸಮ್ಮೋಹಿನಿಗೆ ಒಳಗಾಗಿಬಿಡುತ್ತಾಳೆ; ಧನ್ಯತೆಯ ಸುಖ ಅನುಭವಿಸುತ್ತಾಳೆ; ರಾಶಿಗಟ್ಟಲೆ ದವಸ ಧಾನ್ಯಗಳನ್ನು ಮಾಡಿಕೊಟ್ಟು ನಿಟ್ಟುಸಿರುಬಿಡುತ್ತಾಳೆ !

ದಲಿತರ ಸ್ಥಿತಿ ಯಾವ ಕಾಲದಲ್ಲೂ ಬದಲಾಗಲಿಲ್ಲ. ಬದಲಾಗುವಂತೆಯೂ ತೋರುವುದಿಲ್ಲ. ಕರಿಯ-ಮಾಳಿಯರು ಕೃತಜ್ಞತೆಗೆ ಕಟ್ಟುಬಿದ್ದು ಬದುಕುತ್ತಿದ್ದಾರೆ. ಕೃತಘ್ನರ ಹಿಡಿತದಲ್ಲೇ ಉಸಿರಾಡುತ್ತಿದ್ದಾರೆ.

ಎಸ್. ಆರ್. ಗುರುನಾಥ್
೧೧ನೇ ತಿರುವು, ಐಯುಡಿಪಿ ಬಡಾವಣೆ, ಚಿತ್ರದುರ್ಗ - ೫೭೭ ೫೦೧



# ಭಯೋತ್ಪಾದನೆ ವಿರುದ್ಧ ಅಮೆರಿಕದ ಸಮರ-ಸಾಧನೆಗಿಂತ ಬವಣೆಯೇ ಹೆಚ್ಚು

ಭಯೋತ್ಪಾದನೆಯ ವಿರುದ್ಧ ಅಮೆರಿಕ ಸಮರ ಸಾರಿ ಹತ್ತು ವರ್ಷ. ಈ ಅವಧಿ ಸಾಕಷ್ಟು ದೊಡ್ಡ ಸಂಖ್ಯೆಯಲ್ಲಿ ಸಾವು ನೋವುಗಳನ್ನು, ಕಷ್ಟ-ನಷ್ಟಗಳನ್ನು ತಂದಿದೆಯಷ್ಟೇ ಹೊರತು ಪ್ರಪಂಚದಲ್ಲಿ ಭಯೋತ್ಪಾದನೆಯ ವಿಪತ್ತು ಮಾತ್ರ ಕಡಿಮೆ ಏನಾಗಿಲ್ಲ. ಅಮೆರಿಕದ ಜನ ಈಗಲೂ ಕೂಡ ಭಯೋತ್ಪಾದಕರ ದಾಳಿಯ ಭೀತಿಯಲ್ಲೇ ಇದ್ದಾರೆ. ಆರ್ಥಿಕ ಬಿಕ್ಕಟ್ಟು ಮತ್ತು ನಿರುದ್ಯೋಗದ ಆತಂಕದ ನಡುವೆಯೇ ಸೆಪ್ಟೆಂಬರ್ ೧೧ರಂದು ನ್ಯೂಯಾರ್ಕ್ ನಗರದಲ್ಲಿ ವರ್ಲ್ಡ್ ಟ್ರೇಡ್ ಸೆಂಟರ್‌ನ ಮೇಲೆ ಜರುಗಿದ ಭಯೋತ್ಪಾದಕರ ದಾಳಿಯ ಹತ್ತನೇ ವರ್ಷ ಆಚರಿಸಲಾಯಿತು. ಈ ಸಂದರ್ಭದಲ್ಲಿ ದೇಶಾದ್ಯಂತ ಕೈಗೊಂಡ ಭದ್ರತಾ ವ್ಯವಸ್ಥೆ ಅಮೆರಿಕವನ್ನು ಆವರಿಸಿರುವ ಭೀತಿ ಎಷ್ಟು ಎನ್ನುವುದನ್ನು ಎತ್ತಿ ತೋರಿಸುತ್ತಿತ್ತು. ವಿಮಾನ ನಿಲ್ದಾಣಗಳಲ್ಲಂತೂ ಎಲ್ಲಿಲ್ಲದ ಬಿಗಿಭದ್ರತೆ, ಕೂದಲಿಗೆ ಸಿಕ್ಕಿಸಿಕೊಳ್ಳುವ ಪಿನ್ ಕೂಡ ತಪಾಸಣೆಗೊಳಪಟ್ಟಿತ್ತು. ಹತ್ತನೇ ವರ್ಷದ ಆಚರಣೆಯ ದಿನ ಘಟನೆ ಸಂಭವಿಸಿದ ಸ್ಥಳದಲ್ಲಿ ನಿರ್ಮಿಸಿರುವ ಸ್ಮಾರಕವನ್ನು ಅನಾವರಣಗೊಳಿಸಲಾಯಿತು. ಭಾಷಣಗಳಲ್ಲಿ ಮಾಮೂಲಿನಂತೆ ಭಯೋತ್ಪಾದನೆ ಮೂಲೋತ್ಪಾಟನೆಯ ಮಂತ್ರ ಜಪಿಸಲಾಯಿತು. ಸಮರ ಸಾರಿದ ಮಾಜಿ ಅಧ್ಯಕ್ಷ ಜಾರ್ಜ್ ಬುಷ್, ಅದನ್ನು ಮುಂದುವರಿಸಿಕೊಂಡು ಹೋಗುತ್ತಿರುವ ಅಧ್ಯಕ್ಷ ಒಬಾಮಾ ಸಮಾರಂಭದಲ್ಲಿ ಭಾಗಿಗಳು. ಆರ್ಥಿಕ ಸಂಕಷ್ಟಕ್ಕೆ ಪರಿಹಾರ ಕಾಣದೆ ಪರಿತಪಿಸುತ್ತಿರುವ ಅಮೆರಿಕದ ಆಡಳಿತೆ ಭಯೋತ್ಪಾದನೆಯ ವಿರುದ್ಧ ಸಮರದ ಭಾಗವಾಗಿ ದುರಾಕ್ರಮಣ ನಡೆಸಿದ ಆಫ್ಘಾನಿಸ್ತಾನ ಮತ್ತು ಇರಾಕಿನಿಂದ ಬಿಡಿಸಿಕೊಳ್ಳಲಾರದೆ ತೊಳಲುತ್ತಿದೆ. ಈ ಸಮರ ಇನ್ನೆಷ್ಟು ಜೀವಗಳನ್ನು ಆಹುತಿ ತೆಗೆದುಕೊಳ್ಳುವುದೋ!

ನ್ಯೂಯಾರ್ಕ್‌ನ ಮೇಲೆ ಜರುಗಿದ ದಾಳಿಯಲ್ಲಿ ಸತ್ತವರ ಸಂಖ್ಯೆ ಮೂರು ಸಾವಿರಕ್ಕೂ ಹೆಚ್ಚು. ಇದಕ್ಕೆ ಪ್ರತಿಯಾಗಿ ಅಮೆರಿಕ ಸಾರಿದ ಸಮರದಲ್ಲಿ ಮಡಿದವರ ಸಂಖ್ಯೆ ಹಲವು ಲಕ್ಷ. ಆಫ್ಘಾನಿಸ್ತಾನ ಮತ್ತು ಇರಾಕಿನ ದುರಾಕ್ರಮಣದಲ್ಲಿ ಮಡಿದ ನಾಗರಿಕರ ಸಂಖ್ಯೆ ಹತ್ತು ಲಕ್ಷಕ್ಕೂ ಹೆಚ್ಚು; ಎಲ್ಲವನ್ನೂ ಕಳೆದುಕೊಂಡು ನಿರಾಶ್ರಿತರಾಗಿರುವವರ ಸಂಖ್ಯೆ ಇಪ್ಪತ್ತು ಲಕ್ಷವನ್ನು ಮೀರಿದೆ. ಇದುವರೆಗೆ ಸಾವಿಗೀಡಾಗಿರುವ ಅಮೆರಿಕನ್ ಯೋಧರ ಸಂಖ್ಯೆ ೭,೫೦೦. ಇದರಲ್ಲಿ ಅಮೆರಿಕ ಪಾಕಿಸ್ತಾನದಲ್ಲಿ ಅಡಗಿರುವ ಅಲ್‌ಖೈದಾ ಭಯೋತ್ಪಾದಕರ ಮೇಲೆ ನಡೆಸುತ್ತಿರುವ 'ಡ್ರೋನ್' ದಾಳಿಯಲ್ಲಿ ಮಡಿದ ನಾಗರಿಕರ ಮತ್ತು ಇತರ ಕಡೆಗಳಲ್ಲಿ ಮಡಿದವರ ಸಂಖ್ಯೆ ಸೇರಿಲ್ಲ. ಅಮೆರಿಕದ ಭಯೋತ್ಪಾದನೆಯ ವಿರುದ್ಧ ಸಮರ ಇಂದು ಸೊಮಾಲಿಯ, ಪಾಕಿಸ್ತಾನ, ಯೆಮೆನ್‌ಗಳಿಗೂ ವ್ಯಾಪಿಸಿದೆ. ಕಾಂಗ್ರೆಸ್ ಸದನದ ಅನುಮತಿ ಇಲ್ಲದೆಯೇ ಅಮೆರಿಕ ಲಿಬಿಯಾದ ಮೇಲೆ ಬಾಂಬು ದಾಳಿ ನಡೆಸುತ್ತಿದೆ. ಈಗಲೂ ಆಫ್ಘಾನಿಸ್ತಾನದಲ್ಲಿ ೧೦೦,೦೦೦ ಮಂದಿ ಅಮೆರಿಕನ್ ಸೈನಿಕರಿದ್ದಾರೆ, ಹೆಚ್ಚು ಕಡಿಮೆ ಅಷ್ಟೇ ಸಂಖ್ಯೆಯಲ್ಲಿ ಇರಾಕಿನಲ್ಲೂ ಇದ್ದಾರೆ. ವಾಷಿಂಗ್ಟನ್‌ನ ಈ ದುಸ್ಸಾಹಸಕ್ಕೆ ಅಮೆರಿಕದ ನಾಗರಿಕರ ಬೆಂಬಲ ಎಷ್ಟು? ಇತ್ತೀಚೆಗೆ ಸಂಶೋಧನಾ ಕೇಂದ್ರವೊಂದು ನಡೆಸಿದ ಸಮೀಕ್ಷೆಯ ಪ್ರಕಾರ ಶೇಕಡ ೨೫ರಷ್ಟು ಮಾತ್ರ ಆಡಳಿತದ ನೀತಿಗಳಿಗೆ ಬೆಂಬಲ ವ್ಯಕ್ತಪಡಿಸಿದ್ದಾರೆ. ಬಹುತೇಕ ನಾಗರಿಕರು ಭಯೋತ್ಪಾದನೆ ವಿರುದ್ಧ ಸಮರ ಸಾರಿದ ಮೇಲೆ ತಮ್ಮ ವೈಯ್ಯಕ್ತಿಕ ಸ್ವಾತಂತ್ರ್ಯ ಮೊಟಕಾಗಿದೆ ಎಂದು ಭಾವಿಸುತ್ತಾರೆ. ಅಮೆರಿಕದ ಮಟ್ಟಿಗೆ ಇದು ಮುಗಿಯದ ಯುದ್ಧ.

ಈ ಯುದ್ಧಗಳು ಅಮೆರಿಕದ ಆರ್ಥಿಕತೆಗೆ ದೊಡ್ಡ ಹೊರೆಯಾಗಿದೆ, ಅದೂ ಆರ್ಥಿಕ ಬಿಕ್ಕಟ್ಟು ಎದುರಿಸುತ್ತಿರುವ ಹಿನ್ನೆಲೆಯಲ್ಲಿ. ಆಫ್ಘಾನಿಸ್ತಾನ ಮತ್ತು ಇರಾಕ್ ಯುದ್ಧಗಳ ವೆಚ್ಚ ಇದುವರೆಗೆ ಐದು ಟ್ರಿಲಿಯನ್ ಡಾಲರುಗಳು ಎಂದು ಅಂದಾಜು ಮಾಡಲಾಗಿದೆ. (ಒಂದು ಟ್ರಿಲಿಯನ್ ಎಂದರೆ ಒಂದು ಲಕ್ಷ ಕೋಟಿ). ಕಳೆದ ಹತ್ತು ವರ್ಷಗಳಲ್ಲಿ ಮಧ್ಯಪ್ರಾಚ್ಯದಲ್ಲಿ ಅಮೆರಿಕ ನಡೆಸಿರುವ ದಾಂಧಲೆಯಿಂದಾಗಿ ತೈಲದ ಬೆಲೆ ಒಂದು ಬ್ಯಾರೆಲ್‌ಗೆ ೨೫ ಡಾಲರುಗಳಿದ್ದುದು ೧೪೦ ಡಾಲರುಗಳಿಗೇರಿದೆ. ಈ ಏರಿಕೆ ಅಮೆರಿಕವನ್ನಷ್ಟೇ ಅಲ್ಲದೆ ಪ್ರಪಂಚದ ಎಲ್ಲ ದೇಶಗಳನ್ನೂ ಬಾಧಿಸುತ್ತಿದೆ. ಬಡದೇಶಗಳ ಆರ್ಥಿಕತೆಗೆ ಭಾರಿ ಹೊಡೆತವಾಗಿದೆ. ಅಮೆರಿಕವನ್ನೂ ಒಳಗೊಂಡಂತೆ ಎಲ್ಲೆಡೆಗಳಲ್ಲೂ ಬಡಜನರ ಸಂಖ್ಯೆ ಹೆಚ್ಚಾಗಿದೆ. ವರಮಾನದಲ್ಲಿ ಅಂತರ ವಿಪರೀತವಾಗಿ ಹೆಚ್ಚಾಗಿದೆ. ಅಮೆರಿಕ ಸರಕಾರ ಈಚೆಗೆ ಪ್ರಕಟಿಸಿರುವ ಅಂಕಿ-ಅಂಶಗಳ ಪ್ರಕಾರ ಪ್ರತಿ ಆರು ಮಂದಿ ಅಮೆರಿಕನ್ ನಾಗರಿಕರಲ್ಲಿ ಒಬ್ಬ ಬಡತನದ ರೇಖೆಗಿಂತ ಕಡಿಮೆ ಆದಾಯದಲ್ಲಿ ಜೀವಿಸುತ್ತಿದ್ದಾನೆ.

ಭಯೋತ್ಪಾದನೆಯ ವಿರುದ್ಧ ಸಮರ ಮುಂದುವರಿದಿದೆ. ಇರಾಕ್ ಮತ್ತು ಆಫ್ಘಾನಿಸ್ತಾನಗಳಲ್ಲಿ ಹೆಚ್ಚು ಕಡಿಮೆ ದಿನನಿತ್ಯ ಭಯೋತ್ಪಾದಕರಿಂದ ದಾಳಿ ನಡೆಯುತ್ತಿದೆ. ಪಾಕಿಸ್ತಾನವೂ ಇದರಿಂದ ಮುಕ್ತವಾಗಿಲ್ಲ. ತಾಲಿಬಾನ್ ಅನುಯಾಯಿಗಳು ಆಫ್ಘಾನಿಸ್ತಾನವನ್ನು ಸುತ್ತುವರಿದಿದ್ದಾರೆ ಎನ್ನಬಹುದು. ಕಾಬೂಲಿನಾಚೆಗೆ ಕರ್ಜಾಯ್ ಸರಕಾರದ ಹುಕುಮ್ ಜಾರಿಯಾಗುತ್ತಿಲ್ಲ. ಇತ್ತೀಚೆಗೆ ಸಂಭವಿಸಿದ ಆಫ್ಘಾನಿಸ್ತಾನದ ಮಾಜಿ ಅಧ್ಯಕ್ಷ ರಬ್ಬಾನಿ ಕೊಲೆ ತಾಲಿಬಾನ್ ಶಕ್ತಿಗೆ ಸಾಕ್ಷಿ. ಅಮೆರಿಕದ ಏಕೈಕ ಸಾಧನೆ ಎಂದರೆ ಅಲ್‌ಖೈದಾ ರೂವಾರಿ ಒಸಾಮಾ ಬಿನ್ ಲಾಡೆನ್ ಹತ್ಯೆ.

# ಅಮೆರಿಕ-ಪಾಕಿಸ್ತಾನ ಸಂಬಂಧಗಳ ಬಗ್ಗೆ ಭ್ರಮೆ ಬೇಡ

ಈಚೆಗೆ ಕೆಲ ತಿಂಗಳಿಂದ ಪಾಕಿಸ್ತಾನ - ಅಮೆರಿಕ ನಡುವಣ ಸಂಬಂಧಗಳ ಕುರಿತು ವರದಿಗಳಲ್ಲಿ ಊಹಾಪೋಹಗಳು ಎದ್ದು ಕಾಣುತ್ತವೆ. ಕೆಲವು ವ್ಯಾಖ್ಯಾನಕಾರರಂತೂ ಇನ್ನೇನು ಸಂಬಂಧಗಳು ಮುರಿದುಬೀಳುತ್ತವೆ, ಅಮೆರಿಕದೊಂದಿಗೆ ಸಂಬಂಧಗಳನ್ನು ಬೆಸೆಯಲು ಭಾರತಕ್ಕೆ ಇದು ಸದವಕಾಶ ಎನ್ನುವಷ್ಟು ದೂರ ಹೋಗಿದ್ದರು. ಭಯೋತ್ಪಾದಕರ ನೆಲೆಗಳ ಮೇಲೆ ಪಾಕಿಸ್ತಾನ ಸಮರ್ಪಕವಾದ ಕ್ರಮ ತೆಗೆದುಕೊಳ್ಳುತ್ತಿಲ್ಲ ಎಂದು ಅಮೆರಿಕದ ಆಡಳಿತಗಾರರು ಅತೃಪ್ತಿಯನ್ನು, ಆಕ್ರೋಶವನ್ನು ವ್ಯಕ್ತಗೊಳಿಸಿದ್ದಾರೆ. ಪಾಕಿಸ್ತಾನದ ಗೂಢಚರ್ಯೆ ಸಂಸ್ಥೆ ಐಎಸ್‌ಐ ತಾಲಿಬಾನ್‌ಗಳೊಂದಿಗೆ ಹೊಂದಿರುವ ಸಂಬಂಧವನ್ನು ಅವರು ಬಹಿರಂಗವಾಗಿಯೇ ಕಟುವಾಗಿ ಟೀಕಿಸಿದ್ದಾರೆ. ನೇರವಾಗಿಯೇ ಪಾಕಿಸ್ತಾನ ಸರಕಾರಕ್ಕೆ ಅಮೆರಿಕ ಅಧ್ಯಕ್ಷರನ್ನೂ ಒಳಗೊಂಡು ಅಧಿಕಾರಿಗಳು ಎಚ್ಚರಿಕೆ ನೀಡಿದ್ದಾರೆ; ತಾವೇ ಕ್ರಮ ಕೈಗೊಳ್ಳುವ ಬೆದರಿಕೆ ಹಾಕಿದ್ದಾರೆ. ಆಫ್ಘಾನಿಸ್ತಾನದ ಮಾಜಿ ಅಧ್ಯಕ್ಷ ರಬ್ಬಾನಿ ಹತ್ಯೆಯಲ್ಲಿ ಐಎಸ್‌ಐ ಕೈವಾಡ ಇರುವುದನ್ನು ಶಂಕಿಸಲಾಗಿದೆ. ಎರಡೂ ದೇಶಗಳ ನಾಯಕರ ನಡುವೆ ಮಾತಿನ ಚಕಮಕಿ ನಡೆದಿದೆ.

ಈ ಎರಡೂ ದೇಶಗಳ ಸಂಬಂಧಗಳಲ್ಲಿ ಇಂಥ ಪ್ರಕರಣಗಳು ಬೇಕಾದಷ್ಟಾಗಿವೆ. ಪಾಕಿಸ್ತಾನ ಸರಕಾರ ಒತ್ತಡಕ್ಕೆ ಮಣಿದು ಅರೆಮನಸ್ಸಿನಿಂದ ಕೆಲವು ಕ್ರಮಗಳನ್ನು ಕೈಗೊಂಡು ಅಮೆರಿಕಾಗೆ ಸಮಜಾಯಿಷಿ ನೀಡುತ್ತದೆ. ಈಗಲೂ ಅಷ್ಟೆ: ಹಖಾನಿ ಭಯೋತ್ಪಾದಕ ಸಂಘಟನೆಯ ವಿರುದ್ಧ ಕಾರ್ಯಾಚರಣೆ ನಡೆಸಲು ಪಾಕಿಸ್ತಾನ ಸರಕಾರ ಮುಂದಾಗಿದೆ. ಆದರೆ ಉತ್ತರ ವಜೀರಿಸ್ತಾನದಲ್ಲಿರುವ ತಾಲಿಬಾನ್ ಉಗ್ರರ ನೆಲೆಯ ಮೇಲೆ ಕ್ರಮ ಕೈಗೊಳ್ಳಲು ಆಸಕ್ತಿ ವಹಿಸಿಲ್ಲ. ಪಾಕಿಸ್ತಾನದ ಸೇನಾಧಿಕಾರಿಗಳು ತಾಲಿಬಾನ್‌ಗಳ ಮೇಲೆ ಕ್ರಮ ಕೈಗೊಳ್ಳಲು ಹಿಂದೇಟು ಹಾಕುತ್ತಿದ್ದಾರೆ. ಬಲಪ್ರಯೋಗಕ್ಕಿಂತ ಉಗ್ರರ ಜೊತೆ ಸಂಧಾನ ನಡೆಸುವುದಕ್ಕೆ ಹೆಚ್ಚು ಆಸಕ್ತಿ ತೋರಿದ್ದಾರೆ. ಆದರೆ ಅಮೆರಿಕ ಮಾತ್ರ ಉಗ್ರರ ತಾಣಗಳ ಮೇಲೆ ಡ್ರೋನ್ ದಾಳಿ ಮುಂದುವರಿಸಿ ಪಾಕಿಸ್ತಾನ ಸರಕಾರಕ್ಕೆ ಕಿರಿಕಿರಿ ಉಂಟುಮಾಡುತ್ತಿದೆ. ಈ ದಾಳಿಯಲ್ಲಿ ಉಗ್ರರಿಗಿಂತ ಹೆಚ್ಚು ಸಾವಿಗೀಡಾಗುತ್ತಿರುವವರು ನಾಗರಿಕರು. ಇಷ್ಟೆಲ್ಲ ಅವಾಂತರಗಳಿದ್ದರೂ ಪಾಕಿಸ್ತಾನ ಮತ್ತು ಅಮೆರಿಕ ಸಂಬಂಧಗಳು ಮುಂದುವರಿಯುತ್ತಿವೆ. ಏಕೆಂದರೆ ಈ ಭೂಭಾಗದಲ್ಲಿ, ಎಂದರೆ ಭಾರತ ಉಪಖಂಡದಲ್ಲಿ ಪಾಕಿಸ್ತಾನ ಅಮೆರಿಕಾಗೆ ನಿಷ್ಠಾವಂತ ಮಿತ್ರನಾಗಿದೆ. ಪಾಕಿಸ್ತಾನ ಉದಯವಾದಾಗಿನಿಂದ ಈ ಆಯಕಟ್ಟಿನ ಪ್ರದೇಶದಲ್ಲಿ ಅಮೆರಿಕಾಗೆ ಭದ್ರನೆಲೆ ಒದಗಿಸಿರುವುದು ಪಾಕಿಸ್ತಾನ. ಪಾಕಿಸ್ತಾನಕ್ಕೆ ಅಮೆರಿಕದ ನೆರವಿಲ್ಲದೆ ಉಳಿಗಾಲವಿಲ್ಲ, ಹಾಗಾಗಿ ಸಂಬಂಧಗಳು ಭದ್ರ. ಪಾಕಿಸ್ತಾನದಲ್ಲಿ ಅಮೆರಿಕ ಸೈನಿಕ ನೆಲೆ ಹೊಂದಿರುವುದನ್ನು ಮರೆಯುವಂತಿಲ್ಲ. ಸೋವಿಯತ್ ಒಕ್ಕೂಟ ಮತ್ತು ಚೀಣಾಗಳ ಮೇಲೆ ನಿಗಾ ಇರಿಸಲು ಪಾಕಿಸ್ತಾನ ಪ್ರಶಸ್ತವಾದ ನೆಲೆ ಅಮೆರಿಕಾಗೆ. ಇಂದಿನ ಸಂಕೀರ್ಣ ಪರಿಸ್ಥಿತಿಯಲ್ಲಿ, ಅದರಲ್ಲೂ ಆಫ್ಘಾನಿಸ್ತಾನದ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಪಾಕಿಸ್ತಾನದ ಮೈತ್ರಿ ಅಮೆರಿಕಾಗೆ ಅತ್ಯಗತ್ಯ. ಯಾವುದೇ ಬಗೆಯಲ್ಲಿಯೂ ಅಮೆರಿಕ ಈ ಸಂಬಂಧವನ್ನು ಶಿಥಿಲಗೊಳಿಸುವುದಿಲ್ಲ. ಪಾಕಿಸ್ತಾನ ಅಮೆರಿಕಾಗೆ ಎಷ್ಟು ಅಗತ್ಯ ಎಂದರೆ, ಹೆಚ್ಚು ಕಡಿಮೆ ಆದರೆ ಅಮೆರಿಕ ಅದನ್ನು ಆಕ್ರಮಿಸಿಕೊಳ್ಳಲೂ ಹೇಸುವುದಿಲ್ಲ. ಹಾಗಾಗಿ ಈ ಎರಡೂ ದೇಶಗಳ ಸಂಬಂಧಗಳ ಬಗ್ಗೆ ಯಾವುದೇ ಭ್ರಮೆ ಸರಿಯಾಗದು.

# ಜನಪರ ಕಾಳಜಿಯ ಸಭ್ಯ ರಾಜಕಾರಣಿ ಶ್ರೀ. ಕೆ. ಎಚ್. ರಂಗನಾಥ್



ಆರಂಭದಿಂದಲೂ 'ಹೊಸತು' ಓದುಗರಾಗಿದ್ದ ಮಾನ್ಯ ಶ್ರೀ. ಕೆ. ಎಚ್. ರಂಗನಾಥ್ ಇದೇ ೧೮ರಂದು ನಿಧನರಾದರು. ಅನೇಕ ರೀತಿಗಳಲ್ಲಿ ಅವರು ಪತ್ರಿಕೆಗೆ ಬೆಂಬಲ ನೀಡಿದ್ದಲ್ಲದೆ ಬೇರೆ ಕೆಲವರಿಂದಲೂ ಬೆಂಬಲ ದೊರಕಿಸಿಕೊಟ್ಟವರು ಅವರು. ವೈಚಾರಿಕತೆ ಮತ್ತು ಪ್ರಗತಿಪರ ಚಿಂತನೆಗೆ ಹೆಸರಾಗಿದ್ದ ಶ್ರೀಯುತರು ಸಮಾಜವಾದಿ ಹಿನ್ನೆಲೆ ಹೊಂದಿದ್ದವರು ಮತ್ತು ಬೇರೆ ಅವರ ಕೆಲವು ಸ್ನೇಹಿತರು ಸಮಾಜವಾದಕ್ಕೆ ವಿಮುಖರಾದಂತೆ ಇವರು ವಿಮುಖರಾಗಲಿಲ್ಲ. ವಿದ್ವತ್ತು ಮತ್ತು ವಿನಯ ಎರಡೂ ಅವರಲ್ಲಿ ಮೇಳೈಸಿದ್ದವು. ಅವರಿಗೆ 'ಹೊಸತು' ಗೌರವಪೂರ್ವಕ ನಮನ ಸಲ್ಲಿಸುತ್ತದೆ.

**ಜಿ. ರಾಮಕೃಷ್ಣ**

ಕರ್ನಾಟಕದ ಶಾಸನ ಸಭೆಯಲ್ಲಿ ಬಿರುಸಿನ ಚರ್ಚೆಯ ನಡುವೆ ಆಗ್ಗೆ ವಿರೋಧ ಪಕ್ಷದ ನಾಯಕರಾಗಿದ್ದವರೊಬ್ಬರು ಸಿಟ್ಟಿನಿಂದ ಹೇಳಿದರಂತೆ : ''ಏನೆಂದುಕೊಂಡಿದ್ದೀರಿ ನಾನೆಂದರೆ ? ನಾನೊಬ್ಬ ಇಂಜಿನಿಯರ್. ಹಲವು ವರ್ಷಗಳ ಕಾಲ ನಾನು ಆ ವೃತ್ತಿಯಲ್ಲಿ ಪಳಗಿದ್ದೇನೆ, ಗೊತ್ತೆ?'' ಸದನದಲ್ಲಿದ್ದ ಕಮ್ಯುನಿಸ್ಟ್ ಪಕ್ಷದ ಶಾಸಕ ಶ್ರೀ. ಎಂ. ಎಸ್. ಕೃಷ್ಣನ್ ಒಗ್ಗರಣೆ ಹಾಕಿದರಂತೆ : ''ಹೌದು, ಅವರು ಹೇಳುವುದು ನಿಜ. ಅವರು ಇಂಜಿನಿಯರ್ ಹೌದು, ಆದರೆ ಅರೆಬೆಂದ ಇಂಜಿನಿಯರ್, ಅಷ್ಟೆ.''

ಈ ಪ್ರಸಂಗವನ್ನು ಶ್ರೀ. ಕೆ. ಎಚ್. ರಂಗನಾಥ್ ಅವರಿಂದ ಅನೇಕ ಬಾರಿ ಕೇಳಿದ್ದೇನೆ. ಕೃಷ್ಣನ್ ಅವರ ಹರಿತವಾದ, ಆದರೆ ಹಾಸ್ಯಭರಿತವಾದ ಮಾತುಗಳನ್ನು ಶ್ಲಾಘಿಸಲು ಇದನ್ನು ಹೇಳುವಾಗ ರಂಗನಾಥ್ ಅವರಿಗೆ ಆಶ್ಚರ್ಯವೆನಿಸುವುದು ವಿರೋಧ ಪಕ್ಷದ ನಾಯಕರಿಗೆ ಕೃಷ್ಣನ್ ಇಂಗ್ಲಿಷ್‌ನಲ್ಲಿ ಹೇಳಿದ ''ಹಾಫ್ ಬೇಕ್ಡ್ ಇಂಜಿನಿಯರ್'' ಎಂಬುದರ ವ್ಯಂಗ್ಯ ತಿಳಿಯಲಿಲ್ಲವಲ್ಲಾ, ಎಂಬುದು. ಕೆಲವೊಮ್ಮೆ ಕಠಿಣವೆನಿಸಬಹುದಾದ ಮಾತುಗಳನ್ನಾಡುತ್ತಿದ್ದರಾದರೂ ರಂಗನಾಥ್ ಸ್ನೇಹಪ್ರಿಯರು, ತತ್ವಬದ್ಧರು ಹಾಗೂ ನಿಷ್ಠಾವಂತರು. ಇಂಥವರನ್ನು ಮಂಗಳೂರಿನ ಬಳಿ ಹಲವು ವರ್ಷಗಳ ಹಿಂದೆ ಮುಗಿಸಿಬಿಡುವ ಹುನ್ನಾರವೊಂದು ಬಯಲಾಗಿತ್ತು. ಇವರು ಕಾರಿನಲ್ಲಿ ಹೋಗುವಾಗ ಒಂದು ಸೇತುವೆಯಡಿ ಹಾದುಹೋಗುವುದಿತ್ತು. ಹಾಗೆ ಹೋಗುತ್ತಿದ್ದಾಗ ಯಾರೋ ಮೇಲಿನಿಂದ ಇವರ ವಾಹನದ ಮೇಲೆ ಒಂದು ಬಂಡೆಯನ್ನುರುಳಿಸಿದ್ದರು. ಗುರಿ ತಪ್ಪಿದ್ದರಿಂದ ವಾಹನಕ್ಕೆ ಮತ್ತು ಇವರಿಗೆ ಪೆಟ್ಟೇನೂ ಆಗಲಿಲ್ಲ. ಇದು ೧೯೭೦ರ ದಶಕದ ಸಂಗತಿ. ಬಹುಶಃ ಆಗಿವರು ರಾಜ್ಯ ಪ್ರದೇಶ ಕಾಂಗ್ರೆಸ್‌ನ ಅಧ್ಯಕ್ಷರು. ಅಂದು ಇವರ ಮೇಲೆ ಹಲ್ಲೆ ನಡೆಸಲು ಯತ್ನಿಸಿದ್ದ ಕೋಮುವಾದಿ ಶಕ್ತಿಗಳು ಇಂದು ದಕ್ಷಿಣ ಕನ್ನಡದಲ್ಲಿ ಒಂದರ್ಥದಲ್ಲಿ ಮೇಲುಗೈ ಸಾಧಿಸಿವೆ. ವಿಶೇಷವೇನೆಂದರೆ ಶ್ರೀ. ರಂಗನಾಥ್ ಅಂದೇ ಈ ಶಕ್ತಿಗಳ ಅಪಾಯಕಾರಿ ಬೆಳವಣಿಗೆಯನ್ನು ಗುರುತಿಸಿ ಅದರ ವಿರುದ್ಧ ಗಟ್ಟಿಯಾದ ದನಿ ಎತ್ತುತ್ತಿದ್ದರು ಎಂಬುದು. ಹೀಗೆ ಹಲ್ಲೆಗೆ ಯತ್ನಿಸಿದ್ದವರನ್ನು ಪತ್ತೆ ಹಚ್ಚಿ ಶಿಕ್ಷಿಸಲಿಲ್ಲ; ಈಗಂತೂ ಹಾಗೆ ಹಲ್ಲೆ ನಡೆಸುವವರು ಕಾನೂನು ಪರಿಧಿಗೇ ಬರದಿರುವಷ್ಟು ಶಕ್ತರು !

ಇನ್ನೊಂದು ಸ್ವಾರಸ್ಯಕರ ಪ್ರಸಂಗವಿದೆ: ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಅಧ್ಯಾಪಕರಾಗಿದ್ದ ಒಬ್ಬ ಮಹನೀಯರನ್ನು ಮಂಡ್ಯದ ಕಾಲೇಜಿಗೆ ವರ್ಗ ಮಾಡಲಾಗಿತ್ತು. ಅವರು ಬೆಂಗಳೂರು ನಿವಾಸಿಗಳು. ಎರಡು ವಾರಗಳಿಗೊಮ್ಮೆ ಮಂಡ್ಯಕ್ಕೆ ದಯಮಾಡಿ ಹಾಜರಿ ಪುಸ್ತಕದಲ್ಲಿ ಇಡೀ ಎರಡು ವಾರಗಳಿಗೂ ಸಹಿ ಮಾಡಿ ಬರುತ್ತಿದ್ದರೆಂಬುದು ಜನಜನಿತವಾಗಿತ್ತು. ಬೆಂಗಳೂರಿನಲ್ಲಿದ್ದು ಮಾಡುವುದೇನು ? ದಿನದ ಒಂದೆರಡು ಗಂಟೆಗಳನ್ನು ವಿಧಾನಸೌಧದ ಮಹಡಿಗಳ ಮೇಲೆ ಅಡ್ಡಾಡುತ್ತಾ ಕಳೆಯುವುದು, ಎಂಥದೋ ವ್ಯವಹಾರದಲ್ಲಿ ತೊಡಗುವುದು. ಮುಂದೆ ಶ್ರೀ. ರಂಗನಾಥ್ ಉನ್ನತ ಶಿಕ್ಷಣ ಸಚಿವರಾದರು. ಮಂಡ್ಯ ಖ್ಯಾತಿಯ ಶ್ರೀಯುತರು ಅವರನ್ನು ಭೇಟಿ ಮಾಡಿ ಪರಿಚಯ ಹೇಳಿಕೊಂಡರು. ಆ ವೇಳೆಗೆ ಅವರು ಬೆಂಗಳೂರಿನ ಒಂದು ಕಾಲೇಜಿಗೆ ವರ್ಗ ಮಾಡಿಸಿಕೊಂಡಾಗಿತ್ತು. ಎರಡು - ಮೂರು ಬಾರಿ ರಂಗನಾಥ್ ಇವರನ್ನು ವಿಧಾನಸೌಧದಲ್ಲಿ ದೂರದಿಂದಲೇ ಕಂಡು ಗುರುತಿಸಿದರು. ಆಮೇಲೆ ಒಂದು ದಿನ ಅವರನ್ನು ತಮ್ಮ ಬಳಿಗೆ ಕರೆಸಿಕೊಂಡು ಹೇಳಿದರು: ''ಕಾಲೇಜಿನಲ್ಲಿರ ಬೇಕಾದ ನೀವು ಇಲ್ಲೇನು ಮಾಡುತ್ತಿರುತ್ತೀರಿ ? ಇನ್ನೊಮ್ಮೆ ನಿಮ್ಮನ್ನಿಲ್ಲಿ ಕಂಡರೆ ನಿಮ್ಮ ಮೇಲೆ ಕ್ರಮ ಜರುಗಿಸ ಬೇಕಾಗುತ್ತದೆ, ನೋಡಿ.'' ತಮ್ಮ ವರ್ಚಸ್ಸನ್ನು ಸಚಿವರು ಲೆಕ್ಕಕ್ಕೆ ತೆಗೆದುಕೊಳ್ಳಲಿಲ್ಲವೆಂದು ಸದರಿ ಅಧ್ಯಾಪಕರು ಎಲ್ಲರ ಬಳಿಯೂ ಅಸಮಾಧಾನ ವ್ಯಕ್ತಪಡಿಸುತ್ತಾ ಹತಾಶರಾಗಿಹೋದರು.

ಮೂಲತಃ ಶ್ರೀ. ರಂಗನಾಥ್ ಹಳ್ಳಿಯವರು. ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಸಂಸ್ಕೃತವನ್ನು ಒಂದು ವ್ಯಾಸಂಗ ವಿಷಯವನ್ನಾಗಿ ಆಯ್ದುಕೊಂಡಿದ್ದರು. ನಂತರದ ವರ್ಷಗಳಲ್ಲಿ ನನಗೆ ಪ್ರಾಧ್ಯಾಪಕರಾಗಿ ಅಪಾರ ವಾತ್ಸಲ್ಯ ತೋರಿಸಿದ ಶ್ರೀ. ಎಸ್. ರಾಮಚಂದ್ರ ರಾವ್ ಅವರು ರಂಗನಾಥ್ ಅವರಿಗೆ ಸರ್ಕಾರಿ ಇಂಟರ್‌ಮೀಡಿಯೇಟ್ ಕಾಲೇಜಿನಲ್ಲಿ ಅಧ್ಯಾಪಕರು. ಅವರ ಬೋಧನಾ ಶೈಲಿಯನ್ನು ರಂಗನಾಥ್ ಹತ್ತಾರು ಬಾರಿ ನನ್ನೊಡನೆ ಪ್ರಸ್ತಾಪಿಸಿ ಅವರನ್ನು ಗೌರವದಿಂದ ನೆನೆದಿರುವುದುಂಟು. ವೃತ್ತಿಯಲ್ಲಿ ವಕೀಲರಾದ ರಂಗನಾಥ್ ಶ್ರೀ. ಕೆಂಚಪ್ಪ ಎಂಬುವವರ ಜೂನಿಯರ್ ಆಗಿದ್ದವರು. ನನ್ನ ಆತ್ಮೀಯ ಮಿತ್ರರಾದ ಡಾ|| ಕೆ. ಜಿ. ಶ್ರೀನಿವಾಸಮೂರ್ತಿಯವರನ್ನು ರಂಗನಾಥ್ ಉನ್ನತ ಶಿಕ್ಷಣ ಸಚಿವರಾಗಿದ್ದಾಗ ಒಮ್ಮೆ ಅವರಿಗೆ ಪರಿಚಯ ಮಾಡಿಕೊಟ್ಟಿದ್ದೆ. ಆಗ ಕೆಜಿಎಸ್ ಶ್ರೀ. ಕೆಂಚಪ್ಪನವರ ಜೊತೆ ತಮ್ಮ ಸಂಬಂಧ ಹೇಳಿಕೊಂಡಾಗ ರಂಗನಾಥ್ ತಮ್ಮ ಸೀನಿಯರ್ ಬಗ್ಗೆ ಬಹಳ ಗೌರವದ ಮಾತುಗಳನ್ನು ಆಡಿದ್ದುದು ನನ್ನ ನೆನಪಿನಲ್ಲಿದೆ. ಮಾನ್ಯ ರಂಗನಾಥ್ ಅವರಿಗೆ ನನ್ನನ್ನು ೧೯೭೦ರ ಆದಿಯಲ್ಲಿ ಪರಿಚಯಿಸಿದವರು ಬೆಂಗಳೂರು ವಿಶ್ವವಿದ್ಯಾನಿಲಯದಲ್ಲಿ ಭೂಗರ್ಭಶಾಸ್ತ್ರ ಪ್ರಾಧ್ಯಾಪಕರಾಗಿದ್ದ ಡಾ|| ಎಸ್. ಸಾಂಬೇಗೌಡ.

ನಿವೃತ್ತರಾಗುವ ಮೊದಲೇ ತೀರಿಕೊಂಡ ಈತ ಹಲವು ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದ್ದರು. ಆದರೆ ಮದ್ಯದ ವ್ಯಸನ ಅತಿಯಾಗಿದ್ದಿತೆಂದು ತೋರುತ್ತದೆ. ಸ್ವತಃ ಶ್ರೀ. ರಂಗನಾಥ್ ಪ್ರಜಾ ಸೋಷಿಯಲಿಸ್ಟ್ ಪಕ್ಷದ ಕಾರ್ಯಕರ್ತರಾಗಿದ್ದು ಆಮೇಲೆ ಕಾಂಗ್ರೆಸ್ ಪಕ್ಷ ಸೇರಿಕೊಂಡವರು. ಆದರೆ ಮೊದಲಿನಿಂದಲೂ ಸಮಾಜವಾದದಲ್ಲಿ ಶ್ರದ್ಧೆ ಬೆಳೆಸಿಕೊಂಡಿದ್ದ ರಂಗನಾಥ್ ಕಾಂಗ್ರೆಸ್‌ನಲ್ಲಿ ಬೆರೆತುಹೋಗಿ ತಮ್ಮ ಹಿಂದಿನ ಸಾಂಸ್ಕೃತಿಕ ವ್ಯಕ್ತಿತ್ವ ಮತ್ತು ಸೈದ್ಧಾಂತಿಕ ನಿಷ್ಠೆಯನ್ನು ಕಳೆದುಕೊಳ್ಳಲಿಲ್ಲವೆಂಬುದು ವಿಶೇಷ. ಆ ಪಕ್ಷದಲ್ಲಿ ಹಾಗೆ ಪೂರ್ವಾಶ್ರಮದ ಶಿಸ್ತನ್ನು ಉಳಿಸಿಕೊಂಡವರು, ಬೆಳೆಸಿಕೊಂಡವರು ವಿರಳ. ಆ ಪಕ್ಷದ ಅನೇಕ ಹಿರಿಯ ನಾಯಕರು ಮತ್ತು ಆ ಪಕ್ಷದ ಮಿತ್ರ ಪಕ್ಷಗಳ ಇನ್ನಷ್ಟು ನಾಯಕರು ದಿನನಿತ್ಯ ಪತ್ರಿಕೆಗಳಲ್ಲಿ ಕಾಣಿಸಿಕೊಂಡು ಒಂದಲ್ಲ ಒಂದು ಹಗರಣದಲ್ಲಿ ಸಿಲುಕಿಕೊಂಡಿರುವುದನ್ನು ಗಮನಿಸಿದಾಗ ಶ್ರೀ. ರಂಗನಾಥ್ ಅಂತಹವರ ಸಚ್ಚಾರಿತ್ರ್ಯ ಅತೀವ ಮೆರುಗು ಹೊಮ್ಮಿಸುತ್ತದೆ.

ಅವರು ೧೯೭೦ರ ದಶಕದಲ್ಲಿ ಕೆಲವು ವರ್ಷಗಳ ಕಾಲ ರಾಜ್ಯದ ಪ್ರದೇಶ ಕಾಂಗ್ರೆಸ್‌ನ ಅಧ್ಯಕ್ಷರಾಗಿದ್ದರು. ವೈಯ್ಯಕ್ತಿಕವಾಗಿ ನನಗೆ ಅವರು ಹೆಚ್ಚು ಆಪ್ತರಾದದ್ದು ಆ ಕಾಲದಲ್ಲೇ. ಯಾವ ಸಿದ್ಧಾಂತದಲ್ಲೂ ನಂಬಿಕೆ ಇರಿಸಿಕೊಳ್ಳುವುದು ಕಾಂಗ್ರೆಸ್‌ಗೆ ಕಳೆದ ಮೂರು-ನಾಲ್ಕು ದಶಕಗಳಲ್ಲಿ ಒಂದು ಅನಗತ್ಯ ಹೊರೆಯಾಗಿ ಕಂಡಿರುವುದು ಈಗ ಇತಿಹಾಸ. ಸಂಜಯ ಗಾಂಧಿ ಬಳುವಳಿಗಳಲ್ಲಿ ಅದೂ ಒಂದಿರಬಹುದೇನೊ! ಆದರೆ ರಂಗನಾಥ್ ಅಧ್ಯಕ್ಷರಾಗಿದ್ದಾಗ ತಮ್ಮ ಪಕ್ಷದ ಪುನಶ್ಚೇತನಕ್ಕೆ ಸ್ಥಿರವಾದ ಸೈದ್ಧಾಂತಿಕ ನೆಲೆ ಅಗತ್ಯವೆಂದು ತಿಳಿದು ಅದಕ್ಕಾಗಿ ಶ್ರಮಿಸಿದರು, ಭಾಗಶಃ ಯಶಸ್ಸು ಕಂಡರು ಮತ್ತು ಭಾಗಶಃ ಮೂದಲಿಕೆಗೆ ಪಾತ್ರರಾದರು. ಅದರಿಂದೇನೂ ಅವರು ಕಂಗಾಲಾಗಲಿಲ್ಲ, ತಮ್ಮ ವೈಯ್ಯಕ್ತಿಕ ನಂಬಿಕೆಯನ್ನು ಬಿಟ್ಟುಕೊಡಲಿಲ್ಲ. ಸಿದ್ಧಾಂತ ಮತ್ತು ಶಿಸ್ತು ಅವರ ಪಕ್ಷದ ಯುವ ಪೀಳಿಗೆಯವರಿಗೆ ವ್ಯಕ್ತಿತ್ವದ ಭಾಗವಾಗಬೇಕೆಂದು ಆಶಿಸಿದವರು ಶ್ರೀ. ರಂಗನಾಥ್. ಅವರೊಡನೆ ಯುವ ಕಾರ್ಯಕರ್ತರಾಗಿದ್ದು ನಂತರವೂ ತಮ್ಮ ಶ್ರದ್ಧೆಯನ್ನು ಉಳಿಸಿಕೊಂಡಿರುವವರಲ್ಲಿ ಶ್ರೀಯುತರುಗಳಾದ ರಮೇಶ್ ಕುಮಾರ್, ಬಿ. ಎಲ್. ಶಂಕರ್, ಬಿ. ಎ. ಮೋಹಿದೀನ್, ದಿವಂಗತ ಎಸ್. ಎಂ. ಯಾಹ್ಯ, ಮುಂತಾದವರಿದ್ದಾರೆ. ಅವರ ಸನಿಹದಲ್ಲೇ ಇದ್ದ ಶ್ರೀ. ಚಂದ್ರೇಗೌಡರಂಥ ಅನೇಕರು ಬೇರೆಬೇರೆ ಬಣ್ಣಗಳನ್ನು ಬಳಿದುಕೊಂಡಿದ್ದು ತಿಳಿದ ವಿಷಯವೇ.

ಶ್ರೀ. ರಂಗನಾಥ್ ಅವರು ಕಾಂಗ್ರೆಸ್ ಅಧ್ಯಕ್ಷರಾಗಿ ಆಯೋಜಿಸಿದ್ದ ಹತ್ತಾರು ವಿಚಾರಗೋಷ್ಠಿಗಳಲ್ಲಿ ಯುವಕರಿಗೆ ಬಹುರಾಷ್ಟ್ರೀಯ ಕಂಪನಿಗಳು ದೇಶಕ್ಕೆ ಉಂಟುಮಾಡುವ ಕುತ್ತಿನ ಬಗ್ಗೆ ೧೯೭೦ರ ದಶಕದಲ್ಲೇ ಎಚ್ಚರ ಮೂಡಿಸಿದ್ದರು. ರಾಜ್ಯದ ಹಲವೆಡೆ ಇಂತಹ ಗೋಷ್ಠಿಗಳನ್ನು ನಡೆಸಿ ಸಾವಿರಾರು ಕಾಂಗ್ರೆಸ್ ಸದಸ್ಯರಿಗೆ, ಕಾರ್ಯಕರ್ತರಿಗೆ, ಸಾಮಾಜಿಕ-ಆರ್ಥಿಕ ಅರಿವನ್ನು ಉಂಟುಮಾಡಿದ್ದು ರಂಗನಾಥ್ ಅವರ ಒಂದು ಶ್ಲಾಘನೀಯ ಶ್ರಮ. ಈ ಬಹುರಾಷ್ಟ್ರೀಯ ಕಂಪನಿಗಳು ನಮ್ಮ ದೇಶದಲ್ಲಿ ಇಂದು ಎಷ್ಟು ಅಗಾಧವಾದ ದಾಂಧಲೆ ನಡೆಸುತ್ತಿವೆ, ಅದಕ್ಕೆ ಕಾಂಗ್ರೆಸ್‌ನ ಹೀನಾಯ ಕೊಡುಗೆ ಎಷ್ಟು, ಎಂಬುದೆಲ್ಲಾ ಚಿರಪರಿಚಿತ. ರಂಗನಾಥ್ ಅವರ ಸೈದ್ಧಾಂತಿಕ ಪರಂಪರೆ ಇಡೀ ರಾಷ್ಟ್ರಕ್ಕೆ ಅಗತ್ಯವಿತ್ತು, ಆದರೆ ಅದನ್ನು ನಮ್ಮ ರಾಜ್ಯದಲ್ಲಿ ಸಹ ಉಳಿಯದಂತೆ ಮಾಡುವ ಪ್ರಕ್ರಿಯೆ ಎಲ್ಲವನ್ನೂ ತಲೆಕೆಳಗು ಮಾಡಿಬಿಟ್ಟಿದೆ. ೧೯೭೦ರಲ್ಲಿರಬೇಕು, ಬೆಂಗಳೂರಿನ ಪುರಭವನದಲ್ಲಿ ಒಂದು ಇಡೀ ದಿನ ಸಾಮ್ರಾಜ್ಯಶಾಹಿ ಕಂಟಕವನ್ನು ಕುರಿತ ವಿಚಾರಗೋಷ್ಠಿ ನಡೆದಿತ್ತು, ಸಾವಿರಾರು ಯುವಕರು ಉಪಸ್ಥಿತರಿದ್ದರು, ದೇಶದ ರಾಜಕೀಯ-ಆರ್ಥಿಕ ಸನ್ನಿವೇಶದ ಪರ್ಯಾಯವು ಖಚಿತವಾಗಿ ಬೇರೂರುತ್ತದೆ, ಎಂಬ ಆಶಾಭಾವನೆ ಮೂಡಿತ್ತು. ಆಗ್ಗೆ ಕಾಂಗ್ರೆಸ್ ಆಯೋಜಿಸಿದ್ದ ಅನೇಕ ಗೋಷ್ಠಿಗಳಲ್ಲಿ, ಅಧ್ಯಯನ ಶಿಬಿರಗಳಲ್ಲಿ, ಪಾಲ್ಗೊಂಡಿದ್ದುದು ನನಗೆ ನೆನಪಿದೆ. ಅಂದಿನ ಹುಮ್ಮಸ್ಸನ್ನು ಬೆಳೆಯಬಿಟ್ಟಿದ್ದರೆ ಕಾಂಗ್ರೆಸ್ ಬೇರೆಯದೇ ನೆಲೆಯಲ್ಲಿ ಬೆಳೆಯುವ ಸಾಧ್ಯತೆಗಳಿದ್ದವು. ಅದನ್ನು ಚಿವುಟಿಹಾಕಲು ಹಾತೊರೆಯುತ್ತಿದ್ದ ಪ್ರತಿಗಾಮಿ ಶಕ್ತಿಗಳೇ ಶ್ರೀ. ರಂಗನಾಥ್ ಅವರನ್ನು ಕಾಂಗ್ರೆಸ್ ಅಧ್ಯಕ್ಷ ಪದವಿಯನ್ನು ತೊರೆಯುವಂತೆ ಮಾಡಿದುವೆಂಬುದು ನನ್ನ ಎಣಿಕೆ. ಆ ಪಕ್ಷದ ಆಂತರಿಕ ವಿದ್ಯಮಾನಗಳು ಯಾರಿಗೆ ಗೊತ್ತಿಲ್ಲ! ಈಗಂತೂ ಕಾಂಗ್ರೆಸ್‌ನಲ್ಲಿ ಸಿದ್ಧಾಂತ, ಶಿಸ್ತು, ಬದ್ಧತೆ, ಇವನ್ನೆಲ್ಲಾ ಹುಡುಕಹೋಗುವುದೇ ಮೂರ್ಖತನ ಎಂಬಂತಾಗಿದೆ. ಈ ಸಂದರ್ಭದಲ್ಲಿ ಒಂದು ಘಟನೆ ನೆನಪಿಗೆ ಬರುತ್ತದೆ : ರಂಗನಾಥ್ ಅವರು ಅಧ್ಯಕ್ಷ ಪದವಿ ತೊರೆದು ಸಾರಿಗೆ ಸಚಿವರಾಗಿ ಸಂಪುಟ ಸೇರಿದಾಗ ಅವರ ಹಲವು ಯುವಕ ಮಿತ್ರರು ತೀರಾ ನಿರಾಶರಾದರು. ಅದಕ್ಕೆ ಮುನ್ನ ಕಾಂಗ್ರೆಸ್ ಪಕ್ಷದ ಯುವ ವಿಭಾಗವು ಸ್ವಾಂತಂತ್ರ್ಯೋತ್ಸವ ದಿನದಂದು ಒಂದು ಸಭೆಯನ್ನು ಆಯೋಜಿಸಿತ್ತು. ಮಧ್ಯಾಹ್ನ ನಾಲ್ಕು ಗಂಟೆಗೋ ಏನೋ ಇರಬೇಕು, ನಾನು ಉಪನ್ಯಾಸ ನೀಡುವುದಿತ್ತು. ಕಚೇರಿ ಇಂದಿನ ಕೆಂಪೇಗೌಡ ಬಸ್ ನಿಲ್ದಾಣ ಇರುವೆಡೆ ಇದ್ದಿತು. ಆಗ ಪಕ್ಷದ ಉಪಾಧ್ಯಕ್ಷರಾಗಿದ್ದ ಶ್ರೀ. ಎಲ್. ಟಿ. ಕಾರ್ಲೆ ಸಭಾಧ್ಯಕ್ಷರು. ಸಭೆ ಆರಂಭವಾಗುವ ಮುನ್ನ ಬಂಗ್ಲಾದೇಶದ ಪ್ರಧಾನಿ ಮುಜೀಬುರ್ ರಹಮಾನ್‌ರ ಹತ್ಯೆಯ ಸಮಾಚಾರ ಬಂದಿತು. ನಾನು ಮಾತನಾಡಿದ್ದೆಲ್ಲಾ ಅದರ ಹಿನ್ನೆಲೆಯಲ್ಲೇ. ಸಾಮ್ರಾಜ್ಯಶಾಹಿ ಕುತಂತ್ರಗಳು, ಸಿಐಎ ಕೈವಾಡ, ಸ್ಥಳೀಯ ಮಿಲಿಟರಿಯೊಡನೆ ಸೇರಿ ಸಿಐಎ ಷಡ್ಯಂತ್ರ, ಬಹುರಾಷ್ಟ್ರೀಯ ಕಂಪನಿಗಳ ಉಪಟಳ, ಇವೆಲ್ಲಾ ಮುಜೀಬುರ್ ರಹಮಾನ್‌ರ ಹತ್ಯೆಗೆ ಪ್ರೇರಕವೆಂದು ಗುರುತಿಸಿ, ನಮ್ಮ ದೇಶವು ಅಮೆರಿಕಾ ದೇಶದೊಂದಿಗೆ ವ್ಯವಹರಿಸುವಾಗ ಎಚ್ಚರದಿಂದಿರಬೇಕು, ಸಮಾನತೆಯ ನೆಲೆಯಲ್ಲಿಯೇ ರಾಜತಾಂತ್ರಿಕ ಸಂಬಂಧ ಬೆಳೆಸಬೇಕು, ಇತ್ಯಾದಿ ವಿಷಯಗಳನ್ನು ವಿವರವಾಗಿ ಚರ್ಚಿಸಿದೆ. ಅಧ್ಯಕ್ಷರಾಗಿದ್ದ ಶ್ರೀ. ಕಾರ್ಲೆಯವರು ಸ್ವಲ್ಪ ಸಿಡಿಮಿಡಿಗೊಂಡು ತಾಳ್ಮೆಗೆಟ್ಟರು, ತಮ್ಮ ಅಧ್ಯಕ್ಷ ಭಾಷಣದಲ್ಲಿ ನನ್ನ ಮಾತುಗಳನ್ನು ಟೀಕಿಸಿದರು. ಅಮೆರಿಕಾದೊಡನೆ ಸಖ್ಯವು ಭಾರತಕ್ಕೆ ಅತ್ಯಗತ್ಯವೆಂದು ಅವರು ಪ್ರತಿಪಾದಿಸುತ್ತಿದ್ದಾಗ ಕೆಲವು ಯುವಕರು ತಕರಾರೆತ್ತಿ ಕಾರ್ಲೆಯವರಿಗೆ ಮುಜುಗರ ಉಂಟುಮಾಡಿದರು. ಮಾರನೆಯ ದಿನ ಶ್ರೀ. ರಂಗನಾಥ್ ಅವರಿಗೆ ವಿಷಯ ತಿಳಿದು ಅವರೂ ಸ್ವಲ್ಪ ಕಸಿವಿಸಿಗೊಂಡರಂತೆ. ತಮ್ಮ ಪಕ್ಷದ ಕೆಲವು ನಾಯಕರು ಸಾಮ್ರಾಜ್ಯಶಾಹಿಯು ಭಾರತಕ್ಕೆ ಒಡ್ಡುವ ಅಡಚಣೆಗಳನ್ನು ಸರಿಯಾಗಿ ಅರ್ಥಮಾಡಿ ಕೊಂಡಿರಲಿಲ್ಲವೆಂಬುದು ಅವರಿಗೆ ಅಸಮಾಧಾನ ತಂದಿದ್ದಿತು. ಒಟ್ಟಿನಲ್ಲಿ ಹೇಳುವುದಾದರೆ ಅವರು ತಮ್ಮ ಪಕ್ಷಕ್ಕೆ ದೃಢವಾದ ಸಮಾಜವಾದಿ ಸೈದ್ಧಾಂತಿಕ ನೆಲೆಯನ್ನು ಕಲ್ಪಿಸಬೇಕೆಂಬ ಆಶಯ ಹೊಂದಿದ್ದರು. ಆ ನೆಲೆಯಲ್ಲಿ ನಿಂತು ಅವರು ಸರ್ಕಾರದ ಆಡಳಿತ ವೈಖರಿಯನ್ನು ವಿಮರ್ಶಿಸುತ್ತಿದ್ದರು. ಇದರಿಂದ ಉಂಟಾದ ದ್ವಂದ್ವವು ಅವರು ಅಧ್ಯಕ್ಷರಾಗಿ ಮುಂದುವರಿಯಲು ಸಾಧ್ಯವಿಲ್ಲದಂತಾಗಿಸಿತು. ಇಂದಿನ ಕಾಂಗ್ರೆಸ್ ಪಕ್ಷದ ಆರ್ಥಿಕ ನೀತಿಗಳ ವಿಶ್ಲೇಷಣೆ ಮಾಡಿಕೊಂಡರೆ ಶ್ರೀ. ರಂಗನಾಥ್ ಇರಿಸಿಕೊಂಡಿದ್ದ ಆ ಹಾದಿಯಿಂದ ಎಷ್ಟು ಭಿನ್ನವಾದ ನಿಲುವುಗಳು ನಮ್ಮ ದೇಶದ ಆರ್ಥಿಕತೆಗೆ ಪೆಟ್ಟು ನೀಡಿವೆಯೆಂಬುದು ಸ್ಪಷ್ಟವಾಗಿ ಗೋಚರವಾಗುತ್ತದೆ.

ಶ್ರೀ. ರಂಗನಾಥ್ ಅವರು ಕೃಷಿ , ಅರಣ್ಯ, ಉನ್ನತ ಶಿಕ್ಷಣ, ಸಹಕಾರ, ಹೀಗೆ ಬೇರೆ ಬೇರೆ ಖಾತೆಗಳನ್ನು ಸಚಿವರಾಗಿ ನಿರ್ವಹಿಸಿದ್ದಾರೆ. ಎಲ್ಲದರಲ್ಲೂ ಒಂದು ವಿಶಿಷ್ಟ ಗುಣಾತ್ಮಕ ವ್ಯತ್ಯಾಸ ಕಂಡುಬರುವಂತೆ ಕೆಲಸ ಮಾಡುವುದು, ನೀತಿಗಳನ್ನು ಅಳವಡಿಸುವುದು ಅವರ ಕಾರ್ಯವಿಧಾನ. ಉನ್ನತ ಶಿಕ್ಷಣ ಸಚಿವರಾಗಿದ್ದಾಗ ವಿಶ್ವವಿದ್ಯಾನಿಲಯಗಳಲ್ಲಿ ಶೈಕ್ಷಣಿಕ ವಾತಾವರಣವನ್ನು ತಿಳಿಗೊಳಿಸುವ ಉದ್ದೇಶ ಹೊಂದಿದ್ದರು. ಅದಕ್ಕೆ ಅವರಿಗೆ ದೊರಕಿದ ಸಹಕಾರ ಅಷ್ಟೇನೂ ಉತ್ತಮ ಮಟ್ಟದ್ದಾಗಿರಲಿಲ್ಲ. ನಮ್ಮ ಶಿಕ್ಷಣ ಕ್ಷೇತ್ರದ ಕಾಯಕಲ್ಪಕ್ಕೆ ಸಾಮಾನ್ಯ ಮದ್ದು ಸಾಲುವುದಿಲ್ಲವೆಂಬುದು ಅವರ ಅನುಭವಕ್ಕೆ ಬಂದಿತು. ಅವರು ಶಿಕ್ಷಣ ಸಚಿವರಾಗಿದ್ದಾಗ ಕಾಲೇಜುಗಳ ಅಧ್ಯಾಪಕರಿಗೆ ವಿಶ್ವವಿದ್ಯಾಲಯ ಧನಸಹಾಯ ಆಯೋಗವು ನಿಗದಿಗೊಳಿಸಿದ್ದ ವೇತನಶ್ರೇಣಿ ಜಾರಿಗೆ ಬರುವುದಿತ್ತು. ಏನಾದರೊಂದು ಚಳುವಳಿ ನಡೆಸದೆ ಕಾಲೇಜು ಅಧ್ಯಾಪಕರು ಸೌಲಭ್ಯಗಳನ್ನು ಪಡೆದಿರುವುದು ವಿರಳ ಅಥವಾ ಇಲ್ಲವೇ ಇಲ್ಲ. ಆದರೆ ಶ್ರೀ. ರಂಗನಾಥ್ ಅವರು ಸಚಿವರಾಗಿದ್ದಾಗ ಚಳುವಳಿಯ ಅಗತ್ಯ ತೋರಿಬರಲಿಲ್ಲವೆಂಬುದು ಒಂದು ವಿಶೇಷ. ಶಾಸನಸಭೆಯ ಅಧ್ಯಕ್ಷರಾಗಿಯೂ ಶ್ರೀ. ರಂಗನಾಥ್ ಗುಣಾತ್ಮಕವಾಗಿ ತಾವು ಹೇಗೆ ಭಿನ್ನರೆಂಬುದನ್ನು ತೋರಿಸಿಕೊಟ್ಟಿದ್ದರು.

ಅನೇಕ ವರ್ಷಗಳ ಕಾಲ ಶ್ರೀ. ರಂಗನಾಥ್ ಅವರು ನಮ್ಮ ರಾಜ್ಯದ ಭಾರತ-ಸೋವಿಯೆತ್ ಸಾಂಸ್ಕೃತಿಕ ಸಂಘದ ಅಧ್ಯಕ್ಷರಾಗಿದ್ದರು. ಆಗೆಲ್ಲಾ ನಾನು ಆ ಸಂಘದ ಕಾರ್ಯದರ್ಶಿ. ಆದ್ದರಿಂದ ನಮ್ಮ ಒಡನಾಟ ಸ್ವಲ್ಪ ಹೆಚ್ಚಿನ ಮಟ್ಟದ್ದಾಗಿತ್ತು, ಕಾರ್ಯಕ್ರಮಗಳ ಆಯೋಜನೆಯನ್ನು ಪರಸ್ಪರ ವಿಚಾರ ವಿನಿಮಯದಿಂದ ಮಾಡುತ್ತಿದ್ದೆವು. ಗುಲ್ಬರ್ಗ ಮತ್ತು ಹುಬ್ಬಳ್ಳಿ ರಾಜ್ಯ ಸಮ್ಮೇಳನಗಳು ಅವರ ಅಧ್ಯಕ್ಷತೆಯಲ್ಲಿ ನಡೆದವು. ಗುಲ್ಬರ್ಗದಲ್ಲಿ ಶ್ರೀ. ಧರಮ್ ಸಿಂಗ್ ಮತ್ತು ಹುಬ್ಬಳ್ಳಿಯಲ್ಲಿ ಶ್ರೀ. ಎ. ಜೆ. ಮುಧೋಳ್ ಮುಖ್ಯ ಸಂಯೋಜಕರಾಗಿದ್ದರು. ಹೀಗೆ ಅಧ್ಯಕ್ಷರಾಗಿದ್ದಾಗ ಒಮ್ಮೆ ಅವರು 'ಇಸ್ಕಸ್'ನ ರಾಷ್ಟ್ರೀಯ ಸಮಿತಿಯ ಪರವಾಗಿ ಒಂದು ಅಂತರರಾಷ್ಟ್ರೀಯ ವಿಚಾರ ಗೋಷ್ಠಿಗೆಂದು ಸೋವಿಯೆತ್ ಒಕ್ಕೂಟಕ್ಕೆ ತೆರಳಿದ್ದರು. ಅವರೊಡನಿದ್ದ ಬೇರೆ ಪ್ರತಿನಿಧಿಗಳ ಪೈಕಿ ಹೈದರಾಬಾದಿನ ನ್ಯೂ ಕಾಲೇಜಿನ ಪ್ರಾಚಾರ್ಯರೂ ಸೇರಿದ್ದರು. ಅವರ ಕಾಲೇಜಿಗೆ ಯಾವುದೋ ಕಾರ್ಯನಿಮಿತ್ತ ನಾನು ಹೋಗಿದ್ದಾಗ ಅವರು ಶ್ರೀ. ರಂಗನಾಥ್ ಅವರು ವಿಚಾರಗೋಷ್ಠಿಯಲ್ಲಿ ಮಂಡಿಸಿದ ಪ್ರಬಂಧವನ್ನು ಕುರಿತು ಮೆಚ್ಚುಗೆ ವ್ಯಕ್ತಪಡಿಸಿ ಹೇಳಿದರು : "ನಿಮ್ಮ ರಾಜ್ಯಾಧ್ಯಕ್ಷರು ಸಜ್ಜನ, ಮಿತಭಾಷಿಗಳು; ಮಾತನಾಡುವುದು

*(೫೪ನೇ ಪುಟಕ್ಕೆ)*

ಬಿ. ವಿ. ಸುಬ್ಬರಾವ್

# ತೃಪ್ತಿ ತಂದ ತೀರ್ಪು

**ಬೆ**ಳಗ್ಗೆ ಏಳು ಗಂಟೆ ಸಮಯ. ಜಸ್ಟಿಸ್ ಧರ್ಮದಾಸರು ತಮ್ಮ ಮನೆ ಬಾತ್‌ರೂಮಿನಲ್ಲಿ ಸ್ನಾನ ಮಾಡುತ್ತಿದ್ದರು. ಇದೇನು ದೊಡ್ಡ ವಿಷಯ ಎಂದು ಮಧ್ಯೆ ಬಾಯಿ ಹಾಕಬೇಡಿ. ದೊಡ್ಡವರು ಮಾಡುವ ಎಲ್ಲವೂ ದೊಡ್ಡ ವಿಷಯವೇ ಆಗಿರುತ್ತೆ. ಈ ದೃಷ್ಟಿಯಿಂದ ಧರ್ಮದಾಸರ ಸ್ನಾನವೂ ದೊಡ್ಡ ವಿಷಯವೇ ಹೌದು. ಜೊತೆಗೆ ಅವರ ಸ್ನಾನದಲ್ಲಿ ಮತ್ತೊಂದು ವಿಶೇಷತೆಯೂ ಇರುತ್ತಿತ್ತು. ಏನೆಂದರೆ, ಧರ್ಮದಾಸರ ಕಾನೂನಿನ ಜ್ಞಾನ ಅದ್ವಿತೀಯವಾಗಿದ್ದುದರಿಂದ, ಅವರು ಮಾಡುವುದೆಲ್ಲ ಕಾನೂನಿಗೆ ಅನುಸಾರವಾಗಿಯೇ ಇರುತ್ತಿದ್ದುವು. ಅವರು ಪ್ರತಿದಿನ ಮಾಡುತ್ತಿದ್ದ ಸ್ನಾನ ಕೂಡ ಕಾನೂನಿಗೆ ಅನುಸಾರವಾಗಿಯೇ ಇರುತ್ತಿತ್ತು. ''ನೀರನ್ನು ಮಿತವಾಗಿ ಬಳಸಿ'' ಎಂಬ ಸರಕಾರಿ ಸೂತ್ರವು ಯಾವ ಕಾನೂನಿನ ಯಾವ ಸೆಕ್ಷನ್‌ನಲ್ಲಿದೆ ಎಂದು ಅವರು ಹೇಳಬಲ್ಲವರು. ಹಾಗೆಯೇ ಅವರು ಬಳಸುತ್ತಿದ್ದ ಸಾಬೂನಿನಲ್ಲಿ ಎಂತೆಂತಹ ಗುಣಗಳು ಎಷ್ಟೆಷ್ಟು ಇವೆ, ಅವುಗಳೆಲ್ಲ ನಿಜಕ್ಕೂ ಇವೆಯೆ, ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ಕೊಡಬಲ್ಲವರಾಗಿದ್ದರು. ಇವುಗಳೆಲ್ಲದರ ಪರಿಣಾಮವಾಗಿ ಅವರು ಮಾಡುತ್ತಿದ್ದ ಸ್ನಾನವೂ ಕಾನೂನಿಗೆ ಅನುಸಾರವಾಗಿಯೇ ಇರುತ್ತಿತ್ತು. ಸ್ನಾನಕ್ಕೆ ಎಷ್ಟು ನೀರು ಬಳಸಬೇಕು, ನೀರು ಎಷ್ಟು ಬಿಸಿ ಇರಬೇಕು, ತಲೆ ಮೇಲೆ ಎಷ್ಟು ಚೊಂಬು ನೀರು ಸುರಿದುಕೋಬೇಕು, ಎಷ್ಟು ನಿಮಿಷಗಳಲ್ಲಿ ಸ್ನಾನ ಮುಗಿಸಬೇಕು, ಎಂಬೆಲ್ಲ ವಿಷಯಗಳಲ್ಲಿ ಅವರು ನಿಷ್ಣಾತರು. ಇವುಗಳಿಗೆ ಸಂಬಂಧಪಟ್ಟ ಎಲ್ಲ ಕಾನೂನುಗಳು ಧರ್ಮದಾಸರಿಗೆ ಚೆನ್ನಾಗಿ ಗೊತ್ತಿತ್ತು.

ಆದರೆ ಅವರು ಈ ದಿನ ಮಾಡುತ್ತಿದ್ದ ಸ್ನಾನ ಅತ್ಯಂತ ಮಹತ್ವದ್ದಾಗಿತ್ತು. ಗಂಭೀರ ಸಮಸ್ಯೆಗಳಿಗೆ ದಾರಿ ಮಾಡಿಕೊಟ್ಟಿತ್ತು. ಅವರು ಅಂಥ ಧರ್ಮಸಂಕಟಕ್ಕೆ ಸಿಕ್ಕಿಬಿದ್ದಿದ್ದರು. ಯಾಕೆ, ಹೇಗೆ ಎಂದು ಪ್ರಶ್ನಿಸದೆ ಮುಂದೆ ಓದಿದರೆ ನಿಮಗೇ ಅರ್ಥವಾಗುತ್ತೆ.

ಪ್ರತಿದಿನದಂತೆ ಈ ದಿನವೂ ಧರ್ಮದಾಸರು ತಮಗೆ ಕಂಠಪಾಠವಾಗಿದ್ದ ಸಿನೆಮಾ ಹಾಡೊಂದನ್ನು ಗುನುಗುತ್ತ ಸ್ನಾನ ಮಾಡುತ್ತಿದ್ದರು. ಮೈಗೆಲ್ಲ ಸಾಬೂನು ಉಜ್ಜಿಯಾಗಿತ್ತು. ತಲೆ ಮೇಲೆ ನೀರನ್ನು ಸುರಿದುಕೊಳ್ಳಲು ಚೊಂಬನ್ನು ಮೇಲಕ್ಕೆ ಎತ್ತುತ್ತಿದ್ದಾಗ... ಇದ್ದಕ್ಕಿದ್ದಂತೆ ಎತ್ತಿದ ಕೈ ಹಾಗೇ ನಿಂತಿತು! ಹಾಡು ಗಂಟಲಲ್ಲೇ ಉಳಿಯಿತು. ಕಾರಣ, ಬಾತ್‌ರೂಮಿನ ಹೊರಗೆ ಕನ್ಸರ್ವೆನ್ಸಿ ಗಲ್ಲಿಯಲ್ಲಿ ಯಾರೋ ಇಬ್ಬರು ಜಗಳ ಕಾಯಲು ಶುರು ಮಾಡಿದ್ದರು. ಏರಿದ ಸ್ವರ, ಅಶ್ಲೀಲ ಮಾತುಗಳು, ಕೆಟ್ಟ ಕೆಟ್ಟ ಬೈಗಳು; ಕದನ ಇನ್ನೂ ಬಿರುಸಾದಾಗ ಹೀನಾಮಾನವಾದಂತಹ ನಿಂದನೆಗಳು. ಇವೆಲ್ಲ ನಡೆಯುತ್ತಿದ್ದುದು ಬಾತ್‌ರೂಮಿನ ಗೋಡೆಯ ಆ ಬದಿಯ ಕನ್ಸರ್ವೆನ್ಸಿ ಗಲ್ಲಿಯಲ್ಲಿ, ಕೇವಲ ಏಳು -ಎಂಟು ಅಡಿಗಳ ದೂರದಲ್ಲಿ!

ಧರ್ಮದಾಸರ ಕುತೂಹಲ ಜಾಸ್ತಿ ಆಯಿತು. ಬಾತ್‌ರೂಮಿನಲ್ಲಿ ಆಳೆತ್ತರದ ಒಂದು ಕಿಟಕಿ ಇತ್ತು. ಧರ್ಮದಾಸರು ಅದರ ಬಾಗಿಲನ್ನು ಸ್ವಲ್ಪ ಓರೆಮಾಡಿ ಇಣುಕಿ ನೋಡಿದರು. ಕಿಟಕಿಯ ಎದುರಿಗೇ ಜಗಳ ನಡೆಯುತ್ತಿದ್ದುದರಿಂದ ದೃಶ್ಯ ಸ್ಪಷ್ಟವಾಗಿ ಕಾಣುತ್ತಿತ್ತು. ಹಾಗೆ ಕದ್ದು ನೋಡುವುದು ಕಾನೂನಿಗೆ ವಿರುದ್ಧವಲ್ಲವೆಂದು ಅವರಿಗೆ ಚೆನ್ನಾಗಿ ಗೊತ್ತಿತ್ತು. ಜಗಳ ಕಾಯುತ್ತಿದ್ದ ಇಬ್ಬರ ಪೈಕಿ ಒಬ್ಬ ಅದೇ ಮೊಹಲ್ಲದ ಪೇಂಟರ್ ಸಿದ್ಧರಾಜು. ಧರ್ಮದಾಸರಿಗೆ ಅವನು ಪರಿಚಿತ. ಅವನೇ ಅಲ್ಲವೆ ಎರಡು ತಿಂಗಳ ಹಿಂದೆ ತಮ್ಮ ಮನೆಗೆ ಪೇಂಟ್ ಬಳಿದವನು! ಎರಡನೇ ವ್ಯಕ್ತಿಯೂ ಪರಿಚಿತನೆ. ದಿನಾಗಲೂ ತಮ್ಮ ಮನೆಗೆ ನೂಕು ಗಾಡಿಯಲ್ಲಿ ತರಕಾರಿ ತಂದು ಮಾರುತ್ತಿದ್ದ ರಾಮು.

ಧರ್ಮದಾಸರು ಅವರಿಬ್ಬರ ಜಗಳವನ್ನು ಕಿಟಕಿಯ ಮೂಲಕ ನೋಡುತ್ತಲೇ ನಿಂತುಬಿಟ್ಟರು. ಕೆಲವೇ ಕ್ಷಣಗಳಲ್ಲಿ ಜಗಳ ಭೀಕರವಾಯಿತು. ಕೈ ಕೈ ಮಿಲಾಯಿಸಿದುವು. ಒಬ್ಬರನ್ನೊಬ್ಬರು ಹೊಡೆದು ಚಚ್ಚಿಡಲು ಶುರುಮಾಡಿದರು. ಇಬ್ಬರ ಮೂಗು ಬಾಯಿಗಳಿಂದ ರಕ್ತ ಸುರಿಯಲು ಪ್ರಾರಂಭವಾಯಿತು. ಛಿ! ಛಿ! ಎಂತಹ ಲಫಂಗರು? ಪೊಲೀಸಿನವರಿಗೆ ಕಂಪ್ಲೇಂಟ್ ಕೊಡದೆ ತಾವು ತಾವೇ ಈ ರೀತಿ ಬಡಿದಾಡುತ್ತಿರುವರಲ್ಲ, ಎಂದು ಧರ್ಮದಾಸರು ಮನಸ್ಸಿನಲ್ಲೇ ಪೇಚಾಡಿದರು. ಅವರಿಬ್ಬರ ಮಧ್ಯೆ ನುಗ್ಗಿ ಅವರ ಜಗಳವನ್ನು ನಿಲ್ಲಿಸುವಂತಹ ಜವಾಬ್ದಾರಿಯಾಗಲೀ, ಕರ್ತವ್ಯವಾಗಲೀ ತಮ್ಮದಲ್ಲವೆಂದು ಲಾ ಪರೀಕ್ಷೆಯಲ್ಲಿ ರ‍್ಯಾಂಕ್ ಗಿಟ್ಟಿಸಿದ್ದ ಅವರಿಗೆ ತಕ್ಷಣ ಗೊತ್ತಾಯಿತು.

ಧರ್ಮದಾಸರು ನೋಡುತ್ತಿದ್ದಂತೆಯೇ ಮಿಂಚಿನ ವೇಗದಲ್ಲಿ ಒಂದು ಹೀನಕೃತ್ಯ, ಘೋರಾಪರಾಧ ನಡೆದೇ ಹೋಯಿತು! ಕೋಪದ ಭರದಲ್ಲಿ ಸಿದ್ಧರಾಜು ತನ್ನ ಜೇಬಿನಿಂದ ಸರ‍್ರನೆ ಚಾಕುವನ್ನು ಈಚೆಗೆ ತೆಗೆದು ಒಂದೇ ಏಟಿನಲ್ಲಿ ರಾಮುವಿನ ಎದೆಗೆ ತಿವಿದ!! ರಕ್ತ ಕಾರಂಜಿಯಂತೆ ಝಲ್ಲೆಂದು ಚಿಮ್ಮಿತು. ಸಿದ್ಧರಾಜುವಿನ ಷರಟು ಪ್ಯಾಂಟ್‌ಗಳೆಲ್ಲ ರಕ್ತದಿಂದ ತೋಯ್ದು ಕೆಂಪಾದವು. ರಾಮು ಚೀರುತ್ತ ಧೊಪ್ಪನೆ ನೆಲಕ್ಕೆ ಬಿದ್ದ! ಕ್ಷಣಾರ್ಧದಲ್ಲೇ ಪ್ರಾಣ ನೀಗಿದ! ಸಿದ್ಧರಾಜು ಪರಾರಿ!!

- ೨ -

ಪೊಲೀಸಿನವರು ಸಿದ್ಧರಾಜುವನ್ನು ಹುಡುಕಿ, ಅರೆಸ್ಟ್ ಮಾಡಿ ಜೈಲಿನಲ್ಲಿಟ್ಟರು. ಕೊಲೆಯ ಆರೋಪ ಹೊರಿಸಿ, ಅವನ ಮೇಲೆ ಮೊಕದ್ದಮೆ ಹೂಡಿದರು. ಪ್ರಕರಣ ದಾಖಲಾಗಿದ್ದು ಧರ್ಮದಾಸರ ಕೋರ್ಟಿನಲ್ಲೇ.

ಪೊಲೀಸಿನವರ ಪತ್ತೆ ಕಾರ್ಯಾಚರಣೆ

ಧರ್ಮದಾಸರು ನೋಡುತ್ತಿದ್ದಂತೆಯೇ ಮಿಂಚಿನ ವೇಗದಲ್ಲಿ ಒಂದು ಹೀನಕೃತ್ಯ, ಘೋರಾಪರಾಧ ನಡೆದೇ ಹೋಯಿತು! ಕೋಪದ ಭರದಲ್ಲಿ ಸಿದ್ಧರಾಜು ತನ್ನ ಜೇಬಿನಿಂದ ಸರ‍್ರನೆ ಚಾಕುವನ್ನು ಈಚೆಗೆ ತೆಗೆದು ಒಂದೇ ಏಟಿನಲ್ಲಿ ರಾಮುವಿನ ಎದೆಗೆ ತಿವಿದ!! ರಕ್ತ ಕಾರಂಜಿಯಂತೆ ಝಲ್ಲೆಂದು ಚಿಮ್ಮಿತು. ಸಿದ್ಧರಾಜುವಿನ ಷರಟು ಪ್ಯಾಂಟ್‌ಗಳೆಲ್ಲ ರಕ್ತದಿಂದ ತೋಯ್ದು ಕೆಂಪಾದವು. ರಾಮು ಚೀರುತ್ತ ಧೊಪ್ಪನೆ ನೆಲಕ್ಕೆ ಬಿದ್ದ! ಕ್ಷಣಾರ್ಧದಲ್ಲೇ ಪ್ರಾಣ ನೀಗಿದ! ಸಿದ್ಧರಾಜು ಪರಾರಿ!!

ನಡೆಯಬೇಕಾದ ರೀತಿಯಲ್ಲಿ ನಡೆಯಲಿಲ್ಲ. ಅವರಿಗೆ ಸಹಾಯಕವಾಗುವಂತಹ ಪುರಾವೆಗಳು, ಪ್ರಮಾಣಗಳು, ಸಾಕ್ಷಿಗಳು ದೊರೆಯಲಿಲ್ಲ. ಕೊಲೆಯಲ್ಲಿ ಪ್ರಯೋಗಿಸಿದ ಚಾಕುವೂ ಅವರಿಗೆ ಸಿಗಲಿಲ್ಲ. ಕೇಸು ಮುಂದು ಮುಂದಕ್ಕೆ ಅಡ್ಜರ್ನ್ ಆಗುತ್ತಲೇ ಹೋಯಿತು. ಎಷ್ಟೋ ತಿಂಗಳುಗಳು ಉರುಳಿಹೋದುವು.

ಪೊಲೀಸಿನವರಿಗೆ ನೇರ ಪ್ರಮಾಣಗಳು ಸಿಗದಿದ್ದರೂ ಕೆಲವು ಸಾಂದರ್ಭಿಕ ಪುರಾವೆಗಳು ಸಿಕ್ಕಿದ್ದುವು. ಅವುಗಳ ಆಧಾರದ ಮೇಲೆಯೇ ಕೇಸು ಕುಂಟಿಕೊಂಡು ನಡೆಯುತ್ತಿತ್ತು. ಸಿದ್ಧರಾಜುವಿಗೂ, ರಾಮುವಿಗೂ ಮೊದಲಿನಿಂದಲೂ ಪರಸ್ಪರ ವೈಷಮ್ಯ, ದ್ವೇಷಗಳು ಇದ್ದುವೆಂದೂ, ಒಬ್ಬರ ಮೇಲೊಬ್ಬರು ಮುಯ್ಯಿ ತೀರಿಸಿಕೊಳ್ಳಲು ಹವಣಿಸುತ್ತಿದ್ದರೆಂದೂ ಮೂರು - ನಾಲ್ಕು ಜನ ಸಾಕ್ಷಿಗಳು ಕೋರ್ಟಿನಲ್ಲಿ ಹೇಳಿಕೆ ಕೊಟ್ಟಿದ್ದರು. ಸಿದ್ಧರಾಜುವು ರಾಮುವಿಗೆ ಬೆದರಿಕೆ ಹಾಕಿದ್ದನೆಂದು ಮತ್ತೊಬ್ಬ ಸಾಕ್ಷಿ ನುಡಿದಿದ್ದ. ಕೊಲೆ ಮಾಡಿದ ಮೇಲೆ ಸಿದ್ಧರಾಜು ಮನೆಬಿಟ್ಟು ಎಲ್ಲಿಗೋ ಓಡಿಹೋದನೆಂದೂ ಒಂದು ತಿಂಗಳ ನಂತರ ತಲೆ, ಮೀಸೆ ಬೋಳಿಸಿಕೊಂಡು ಬೇರೆ ಹೆಸರಿನಿಂದ ಅದೆಷ್ಟೋ ದೂರದ ಬಡಾವಣೆಯೊಂದರಲ್ಲಿ ಬೇರೆ ಮನೆ ಮಾಡಿಕೊಂಡು ವಾಸಿಸುತ್ತಿದ್ದನೆಂದೂ ಪತ್ತೆಹಚ್ಚಿ ಪೊಲೀಸಿನವರು ಅವನನ್ನು ದಸ್ತಗಿರಿ ಮಾಡಿದ್ದರು. ಇದೂ ಒಂದು ಸಾಂದರ್ಭಿಕ ಪುರಾವೆ ಎಂದು ಕೋರ್ಟಿನಲ್ಲಿ ನಮೂದಿಸಿದ್ದರು. ಆದರೆ ಇಂತಹ ಪರೋಕ್ಷ ಪುರಾವೆಗಳಿಂದ ತಮಗೆ ಜಯ ಸಿಗುತ್ತದೆಂದು ಪೊಲೀಸಿನವರೇ ನಂಬಿರಲಿಲ್ಲ.




ಎರಡು ಮೂರು ವರ್ಷಗಳು ಹೀಗೆಯೇ ಕಳೆದುಹೋದುವು. ಮೊಕದ್ದಮೆ ಮುಗ್ಗರಿಸುತ್ತ ಮುಂದುವರಿಯಿತು. ಕಡೆಗೂ ಪೊಲೀಸಿನವರು ಭಗೀರಥ ಪ್ರಯತ್ನ ಮಾಡಿ ಮತ್ತೊಬ್ಬ ಸಾಕ್ಷಿಯನ್ನು ಪತ್ತೆ ಹಚ್ಚಿ ಕೋರ್ಟಿನಲ್ಲಿ ಹಾಜರುಪಡಿಸಿದರು. ಈ ಹೊಸ ಸಾಕ್ಷಿ ಒಬ್ಬ ದರ್ಜಿ, ಹೆಸರು ಮುನಿಯಪ್ಪ. ಅವನ ಅಂಗಡಿ ಮೇನ್ ರೋಡಿನಲ್ಲಿ ಗಲ್ಲಿಗೆ ಎದುರಾಗಿಯೇ ಇತ್ತು. ಕೊಲೆಯಾದ ದಿನ ಅವನು ಅಂಗಡಿಯಿಂದ ಹೊರಬಂದು ಮೂತ್ರ ಮಾಡಲೆಂದು ಗಲ್ಲಿಯೆಡೆ ಹೋಗಲು ಹವಣಿಸುತ್ತಿದ್ದ. ಅದೇ ಘಳಿಗೆಯಲ್ಲಿ ಸಿದ್ಧರಾಜು ಗಲ್ಲಿಯಿಂದ ಓಡಿಬರುತ್ತಿದ್ದುದನ್ನು ಕಂಡನಂತೆ. ಅವನ ಷರಟು ಪ್ಯಾಂಟುಗಳೆಲ್ಲ ರಕ್ತದಿಂದ ತೋಯ್ದು ಕೆಂಪಾಗಿತ್ತಂತೆ, ಹೀಗೆಂದು ಅವನು ಕೋರ್ಟಿನಲ್ಲಿ ಹೇಳಿಕೆ ಕೊಟ್ಟ.

ಪೊಲೀಸಿನವರಿಗೆ ಖುಷಿಯಾಯಿತು. ಈ ಸಾಕ್ಷಿಯ ಹೇಳಿಕೆಯಿಂದ ತಾವು ಗೆಲ್ಲುವುದು ಸುನಿಶ್ಚಿತ ಎಂದು ಹಿಗ್ಗಿದರು. ಪ್ರತಿಪಕ್ಷದ ವಕೀಲರಿಗೆ ಪಾಟಿ ಸವಾಲು ಮಾಡಲು ಬಿಟ್ಟುಕೊಟ್ಟರು.

ಪ್ರತಿ ಪಕ್ಷದ ವಕೀಲರು ತುಂಬ ಪಳಗಿದ ಆಸಾಮಿ. ಅವರು ಮುನಿಯಪ್ಪನನ್ನು ನಾನಾ ವಿಧದಲ್ಲಿ ಪ್ರಶ್ನಿಸಿದರು. ಮುಖ್ಯವಾದ ಹಲವು ಪ್ರಶ್ನೆಗಳು ಈ ರೀತಿ ಇದ್ದುವು :

''ನಿನ್ನ ಹೆಸರೇನಪ್ಪ ? ''

'' ಮುನಿಯಪ್ಪ ಸಾರ್ ''

'' ಕಸುಬು ?''

''ಟೇಲರ್ ಅಂಗಡಿ ಇಟ್ಟಿದೀನಿ : ನಾನೊಬ್ಬ ದರ್ಜಿ''

'' ಅಂಗಡಿ ಎಲ್ಲಿದೆ ?''

''ಕನ್ಸರ್‌ವೆನ್ಸಿ ಗಲ್ಲಿಗೆ ಎದುರಿನಲ್ಲೇ ಮೇನ್ ರೋಡಿನಲ್ಲಿದೆ''.

''ದಿನಾಗಲೂ ಎಷ್ಟು ಹೊತ್ತಿಗೆ ಅಂಗಡಿಗೆ ಬಂದು ಬಾಗಿಲು ತೆಗೆಯುತ್ತಿ ?''

'' ಎಂಟು - ಎಂಟೂವರೆ ಗಂಟೆ ಹೊತ್ತಿಗೆ ''.

''ಕೊಲೆ ಆದ ದಿನ ಎಷ್ಟು ಗಂಟೆ ಹೊತ್ತಿಗೆ ಬಾಗಿಲು ತೆಗೆದೆ ?''

''ಎಂಟು ಗಂಟೆ ಹೊತ್ತಿಗೆ.''

''ಆ ಟೈಮಿನಲ್ಲಿ ನೀನು ಸಿದ್ಧರಾಜುವನ್ನು ನೋಡಿದೆಯಾ ?''

''ಹೌದು ಸಾರ್ , ನೋಡಿದೆ.''

''ಎಲ್ಲಿ ?''

''ಕನ್ಸರ್‌ವೆನ್ಸಿ ಗಲ್ಲಿಯಿಂದ ಮೇನ್ ರೋಡ್ ಕಡೆಗೆ ಓಡಿ ಬರುತ್ತಿದ್ದ.''

''ಅವನಲ್ಲಿ ಆ ದಿನ ಏನಾದರೂ ವಿಶೇಷತೆ ಇತ್ತ ?''

''ಇತ್ತು ಸಾರ್, ಅವನ ಷರಟು ಪ್ಯಾಂಟ್‌ಗಳೆಲ್ಲ ರಕ್ತದಿಂದ ತೋಯ್ದು ಕೆಂಪಾಗಿತ್ತು.''

''ಅದು ರಕ್ತದಿಂದ ತೋಯ್ದಿತ್ತು ಎಂದು ಹೇಗೆ ಹೇಳುತ್ತಿ ?''

''ರಕ್ತದ ತರಹ ಕೆಂಪಗಿತ್ತು. ಆದರಿಂದ ರಕ್ತವೇ ಇರಬೇಕೆಂದು ಊಹಿಸಿದೆ ''.

'' ಅದು ರಕ್ತವೇ ಹೌದು ಎಂದು ಲ್ಯಾಬೊರೇಟರಿಯಲ್ಲಿ ಪರೀಕ್ಷಿಸಿದೆಯಾ ?''

''ಇಲ್ಲ ಸಾರ್''

''ಸಿದ್ಧರಾಜು ಒಬ್ಬ ಪೇಂಟರ್ ಎಂದು ನಿನಗೆ ಗೊತ್ತಿರುವಾಗ, ಕೆಂಪು ಬಣ್ಣದ ಡಬ್ಬ ಕೈಜಾರಿ ಅವನ ಬಟ್ಟೆ ಮೇಲೆ ಬಿದ್ದು , ಕೆಂಪಗೆ ರಕ್ತದಂತೆ ಕಾಣಿಸುವುದು ಸಾಧ್ಯವಿಲ್ಲವಾ ?''

''ಸಾಧ್ಯವಿದೆ ಸಾರ್, ಅದು ಪೇಂಟ್ ಇದ್ದರೂ ಇರಬಹುದು: ನಾನು ಗ್ಯಾರಂಟಿಯಾಗಿ ಹೇಳಲಾರೆ.''

ಪ್ರತಿಪಕ್ಷದ ವಕೀಲ ತನ್ನ ಪಾಟಿ ಸವಾಲನ್ನು ಮುಗಿಸಿದ. ಮುಂದೆ ವಾದ - ಪ್ರತಿವಾದಗಳು ನಡೆದುವು. ಪೊಲೀಸಿನವರ ವಾದದಲ್ಲಿ ಜಾಸ್ತಿ ಸತ್ವವೇನೂ ಇರಲಿಲ್ಲ. ಆದರೆ ಸಿದ್ಧರಾಜುವಿನ ವಕೀಲರ ಪ್ರತಿವಾದ ಜೋರಾಗಿತ್ತು. ಅವರು ಮುಖ್ಯವಾದ ಎರಡು ಪಾಯಿಂಟ್‌ಗಳನ್ನು ಮಂಡಿಸಿದರು. ಮೊದಲನೆಯದು, ಕೊಲೆ ನಡೆದದ್ದು ಬೆಳಗ್ಗೆ ಏಳು ಗಂಟೆ ಸಮಯದಲ್ಲಿ. ಸಿದ್ಧರಾಜು ಕನ್ಸರ್‌ವೆನ್ಸಿ ಗಲ್ಲಿಯಿಂದ ಓಡಿಬಂದದ್ದು ಅದೇ ಹೊತ್ತಿನಲ್ಲಿ. ಆದರೆ ಮುನಿಯಪ್ಪ ಅಂಗಡಿಗೆ ಬಂದು ಬಾಗಿಲು ತೆಗೆದದ್ದು ಎಂಟು ಗಂಟೆ ಹೊತ್ತಿಗೆ ! ಈ ಕಾರಣದಿಂದ ಅವನು ಸಿದ್ಧರಾಜುವನ್ನು ನೋಡಿರಲು ಸಾಧ್ಯವೇ ಇರಲಿಲ್ಲ ! ಇವನೊಬ್ಬ ಸುಳ್ಳು ಸಾಕ್ಷಿ ಎಂದು ! ಎರಡನೇ ಪಾಯಿಂಟು, ಪೊಲೀಸಿನವರು ರಕ್ತದಿಂದ ತೋಯ್ದ ಬಟ್ಟೆಗಳನ್ನು ಲ್ಯಾಬೊರೇಟರಿಯಲ್ಲಿ ಪರೀಕ್ಷಿಸಿಯೂ ಇಲ್ಲ, ಕೋರ್ಟಿನಲ್ಲಿ ಹಾಜರೂ ಮಾಡಿಲ್ಲ. ಈ ಕಾರಣಗಳಿಂದ, ಸಿದ್ಧರಾಜುವಿನ ಷರಟು ಪ್ಯಾಂಟುಗಳು ರಕ್ತಮಯವಾಗಿತ್ತೆಂಬ ಅವರ ವರದಿಯಲ್ಲಿ ಏನೇನೂ ಸತ್ಯವಿಲ್ಲ; ಅವೆಲ್ಲ ಬರೀ ಊಹೆ ಮಾತ್ರ, ಸಿದ್ಧರಾಜುವಿನ ಮೇಲಿನ ಕೊಲೆ ಆರೋಪ ಸ್ಥಾಪಿತವಾಗಿಲ್ಲ ಎಂದು.

- ೩ -

ಜಸ್ಟಿಸ್ ಧರ್ಮದಾಸರು ಎರಡೂ ಪಕ್ಷಗಳ ಹೇಳಿಕೆಗಳನ್ನು, ವಾದ ಪ್ರತಿವಾದಗಳನ್ನೂ ಕೂಲಂಕಷವಾಗಿ ಅಧ್ಯಯನ ಮಾಡಿ ಪರಿಶೀಲಿಸಿದರು. ತದನಂತರ ತಮ್ಮ ತೀರ್ಪನ್ನು ನೀಡಿದರು. ಅದು ಹೀಗಿತ್ತು :

''ಪೊಲೀಸಿನವರು ಸಿದ್ಧರಾಜುವಿನ ಮೇಲೆ ಹೊರಿಸಿರುವ ಕೊಲೆ ಆರೋಪವನ್ನು ರುಜುವಾತು ಮಾಡಿಲ್ಲ. ಅವರ ವಾದದಲ್ಲಿ ಏನೇನೂ ಹುರುಳಿಲ್ಲ. ಅವನೇ ಕೊಲೆಗಾರನೆಂದು ನಿರ್ಣಯಿಸಲು ಯಾವ ಪ್ರಮಾಣಗಳನ್ನೂ ಕೋರ್ಟಿನ ಸಮಕ್ಷಮ ಮಂಡಿಸಿಲ್ಲ. ಈ ಕಾರಣಗಳಿಂದ ಸಿದ್ಧರಾಜುವೇ ಕೊಲೆ ಮಾಡಿದನೆಂಬ ಅವರ ವಾದವನ್ನು ಕೋರ್ಟು ಒಪ್ಪುವುದಿಲ್ಲ. ಅವನನ್ನು ಖುಲಾಸೆ ಮಾಡಲು ಕೋರ್ಟು ಆದೇಶ ನೀಡುತ್ತದೆ.''

ತಮ್ಮ ತೀರ್ಪು ನೂರಕ್ಕೆ ನೂರರಷ್ಟು ಕಾನೂನಿಗೆ ಅನುಗುಣವಾಗಿದೆಯೆಂದು ಧರ್ಮದಾಸರಿಗೆ ತುಂಬ ತೃಪ್ತಿಯಾಯಿತು !



ಬಿ. ವಿ. ಸುಬ್ಬರಾವ್
ನಂ. ೨೨೦೩/ಎಫ್, 'ಶ್ರೀನಿಧಿ', ೨೩ನೇ ಕ್ರಾಸ್, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

ಡಾ॥ ಎಚ್. ಎಸ್. ಮೋಹನ್

# ಧನದಾಹಿಗಳ ವಂಚನೆ ಅಮಾಯಕರ ಪುಪ್ಪುಸಕ್ಕೆ ವಿಷದ ಸಿಂಚನೆ



**ಭೋ**ಪಾಲದ ವಿಷಾನಿಲ ದುರಂತದ ಕರಾಳ ನೆನಪು ಇನ್ನೂ ಮಾಸಿಲ್ಲ. ಹಾಗೆಯೇ ಕಳೆದ ೧೦-೧೨ ವರ್ಷಗಳಿಂದ ಕೇರಳ-ಕರ್ನಾಟಕ ಗಡಿ ಪ್ರದೇಶಗಳಲ್ಲಿ ತೀವ್ರ ರೀತಿಯ ಹಾನಿ ಮಾಡುತ್ತಿರುವ ಎಂಡೋಸಲ್ಫಾನ್ ಕೀಟನಾಶಕ ಪುನಃ ಸುದ್ದಿಯಲ್ಲಿದೆ. ಇಂತಹುದೇ ಒಂದು ಸಂಭವಿಸಬಹುದಾದ ಮಾನವ ನಿರ್ಮಿತ ಅವಘಡಕ್ಕೆ ಬಿಹಾರ ಸಜ್ಜಾಗುತ್ತಿದೆ.

ನಮ್ಮ ದೇಶದ ಸಮರ್ಥ ಮುಖ್ಯಮಂತ್ರಿ ಎಂದು ಬಿಂಬಿತವಾಗುತ್ತಿರುವ ಬಿಹಾರದ ನಿತೀಶ್‌ಕುಮಾರ್ ಅವರ ಕೈಗಾರಿಕಾ ನೀತಿ ಪರಿಸರ ತಜ್ಞರ, ಪರಿಸರ ಕಾರ್ಯಕರ್ತರ ಮತ್ತು ವೈದ್ಯವಿಜ್ಞಾನಿಗಳ ತೀವ್ರ ಟೀಕೆಗೆ ಒಳಗಾಗಿದೆ. ದೇಶದ ಎಲ್ಲರ ಕಣ್ಣು ಅವರ ಕೈಗಾರಿಕಾ ನೀತಿಯ ಬೆಳವಣಿಗೆಯ ಬಗೆಗೆ ನೋಡುತ್ತಿದ್ದರೆ, ಬಿಷ್ಣುಪುರ್-ಚೈನ್‌ಪುರ್ ಹಳ್ಳಿಯ ೨೫೦೦೦ ಜನರ ಜೀವನ ಹದಗೆಡುವ ಸ್ಥಿತಿಯಲ್ಲಿದೆ. ಅಲ್ಲಿಯವರೆಗೆ ದೇಶದ ಹೆಚ್ಚಿನ ಭಾಗದ ಹಳ್ಳಿಗಳಂತೆ ನಿದ್ದೆಯ ಮಂಪರಿನಲ್ಲಿದ್ದ ಈ ವಲಯ (ಭಾಗ) ಜುಲೈ ೨೦೧೦ರಿಂದ ಹಣಾಹಣೀ ಕಾಳಗದ ರಣರಂಗವಾಗಿದೆ. ಕಳೆದ ನವೆಂಬರ್ (೨೦೧೦)ನಲ್ಲಿ ಕಲ್ಕತ್ತಾ ಮೂಲದ ಬಾಲ್ಮುಕುಂದ್ ಸಿಮೆಂಟ್ ಮತ್ತು ರೂಫಿಂಗ್ ಲಿ. ಸಂಸ್ಥೆ ಬಿಹಾರದ ಮುಜಫರಪುರ ಜಿಲ್ಲೆಯ ಮಾರ್ವನ್ ಭಾಗದಲ್ಲಿ ಆಬ್ಸೆಸ್ಟೋಸಿಸ್ (ಕಲ್ನಾರಿನ) ಸಿಮೆಂಟ್ ಛಾವಣಿಯ ಮೇಲುಹೊದಿಕೆ ತಯಾರಿಸುವ ಫ್ಯಾಕ್ಟರಿಯನ್ನು ಸ್ಥಾಪಿಸಲು ಉದ್ದೇಶಿಸಿತು. ಈ ಘಟಕ ಸ್ಥಾಪನೆಯಾದರೆ ವಾರ್ಷಿಕ ೩ ಲಕ್ಷ ಟನ್‌ನಷ್ಟು ಕಲ್ನಾರಿನ ಸಿಮೆಂಟ್ ಛಾವಣಿಯ ಮೇಲು ಹೊದಿಕೆ ಉತ್ಪಾದನೆಯಾಗಬಹುದು. ವಿಪರ್ಯಾಸವೆಂದರೆ, ಹಾಗಾದರೆ ಜಗತ್ತಿನ ಅತಿ ದೊಡ್ಡ ಕಲ್ನಾರಿನ ಅವಘಡ 'ಟರ್ನರ್ ಮತ್ತು ನ್ಯೂ ಆಲ್' (ವಿವರ ಮುಂದಿದೆ) ರೀತಿಯ ಮತ್ತೊಂದು ಅವಘಡ ಸಂಭವಿಸುವ ಸಾಧ್ಯತೆ ಇದೆ.

ಕಂಪನಿಯ ಅಧಿಕಾರಿಗಳೊಂದಿಗೆ ಶಾಮೀಲಾಗಿರುವ ಜಿಲ್ಲಾಡಳಿತದೊಂದಿಗೆ ಈ ಬಡ ಹಳ್ಳಿಗರು ಹೋರಾಡುತ್ತಿದ್ದಾರೆ. ಹಳ್ಳಿಗರು ಧರಣಿ, ಸತ್ಯಾಗ್ರಹ ನಡೆಸುತ್ತಿದ್ದರೂ ಫ್ಯಾಕ್ಟರಿಯ ಕೆಲಸಗಳು ಮುಂದುವರಿಯುತ್ತಿವೆ. ತಾತ್ಕಾಲಿಕವಾಗಿ ಕೆಲಸ ನಿಲ್ಲಿಸುವುದಾಗಿ ಜಿಲ್ಲಾಡಳಿತ ಮೊದಲು ಭರವಸೆ ಕೊಟ್ಟಿತ್ತು. ಅದು ಈಡೇರದಿದ್ದಾಗ ಡಿಸೆಂಬರ್ ೨೦೧೦ರಲ್ಲಿ ಹಳ್ಳಿಗರು ಅನಿರ್ದಿಷ್ಟ ಧರಣಿ ಕೈಗೊಂಡರು.

ಈ ಬೆಳವಣಿಗೆಗಳ ಮಧ್ಯೆಯೇ ಕಂಪನಿ ಆಡಳಿತ ೫೦ ಸಶಸ್ತ್ರ ಗೂಂಡಾಗಳನ್ನು ಕಳಿಸಿ ಧರಣಿ, ಮುಷ್ಕರ ಭೇದಿಸಲು ಹುನ್ನಾರ ನಡೆಸಿತು. ಆಗ ನಡೆದ ಗಲಾಟೆಯ ಪರಿಣಾಮವಾಗಿ ಜರುಗಿದ ಗೋಲಿಬಾರ್‌ನಲ್ಲಿ ಆರು ಹಳ್ಳಿಗರಿಗೆ ತೀವ್ರ ರೀತಿಯ ಮಾರಣಾಂತಿಕ ಹೊಡೆತ ಬಿದ್ದಿದೆ ಎಂಬುದು ವಿಪರ್ಯಾಸ. ಇಷ್ಟು ಸಾಲದೆಂಬಂತೆ ಉರಿಯುವ ಬೆಂಕಿಗೆ ತುಪ್ಪ ಹಾಕುವಂತೆ, ಸಂಬಂಧಪಟ್ಟ ಪಾತಕಿಗಳನ್ನು ಅಥವಾ ಗೂಂಡಾಗಳನ್ನು ಬಂಧಿಸುವ ಬದಲು ಜನರನ್ನು ಪ್ರಚೋದಿಸುತ್ತಿದ್ದಾರೆಂಬ ಆಪಾದನೆಯ ಮೇಲೆ ಈ ಮುಷ್ಕರದ ಇಬ್ಬರು ನಾಯಕರನ್ನು ಬಂಧಿಸಿ ಜೈಲಿನಲ್ಲಿಟ್ಟಿದ್ದಾರೆ.

ಈ ಮೇಲಿನ ಫ್ಯಾಕ್ಟರಿ ಸಿದ್ಧವಾದಾಗ ಅದು ಕ್ರೈಸೋಟೈಲ್ ಎಂಬ ರಾಸಾಯನಿಕ ವಸ್ತುವನ್ನು ಉತ್ಪಾದಿಸುತ್ತದೆ. ಇದು ಬಿಳಿಯ ಕಲ್ನಾರಿನ ರಾಸಾಯನಿಕ ಹೆಸರು. ವಿಶ್ವದಾದ್ಯಂತ ಈಗ ೯೫% ವ್ಯಾಪಾರ ನಡೆಯುತ್ತಿರುವುದೇ ಈ ಕಲ್ನಾರಿನದು. ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ 'ಕಲ್ನಾರು – ಕಟ್ಟಡಗಳ ಛಾವಣಿ ಹೊದಿಕೆಗಳನ್ನು ತಯಾರಿಸಲು ಮತ್ತು ಪದರಗಳನ್ನು ಛೇದಿಸಲು ಬಳಸುವ ನಾರುಪದಾರ್ಥ'. ಮುಂದುವರಿದು, ''ಎಲ್ಲಾ ರೀತಿಯ ಕಲ್ನಾರಿನ ಉಪಯೋಗದಿಂದ ಶ್ವಾಸಕೋಶ ಅಥವಾ ಪುಪ್ಪುಸದ ಕ್ಯಾನ್ಸರ್ 'ಮೀಸೋಥೀಲಿಯೋಮಾ', ಧ್ವನಿಪಟ್ಟಿಗೆ ಮತ್ತು ಅಂಡಾಣುಗಳ ಕ್ಯಾನ್ಸರ್‌ಗಳು ಬರುವುದಲ್ಲದೆ ಪುಪ್ಪುಸ ಕಲ್ನಾರು ಬೇನೆ ಬರುತ್ತದೆ'', ಎಂದು ವಿಶ್ವ

ಆರೋಗ್ಯ ಸಂಸ್ಥೆ ಸ್ಪಷ್ಟವಾಗಿ ತಿಳಿಸುತ್ತದೆ. ಅಂತರರಾಷ್ಟ್ರೀಯ ಆರೋಗ್ಯದ ಪರಿಸರದ ನಿಯಮಗಳೂ ಇದನ್ನೇ ಪ್ರತಿಪಾದಿಸುತ್ತವೆ. ಮತ್ತೊಂದು ಪ್ರಮುಖ ಅಂಶವೆಂದರೆ ಈ ಫ್ಯಾಕ್ಟರಿಯ 'ಪರಿಸರ ಪರಿಣಾಮ ನಿರ್ಧಾರಕ' ವರದಿಯ ಪ್ರಕಾರವೇ ವಾರ್ಷಿಕ ೨೯,೦೦೦ ಟನ್‌ಗಳಷ್ಟು ಕಚ್ಚಾ ಕಲ್ನಾರಿನ ನಾರುಗಳನ್ನು ಕೆನಡಾ, ಬ್ರೆಜಿಲ್ ಮತ್ತು ಜಿಂಬಾಬ್ವೆಗಳಿಂದ ಆಮದು ಮಾಡಿಕೊಳ್ಳಲಾಗುತ್ತಿದೆ.

ಮತ್ತೊಂದು ಗಮನಾರ್ಹವಾದ ಅಂಶವೆಂದರೆ ಪರಿಸರ ಪರಿಣಾಮ ನಿರ್ಧಾರಕವನ್ನು ೨೦೦೬ರಲ್ಲಿ ಈ ಫ್ಯಾಕ್ಟರಿ ಮಾಡಿಕೊಳ್ಳುವಾಗ ಅದು ಕೆಲವೊಂದು ನಿಬಂಧನೆಗಳಿಗೆ ಒಳಪಡುವಂತೆ ಒಪ್ಪಂದ ಮಾಡಿಕೊಂಡಿದೆ. ಅದರ ಪ್ರಕಾರ ಈ ಸಂಸ್ಥೆಯಿಂದ ಈ ಉದ್ದೇಶಕ್ಕೆ ಬಳಸುವ ಜಮೀನು ಅಥವಾ ಭೂಮಿ 'ಸಂಪೂರ್ಣವಾಗಿ ಬಂಜರು' ಭೂಮಿ ಮತ್ತು ಈ ಪ್ರದೇಶ ಯಾವುದೇ ಗ್ರಾಮ ಅಥವಾ ಪಟ್ಟಣಗಳಿಂದ ೧೫ ಕಿ.ಮೀ. ದೂರ ಇರಬೇಕು ಎಂದಿದೆ. ಆದರೆ ವಸ್ತುಸ್ಥಿತಿ ಹಾಗಿಲ್ಲ, ಬಿಷ್ಣುಪುರ್-ಚೈನ್‌ಪುರ್ ಪ್ರದೇಶಗಳ ಆಸುಪಾಸಿನಲ್ಲಿರುವ ಈ ಪ್ರದೇಶದ ಸುತ್ತಲೂ ಗೋಧಿ ಬೆಳೆಯುವ ಜಮೀನುಗಳಿವೆ. ಹಲವಾರು ಸಸ್ಯಗಳಿಂದ ಕೂಡಿದ ಕಾಡುಗಳಿವೆ. ದಟ್ಟ ಜನವಸತಿ ಇದೆ. ತಾನು ೧೭.೮ ಎಕರೆಗಳಷ್ಟು ಜಮೀನು ಈ ಉದ್ದೇಶಕ್ಕೆ ಕೊಂಡಿದ್ದೇನೆ ಎಂದು ಆ ಕಂಪೆನಿ ಹೇಳಿಕೊಂಡರೆ, ಅಲ್ಲಿನ ನಿವಾಸಿಗಳ ಪ್ರಕಾರ ೪೪ ಎಕರೆಗಳಷ್ಟು ಭೂಮಿ ಆ ಕಂಪನಿಯ ಹೆಸರಿನಲ್ಲಿ ರಿಜಿಸ್ಟರ್ ಆಗಿದೆ. ಈ ಪ್ರದೇಶದ ೫೦೦ ಮೀಟರುಗಳಷ್ಟು ಅಂತರದಲ್ಲಿಯೇ ೩ ಶಾಲೆಗಳು, ಫ್ಯಾಕ್ಟರಿ ಕಟ್ಟುತ್ತಿರುವ ಸ್ಥಳದ ೧೦೦೦ ಮೀಟರ್‌ಗಳ ಅಂತರದಲ್ಲಿ ೧೫-೨೦ ಶಾಲೆಗಳು ಹಾಗೂ ಒಂದು ಡಜ಼ನ್‌ಗೂ ಅಧಿಕ ಸಂಖ್ಯೆಯ ಅಂಗನವಾಡಿ ಶಾಲೆಗಳಿವೆ.



ಪುಪ್ಪುಸ ಕಲ್ನಾರು ಬೇನೆಯಿಂದ
ಕೆಟ್ಟು ಹೋದ ಅಂಗಗಳು

ಕಲ್ನಾರಿನ ವಿರುದ್ಧದ ಯಾವುದೇ ವೈಜ್ಞಾನಿಕ ವರದಿ ಆಧರಿಸಿ ಮೊದಲು ತಿಳಿಸಿದ ಸ್ಥಳೀಯರ ವಿರೋಧ, ಧರಣಿ ಮತ್ತು ಚಳುವಳಿಗಳು ಈಗ ರೂಪುಗೊಂಡಿಲ್ಲ. (ಈ ಚಳುವಳಿಗಳಲ್ಲಿ ಗಮನಾರ್ಹ ಸಂಖ್ಯೆಯಲ್ಲಿ ಮಹಿಳೆಯರು ಮತ್ತು ಮಕ್ಕಳು ಇದ್ದರು ಎಂಬುದು ವಿಶೇಷ). 'ಕೊಲ್ಲುವ ಧೂಳಿ'ನ ನೈಜ ಅನುಭವದ ಆಧಾರದ ಮೇಲೆ ಈ ಚಳುವಳಿ ಹುಟ್ಟಿಕೊಂಡಿತು ಎಂಬುದು ವಿಶೇಷ. ರಾಜಸ್ಥಾನದ ಜೈಪುರದ ಕಲ್ನಾರಿನ ಫ್ಯಾಕ್ಟರಿಯಲ್ಲಿ ಬಹಳ ವರ್ಷ ದುಡಿದ ಬಿಷ್ಣುಪುರ್-ಚೈನ್‌ಪುರ್ ಹಳ್ಳಿಯ ೩ ಕಾರ್ಮಿಕರು ಪುಪ್ಪುಸದ ಹೊರಭಾಗದ ಪದರ ದಪ್ಪವಾಗುವುದರಿಂದ ತುಂಬಾ ದಯನೀಯ ಸ್ಥಿತಿಯಲ್ಲಿ ೧೯೯೬ರಲ್ಲಿ ಅಸು ನೀಗಿದ್ದರು.

ಈ ಎಲ್ಲ ಮಾಹಿತಿಯ ಅರಿವಿದ್ದರೂ ಸ್ಥಳೀಯ ಜಿಲ್ಲಾಡಳಿತ ೨೦೧೧ರ ಜುಲೈನಿಂದ ಯಾವುದೇ ರೀತಿಯ ಚಳುವಳಿ ಅಥವಾ ವಿರೋಧವನ್ನು ಮಟ್ಟಹಾಕಲು ಪಣತೊಟ್ಟಂತಿದೆ. ಸ್ಥಳೀಯರಿಂದ ಜಮೀನು ವಶಪಡಿಸಿಕೊಳ್ಳುವಾಗ ಆ ಪ್ರದೇಶದಲ್ಲಿ ವ್ಯವಸಾಯ ಆಧರಿತ ಫ್ಯಾಕ್ಟರಿ ಅಥವಾ ಸಕ್ಕರೆ ಗಿರಣಿ ಬರುತ್ತದೆ ಎಂದು ಅವರನ್ನು ನಂಬಿಸಲಾಗಿದೆ. ಫ್ಯಾಕ್ಟರಿ ಕಟ್ಟುತ್ತಿರುವ ಈ ಹಂತದಲ್ಲಿ ಸಹ ಯಾವ ಉದ್ದೇಶಕ್ಕೆ ಇದನ್ನು ನಿರ್ಮಿಸಲಾಗುತ್ತಿದೆ ಎಂಬ ಯಾವ ಸೂಚನಾ ಫಲಕಗಳೂ ಇಲ್ಲ. ಜನರ ಒತ್ತಾಯಕ್ಕೆ ಮಣಿದು ಬಿಹಾರ ರಾಜ್ಯದ ಮಾಲಿನ್ಯ ನಿಯಂತ್ರಣ ಮಂಡಳಿಯು ೨೦೧೧ರ ಜೂನ್ ೨೮ರಂದು ಒಂದು 'ಪಬ್ಲಿಕ್ ಹಿಯರಿಂಗ್' ಏರ್ಪಡಿಸಿತ್ತು. ಆದರೆ ಆಗ ನಡೆದ ಪ್ರಕ್ರಿಯೆಗಳೆಲ್ಲಾ ಕೇವಲ ಕಣ್ಣೊರೆಸುವ ತಂತ್ರವಾಗಿತ್ತು.

ಪರಿಸರ ಪರಿಣಾಮ ನಿರ್ಧಾರಕ ವರದಿ ಮತ್ತು ಇಲ್ಲಿಯವರೆಗಿನ ಕಡತ ಮತ್ತು ವಿದ್ಯಮಾನಗಳ ನಡವಳಿಕೆಗಳು– ಯಾವುದನ್ನೂ ಸ್ಥಳೀಯ ಭಾಷೆಯಲ್ಲಿ ಜನರಿಗೆ ತಿಳಿಸುವಂತೆ ಪ್ರಕಟಿಸಿಲ್ಲ. (ಜನರಿಗೆ ಈ ಬಗೆಗೆ ತಿಳಿದು ಅವರು ಹೋರಾಟಕ್ಕೆ ಬರಬಾರದೆಂಬುದೇ ಅವರ ಉದ್ದೇಶವಲ್ಲವೇ!) ''ಕೇಂದ್ರ ಸರ್ಕಾರದ ಪರಿಸರ ಇಲಾಖೆಯ ಅಧಿಕಾರಿಗಳೂ ಇಲ್ಲಿಗೆ ಭೇಟಿ ಕೊಟ್ಟಿಲ್ಲ'' ಎನ್ನುತ್ತಾರೆ ಈ ಬಗೆಗೆ ಹೋರಾಡುತ್ತಿರುವ 'ಖೇತ್ ಬಚಾವೋ ಜೀವನ್ ಬಚಾವೋ ಸಂಘರ್ಷ ಸಮಿತಿ'ಯ ಸಂಚಾಲಕರಾದ ರಾಮಚಂದ್ರ ರೈ. ಬಿಹಾರದಲ್ಲಿ ಆರೋಗ್ಯದ ಈ ರೀತಿಯ ಸಮಸ್ಯೆಗಳಿಗೆ ಅಗತ್ಯವಿರುವ ಪರಿಸರ ಮತ್ತು ಆಕ್ಯುಪೇಷನಲ್ ಆರೋಗ್ಯ ಕೇಂದ್ರಗಳಿಲ್ಲದಿರುವುದರಿಂದ ಆ ಬಗೆಗೆ ಕಂಪನಿಯವರು ಆರೋಗ್ಯದ ದುಷ್ಪರಿಣಾಮಗಳ ಬಗೆಗೆ ಮಾಹಿತಿ ಕೊಡಬೇಕಾಗಿತ್ತು. ಆದರೆ ಅವನ್ನೆಲ್ಲಾ ಉದ್ದೇಶಪೂರ್ವಕವಾಗಿ ರಹಸ್ಯವಾಗಿಟ್ಟಿರುವುದು ಯಾರಿಗಾದರೂ ತಿಳಿಯುವಂತಹುದೆ. ಇಷ್ಟೆಲ್ಲಾ ನಿಯಮಗಳನ್ನು ಧಿಕ್ಕರಿಸಿರುವ ಈ ಕಂಪನಿಗೆ ಕಳೆದ ಅಕ್ಟೋಬರ್‌ನಲ್ಲಿ ಕೇಂದ್ರ ಸರ್ಕಾರದ ಪರಿಸರ ಮತ್ತು ಅರಣ್ಯ ಖಾತೆ ಪರವಾನಗಿ ನೀಡಿದೆ. (ಇದು ನಮ್ಮ ದೇಶದ ಎಲ್ಲ ಕಡೆ ನಡೆಯುತ್ತಿರುವ ವಿದ್ಯಮಾನ).

ಈ ಕಂಪನಿಯ ವಿರುದ್ಧ ಹೋರಾಡುತ್ತಿರುವ ಹೋರಾಟಗಾರರು ಇಲ್ಲಿ ಮಾತ್ರವಲ್ಲ, ಅಂತರರಾಷ್ಟ್ರೀಯ ಮಟ್ಟದಲ್ಲಿ ಕ್ರೈಸೋಟೈಲ್ ಅನ್ನು ನಿಷೇಧಿಸುವುದೇ ತಮ್ಮ ಉದ್ದೇಶ ಎಂದು ಅಭಿಪ್ರಾಯಪಡುತ್ತಾರೆ.

ಪ್ರತಿವರ್ಷ ೧,೫೦,೦೦೦ ಟನ್‌ನಷ್ಟು ಕಲ್ನಾರನ್ನು ಕೆನಡಾ ದೇಶ ಬೆಳವಣಿಗೆ ಹೊಂದುತ್ತಿರುವ ಭಾರತ, ಇಂಡೋನೇಶಿಯಾ, ಫಿಲಿಪ್ಪೈನ್ಸ್ ದೇಶಗಳಿಗೆ ರಫ್ತು ಮಾಡುತ್ತಿದೆ. ಕಲ್ನಾರಿನ ಬಗೆಗೆ ಮೇಲಿನ ಕಂಪನಿ ಬಿಡುಗಡೆ ಮಾಡಿರುವ ಪರಿಸರದ ಬಗೆಗಿನ ಮಾಹಿತಿ ಅದರ ಉಪಯೋಗಗಳನ್ನು ಹಾಡಿ ಹೊಗಳಿದರೆ, ಅದರಿಂದ ಉಂಟಾಗುವ ಪರಿಸರ ಮತ್ತು ಉದ್ಯೋಗ ಸಂಬಂಧಿ ಆರೋಗ್ಯದ ಮೇಲಿನ ದುಷ್ಪರಿಣಾಮಗಳನ್ನು ಉದ್ದೇಶಪೂರ್ವಕವಾಗಿಯೇ ಮರೆಮಾಚಿದೆ. ೦.೫ ಕಣಗಳು/ ಸಿ.ಸಿ. ಗಿಂತ ಕಡಿಮೆ ಪ್ರಮಾಣದಲ್ಲಿ ನಾರಿನ ಅಂಶ ಫ್ಯಾಕ್ಟರಿಯಿಂದ ಹೊರಗೆಡಹುವುದಾಗಿ ಉದ್ಯಮ ಈ ಮಾಹಿತಿಯಲ್ಲಿ ತಿಳಿಸಿದೆ. ಆದರೆ 'ಸುರಕ್ಷಿತ' ಅಥವಾ ನಿಯಮಿತ ಪ್ರಮಾಣದ ಕಲ್ನಾರು ಆರೋಗ್ಯಕ್ಕೆ ಮಾರಕವಲ್ಲ ಎಂಬ ಅಂಶವೇ ಇಲ್ಲ. ಅಂದರೆ ಯಾವುದೇ ಪ್ರಮಾಣದ ಕಲ್ನಾರಿನ ಕಣಗಳು ಮಾನವ ದೇಹಕ್ಕೆ ಅನಾರೋಗ್ಯಕರ ಎಂಬುದು ದೃಢಪಟ್ಟಿದೆ.

**ಇಂಗ್ಲೆಂಡಿನ ಟರ್ನರ್ ಮತ್ತು ನ್ಯೂ ಆಲ್ ಅವಘಡ**

ಇಂಗ್ಲೆಂಡಿನ ಲಂಕಾಷೈರ್‌ನ ಟರ್ನರ್ ಮತ್ತು ನ್ಯೂ ಆಲ್ ಕಂಪನಿ ೧೯೬೧ರಲ್ಲಿ ಆ ಬಗೆಗೆ ಗೊತ್ತಿದ್ದಾಗ್ಯೂ ಲಕ್ಷಾಂತರ ಜನರನ್ನು ಕ್ಯಾನ್ಸರ್ ಧೂಳಿಗೆ ಒಡ್ಡಿತು. ಹಲವಾರು ವರ್ಷಗಳವರೆಗೆ ಈ ಹಾನಿಕಾರಿ ಬೆಳವಣಿಗೆ ಅಲ್ಲಿನ ನಿವಾಸಿಗಳ ಗಮನಕ್ಕೇ ಬರಲಿಲ್ಲ. ಚಳಿಗಾಲ ಹೆಚ್ಚಿರುವ ಆ ಪ್ರದೇಶದಲ್ಲಿ ಕೆಲವು ಮರಗಳು ಬಿಳಿಯ ಬಣ್ಣ ತಳೆಯತೊಡಗಿದ್ದವು. ಮಂಜಿನ ಹನಿಗಳು ಆವರಿಸಿರುವುದರಿಂದ ಹಾಗಾಗಿರಬಹುದು ಎಂದು ಜನರು ಮೊದಲು ಭಾವಿಸಿದರು. ಆದರೆ ಅದು ಆ ಫ್ಯಾಕ್ಟರಿಯ ಗಾಳಿ ಹೊರಬರುವ ಫ್ಯಾನ್ ಗಾಳಿಯಿಂದ ಹೊರಹಾಕಲ್ಪಟ್ಟ ಕಲ್ನಾರಿನ ಕಣಗಳು, ಧೂಳು ಅದಕ್ಕೆ ಕಾರಣ ಎಂದು ಬಹಳ ತಡವಾಗಿ ಗೊತ್ತಾಯಿತು. ಈಗ ಇಂಗ್ಲೆಂಡಿನಲ್ಲಿ ಕಲ್ನಾರಿನ ಈ ಕಾಯಿಲೆಯಿಂದ ಪ್ರತಿ ವರ್ಷ ೨೦೦೦ ಜನ ಸಾಯುತ್ತಿದ್ದಾರೆ. ಅವರಲ್ಲಿ ಹೆಚ್ಚಿನವರು ಈ ಭಾಗದವರು. ೧೯೮೦ರಲ್ಲಿ 'ನ್ಯೂ ಸ್ಟೇಟ್ಸ್‌ಮನ್' ಪತ್ರಿಕೆ ಅಲ್ಲಿನ ಆಸುಪಾಸಿನ ಮನೆಗಳಲ್ಲಿ ಪ್ರತಿ ಮನೆಯಲ್ಲಿಯೂ ಕಲ್ನಾರಿಗೆ ಸಂಬಂಧಪಟ್ಟ ಕ್ಯಾನ್ಸರ್ ಕಾಯಿಲೆಯಿಂದ ಒಬ್ಬರಾದರೂ ಸಾವನ್ನಪ್ಪಿದ್ದಾರೆ (ಅವರ್ಯಾರೂ ಆ ಫ್ಯಾಕ್ಟರಿಯಲ್ಲಿ ಕೆಲಸ ಮಾಡಿದ ಉದ್ಯೋಗಿಗಳಲ್ಲ) ಎಂದು ವರದಿ ಮಾಡಿತ್ತು.

**ಕಲ್ನಾರಿನಿಂದ ಉದ್ಭವಿಸುವ ಆರೋಗ್ಯ ಸಂಬಂಧಿ ತೊಂದರೆಗಳು**

ಕಲ್ನಾರಿನ ಕಣಗಳು ದೀರ್ಘಕಾಲ ಶ್ವಾಸಕೋಶ ಪ್ರವೇಶಿಸಿ 'ಪುಪ್ಪುಸ ಕಲ್ನಾರು ಬೇನೆ' (ಆ್ಯಬ್ಸೆಸ್ಟೋಸಿಸ್) ಕಾಯಿಲೆ ಉಂಟುಮಾಡುತ್ತವೆ. ಇದರ ಮುಖ್ಯ ಲಕ್ಷಣ ಎಂದರೆ ಉಸಿರು ಕಟ್ಟುವುದು (ದಮ್ಮಿನ ರೀತಿ). ಇದು ದೈಹಿಕ ಶ್ರಮ ಮಾಡಿದಾಗ ಆರಂಭದಲ್ಲಿ ಕಾಣಿಸಿಕೊಂಡು ಕ್ರಮೇಣ ವ್ಯಕ್ತಿ ವಿಶ್ರಾಂತಿ ತೆಗೆದುಕೊಳ್ಳುತ್ತಿರುವಾಗ ಸಹ ಕಾಣಿಸಿಕೊಳ್ಳುತ್ತದೆ. (ಇದರರ್ಥ ತೀವ್ರ ರೀತಿಯಲ್ಲಿ ಶ್ವಾಸಕೋಶ ಹಾಳಾಗಿದೆ ಎಂದು). ಜೊತೆಯಲ್ಲಿ ಆಗಾಗ ಕೆಮ್ಮು, ಎದೆನೋವು ಬರಬಹುದು. ಕೆಲವೊಮ್ಮೆ ಕೈ ಬೆರಳುಗಳ ತುದಿ ಅಗಲವಾಗಿ ವರ್ತುಲಾಕಾರದ ರೀತಿ ಮಾರ್ಪಡುವ 'ಕ್ಲಬ್ಬಿಂಗ್' ಎಂಬ ಊನತೆ ಸಹಿತ ಕಾಣಿಸಿಕೊಳ್ಳಬಹುದು. ಧೂಮಪಾನ ಮಾಡಿದರೆ 'ಪುಪ್ಪುಸ ಕಲ್ನಾರು ಬೇನೆ' ಹೆಚ್ಚಾಗುವುದಲ್ಲದೆ ಶ್ವಾಸಕೋಶದ ಕ್ಯಾನ್ಸರ್ ಬರುವ ಸಾಧ್ಯತೆ ಹೆಚ್ಚುತ್ತದೆ.

ಆ ಕಾಯಿಲೆಯಲ್ಲದೆ ಶ್ವಾಸಕೋಶದ ಹೊರಪದರದ ಕ್ಯಾನ್ಸರ್ ಮಿಸೋಥೀಲಿಯೋಮಾ, ಗಂಟಲಿನ ಕ್ಯಾನ್ಸರ್, ಅನ್ನನಾಳದ ಕ್ಯಾನ್ಸರ್, ಧ್ವನಿಪೆಟ್ಟಿಗೆಯ ಕ್ಯಾನ್ಸರ್‌ಗಳಲ್ಲದೆ ಅಪರೂಪವಾಗಿ ಜಠರ ಮತ್ತು ದೊಡ್ಡ ಕರುಳಿನ ಕ್ಯಾನ್ಸರ್ ಸಹಿತ ಕಲ್ನಾರಿನ ಧೂಳಿನ ಕಣಗಳಿಂದ ಬರಬಹುದು.

ಕಲ್ನಾರಿನ ಉದ್ಯಮದಲ್ಲಿ ತೊಡಗಿಕೊಂಡವರಲ್ಲಿ ಮಾತ್ರವಲ್ಲದೆ ಅದನ್ನು ಉಪಯೋಗಿಸುವ ವ್ಯಕ್ತಿಗಳಲ್ಲೂ ಆರೋಗ್ಯದ ತೊಡಕುಗಳು ಕಾಣಿಸಿಕೊಳ್ಳಬಹುದು ಎಂಬುದು ತುಂಬ ಆಘಾತಕಾರಿ ಅಂಶ.

ಆಬ್ಸೆಸ್ಟೋಸಿಸ್ ಎಂದರೆ ಗ್ರೀಕ್ ಭಾಷೆಯಲ್ಲಿ 'ನಾಶಪಡಿಸಲಾಗದ್ದು' ಎಂದರ್ಥ. ಹಾಗಾಗಿ ಇದು ಕಠಿಣವಾಗಿರುತ್ತದೆ, ಬಾಳಿಕೆ ಬರುತ್ತದೆ, ತೀವ್ರ ಪ್ರಮಾಣದ ತಾಪಮಾನ (ಉಷ್ಣಾಂಶ) ಮತ್ತು ರಾಸಾಯನಿಕಗಳ ಪ್ರಭಾವಕ್ಕೂ ಒಳಗಾಗುವುದಿಲ್ಲ. ಹಾಗಾಗಿ ನಾಶವಾಗುವುದಿಲ್ಲ. ಈ ವಸ್ತುವಿನಿಂದ ೩೦೦೦ ರೀತಿಯ ಉಪಯೋಗಗಳಿವೆ. (ಉದಾಹರಣೆಗೆ ನೆಲಕ್ಕೆ ಹಾಸುವ ಟೈಲ್ಸ್ ಅಥವಾ ಹೊದಿಕೆ, ಮನೆಗಳ ಅಥವಾ ಕಟ್ಟಡಗಳ ನಿರ್ಮಾಣದಲ್ಲಿ.) ಅವೆಲ್ಲಾ ಸರಿಯೇ ಆದರೆ ಕಳೆದ ಕೆಲವು ದಶಕಗಳ ಅಧ್ಯಯನವು ಇದು 'ಮಾನವ ಆರೋಗ್ಯಕ್ಕೆ ತೀವ್ರ ಹಾನಿಕಾರಕ' ಎಂಬುದನ್ನು ದೃಢಪಡಿಸಿದೆ. ೧೯೬೭-೯೭ರ ಅವಧಿಯಲ್ಲಿ ಅಮೆರಿಕಾದಲ್ಲೇ ೧,೭೧,೫೦೦ ಜನರು ಕ್ಯಾನ್ಸರ್‌ಗೆ ಒಳಗಾಗಿ ಮರಣ ಹೊಂದಿದರು. ಇನ್ನು ಇತರೆಡೆ ಹಾಗೆ ಮರಣ ಹೊಂದಿದವರ ಸಂಖ್ಯೆ ಎಷ್ಟಿರಬಹುದು ಎಂಬುದನ್ನು ಊಹಿಸಿಕೊಳ್ಳಿ. ಯುರೋಪ್‌ನ ಪಶ್ಚಿಮ ಭಾಗದಲ್ಲಿಯೂ ಈ ಅವಧಿಯಲ್ಲಿ ಅರ್ಧ ಮಿಲಿಯನ್ ಜನರು ಕ್ಯಾನ್ಸರ್‌ಗೆ ಬಲಿಯಾಗಿದ್ದಾರೆ. ೨೦೦೬ರಲ್ಲಿ ಜಪಾನ್‌ನಲ್ಲಿ ೧೦೦೦ಕ್ಕೂ ಅಧಿಕ ಜನರು ಕಲ್ನಾರಿನಿಂದ ಬಂದ ಮೀಸೋಥಿಲಿಯೊಮಾ (ಒಂದು ರೀತಿಯ ಪುಪ್ಪುಸ ಕ್ಯಾನ್ಸರ್) ದಿಂದ ಸಾವನ್ನಪ್ಪಿದ್ದಾರೆ. ಪ್ರತಿವರ್ಷ ಅಮೆರಿಕಾದಲ್ಲಿ ೧೦,೦೦೦ದಷ್ಟು ಜನರು ಮರಣಿಸುತ್ತಿದ್ದಾರೆ. ಅಮೆರಿಕಾದಲ್ಲಿ ಇದರ ಬಳಕೆ ೧೯೭೩ರಲ್ಲಿ ೮೦೦,೦೦೦ ಮೆಟ್ರಿಕ್ ಟನ್‌ನಷ್ಟಿದ್ದು - ೯೬ರಲ್ಲಿ ೨೧,೦೦೦ ಟನ್‌ಗೆ ಇಳಿದಿದೆ. ಈಗ ಆ ಪ್ರಮಾಣ ಇನ್ನೂ ಕಡಿಮೆಯಾಗಿದೆ ಎನ್ನಲಾಗಿದೆ.

ಮುಂದುವರಿದ ದೇಶಗಳಲ್ಲಿ ಕಲ್ನಾರಿಗೆ ಪರ್ಯಾಯವಾಗಿ ಪಾಲಿ ಎಸ್ಟೈಲ್ ಆಲ್ಕೊಹಾಲ್ ಎಂಬ ವಸ್ತುವನ್ನು ಬಳಸಲಾಗುತ್ತಿದೆ. ಕಲ್ನಾರಿಗಿಂತ ಕಡಿಮೆ ಬೆಲೆಯ, ಆರೋಗ್ಯಕ್ಕೆ ಅಷ್ಟು ಹಾನಿಕಾರಕವಲ್ಲದ ಇದರ ಉಪಯೋಗ ಈಗೀಗ ಆ ದೇಶಗಳಲ್ಲಿ ಹೆಚ್ಚುತ್ತಿದೆ. 'ಯು.ಎಸ್.ಎ. ಟುಡೇ' ಎಂಬ ನಿಯತಕಾಲಿಕ ನಡೆಸಿದ ಅಧ್ಯಯನದ ಪ್ರಕಾರ ಮುಂದಿನ ೩೦ ವರ್ಷಗಳಲ್ಲಿ ಕಲ್ನಾರು ೧ ಮಿಲಿಯನ್ ಜನರನ್ನು ಬಲಿ ತೆಗೆದುಕೊಳ್ಳುತ್ತದಂತೆ. ಅದರಲ್ಲಿಯೂ ಈ ಸಂಖ್ಯೆ ಅಭಿವೃದ್ಧಿಶೀಲ ದೇಶಗಳಲ್ಲಿಯೇ ಜಾಸ್ತಿ. ವಿಶ್ವ ಆರೋಗ್ಯ ಸಂಸ್ಥೆಯ ಅಂದಾಜಿನ ಪ್ರಕಾರ ಇದಕ್ಕೆ ಸಂಬಂಧಪಟ್ಟ ಕಾಯಿಲೆಗಳಿಂದ ಜಗತ್ತಿನಾದ್ಯಂತ ಪ್ರತಿವರ್ಷ ೧೦೭,೦೦೦ ಜನರು ಅಸು ನೀಗುತ್ತಿದ್ದಾರೆ. ಉದ್ಯೋಗ ಸಂಬಂಧಿ ಸಾವಿನಲ್ಲಿ ೧/೩ರಷ್ಟು ಕಲ್ನಾರಿನ ಉದ್ಯಮದಿಂದಲೇ ಆಗುತ್ತಿದೆ. ಜಗತ್ತಿನ ೫೨ ದೇಶಗಳು ಈಗಾಗಲೇ ಇದನ್ನು ನಿಷೇಧಿಸಿವೆ. ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಮಾತ್ರ ಈ ನಿಷೇಧವಿಲ್ಲ.

**ಕೆನಡಾದ ಇಬ್ಬಂದಿ ನೀತಿ**

ಕೆನಡಾ ದೇಶ ಮಾತ್ರ ಕಲ್ನಾರಿನ ಬಗೆಗೆ ಭಿನ್ನ ನೀತಿ ಹೊಂದಿದೆ. ಕೆನಡಾ ಜಗತ್ತಿನ ಎಲ್ಲ ದೇಶಗಳಿಗಿಂತ ಹೆಚ್ಚು ಕ್ರೈಸೋಟೈಲ್ ಅನ್ನು ರಫ್ತು ಮಾಡುವ ದೇಶ. ಅದರಲ್ಲಿ ಶೇಕಡ ೯೬ರಷ್ಟು ಬಡ ದೇಶಗಳಿಗೆ ಹೋಗುತ್ತದೆ. ಇದನ್ನು ನಿಷೇಧಿಸಲು ಬಹಳಷ್ಟು ಅಂತರರಾಷ್ಟ್ರೀಯ ಒತ್ತಡ ಬಂದಾಗಲೂ ಕೆನಡಾ ತನ್ನದೇ ಆದ ರಾಜಕೀಯ ಕಾರಣಕ್ಕಾಗಿ ಒಪ್ಪಲಿಲ್ಲ. ಕಲ್ನಾರಿನ ವಿರುದ್ಧ ಹೋರಾಡುತ್ತಿರುವ ಕೆನಡಾದ ಕಾರ್ಯಕರ್ತರು ಕೆಲವು ವರ್ಷಗಳ ಹಿಂದೆ ಭಾರತಕ್ಕೆ ಭೇಟಿಕೊಟ್ಟಿದ್ದರು. ಅವರು, ತನ್ನ ರಾಜಕೀಯ ಹಿತಾಸಕ್ತಿ ಮತ್ತು ಕ್ಯೂಬೆಕ್ ಪ್ರಾಂತ್ಯದ ೧೬೦೦ ಗಣಿಗಾರರ ಉದ್ಯೋಗಗಳನ್ನು ಉಳಿಸಿಕೊಳ್ಳಲು ಕೆನಡಾ, ''ಮರಣವನ್ನು ರಫ್ತು ಮಾಡುತ್ತಿದೆ'' ಎನ್ನುತ್ತಾರೆ. ಅಲ್ಲಿಯೂ ಆ ಉದ್ಯಮ ಅಳಿವಿನ ಅಂಚಿನಲ್ಲಿದೆ. ೧೯೭೫ರಲ್ಲಿ ೧.೫ ಮಿಲಿಯನ್ ಮೆಟ್ರಿಕ್ ಟನ್‌ನಷ್ಟು ಕಲ್ನಾರು ಉತ್ಪಾದನೆಯಾಗುತ್ತಿದ್ದ ಆ ದೇಶದಲ್ಲಿ ೨೦೦೦ದ ಹೊತ್ತಿಗೆ ೩,೭೦,೦೦೦ ಟನ್‌ಗಳಿಗೆ ಇಳಿದಿತ್ತು. ಈಗ ಆ ಪ್ರಮಾಣ ಇನ್ನೂ ಕಡಿಮೆಯಾಗಿದೆ.

ಭಾರತದಲ್ಲಿ ಈ ವಿಚಾರ ಕುರಿತು ಸೂಕ್ತ ತಿಳುವಳಿಕೆ ಜನರಿಗಿಲ್ಲ. ಕಲ್ನಾರಿನ ಉದ್ಯಮದಲ್ಲಿ ಕೆಲಸ ಮಾಡುವ ಕಾರ್ಮಿಕರಿಗೆ ಸೂಕ್ತ ಸುರಕ್ಷತಾ ವಾತಾವರಣ ಇಲ್ಲ. ಜೊತೆಗೆ ಎಂದಿನಂತೆ ನಮ್ಮ ಸರ್ಕಾರ ಇದರ ಉಪಯೋಗವನ್ನು ನಿರ್ಬಂಧಿಸುವ ಯಾವುದೇ ಕ್ರಮವನ್ನು ಕೈಗೊಂಡಿಲ್ಲ.

ಭಾರತದ ೧೫ ರಾಜ್ಯಗಳಲ್ಲಿ ಈ ಉದ್ಯಮವಿದೆ. ಪ್ರತಿವರ್ಷ ೨೦,೦೦೦ ಟನ್‌ನಷ್ಟು ಕಲ್ನಾರನ್ನು ಆಂಧ್ರಪ್ರದೇಶ, ರಾಜಸ್ತಾನ ಮತ್ತು ಬಿಹಾರಗಳಲ್ಲಿ ತೆಗೆಯಲಾಗುತ್ತದೆ. ೫೦-೬೦ ಕೋಟಿ ರೂ.ಗಳ ಕಚ್ಚಾ ಕಲ್ನಾರನ್ನು ಭಾರತ ಆಮದು ಮಾಡಿಕೊಳ್ಳುತ್ತದೆ. ಇದರ ವಾರ್ಷಿಕ ವಹಿವಾಟು ೯೦೦-೧೦೦೦ ಕೋಟಿ ರೂ.ಗಳಾಗುತ್ತದೆ. ೧ ಲಕ್ಷಕ್ಕೂ ಅಧಿಕ ಜನರು ನೇರವಾಗಿ ಅಥವಾ ಪರೋಕ್ಷವಾಗಿ ಈ ಉದ್ಯಮದಲ್ಲಿ ಉದ್ಯೋಗಿಗಳಾಗಿದ್ದಾರೆ. ಶೇಕಡ ೭೦ರಷ್ಟು ಕೆನಡಾದಿಂದ ಬರುತ್ತದೆ. ಅಲ್ಲಿ ಯಂತ್ರಗಳನ್ನು ಬಳಸಿ ಗಣಿಗಾರಿಕೆ ಮಾಡಲಾಗುತ್ತದೆ. ಕೊನೆಯ ಹಂತದ ಕೆಲಸಗಳನ್ನು ಪೂರೈಸಲು ಭಾರತಕ್ಕೆ ಕಳುಹಿಸಲಾಗುತ್ತದೆ. ವಿಪರ್ಯಾಸವೆಂದರೆ, ಅಲ್ಲಿಂದ ಪ್ಯಾಕ್ ಆಗಿ ಬರುವ ಕಲ್ನಾರು ಇಲ್ಲಿಗೆ 'ಅಪಾಯಕಾರಿ ವಸ್ತು' ಎಂಬ ಲೇಬಲ್‌ನೊಂದಿಗೆ ಬರುತ್ತದೆ. ಇಲ್ಲಿ ಮಾತ್ರ ಅದನ್ನು ಬಳಸುವಾಗ ಯಾವ ರೀತಿಯ ಮುನ್ನೆಚ್ಚರಿಕೆಯನ್ನೂ ತೆಗೆದುಕೊಳ್ಳುವುದಿಲ್ಲ. ಅಂತರರಾಷ್ಟ್ರೀಯ ಕಾರ್ಮಿಕರ ಸಂಸ್ಥೆ ಇದನ್ನು ಬಳಸುವ ಬಗೆಗೆ ಬಹಳ ಕಠಿಣ ಕ್ರಮಗಳನ್ನು ತಿಳಿಸಿದೆ. ಅಂತಹ ಎಲ್ಲಾ ನಿಯಮಗಳನ್ನು ಗಾಳಿಗೆ ತೂರುವ ನಮ್ಮ ದೇಶದಲ್ಲಿ ಎಚ್ಚರಿಕೆಯ ಲೇಬಲ್‌ಗಳನ್ನು ಹಚ್ಚುವುದಿಲ್ಲ. ನಿಯಮಿತವಾಗಿ ಅದನ್ನು ವಿಭಜಿಸುವುದಿಲ್ಲ. ಹೆಚ್ಚಿನ ಸಂದರ್ಭಗಳಲ್ಲಿ ರಕ್ಷಣಾ ಕವಚಗಳನ್ನು ಕಾರ್ಮಿಕರು ಧರಿಸುವುದಿಲ್ಲ. ಎಲ್ಲಾ ಪರಿಸರ ಮತ್ತು ಆರೋಗ್ಯ ಸಂಬಂಧಿ ಮುನ್ನೆಚ್ಚರಿಕೆ ಕ್ರಮಗಳನ್ನು ನಮ್ಮ ದೇಶದ ಕೈಗಾರಿಕಾ ವಲಯ ಧಿಕ್ಕರಿಸುವುದು ಇಲ್ಲಿನ ವಾಡಿಕೆ. ಕೇಂದ್ರೀಯ ಮಾಲಿನ್ಯ ನಿಯಂತ್ರಣ ಮಂಡಳಿ ಇತ್ತೀಚೆಗೆ ಬಿಡುಗಡೆ ಮಾಡಿದ ವರದಿಯ ಪ್ರಕಾರ ಕಲ್ನಾರಿನ ೮ ಘಟಕಗಳಲ್ಲಿ ೬ ಪ್ರಮುಖ ದೊಡ್ಡ ಘಟಕಗಳು ಈ ರೀತಿಯ ಎಲ್ಲ ನಿಯಮಗಳನ್ನು ಗಾಳಿಗೆ ತೂರಿದ್ದವು.

**ಮಾರಾಟ ಗಿಮಿಕ್‌ಗಳು (ತಂತ್ರಗಳು)**

ಕಲ್ನಾರಿನ ಉದ್ಯಮದ ಮಾರಾಟದ ತಂತ್ರಗಳು ತಂಬಾಕಿನ ಉದ್ಯಮದ ತಂತ್ರಗಾರಿಕೆಯನ್ನೇ ಬಹಳಷ್ಟು ಹೋಲುತ್ತವೆ. ಅಭಿವೃದ್ಧಿಶೀಲ ರಾಷ್ಟ್ರಗಳು ಹಾಗೂ ಬಡರಾಷ್ಟ್ರಗಳಲ್ಲಿ ತಮ್ಮ ಉತ್ಪನ್ನದ ಮಾರಾಟವನ್ನು ಹೆಚ್ಚಿಸುವುದರ ಮೂಲಕ ತಂಬಾಕಿನ ಕಂಪನಿಗಳು ಮುಂದುವರಿದ ದೇಶಗಳಲ್ಲಿ ಆಗುತ್ತಿರುವ ನಷ್ಟವನ್ನು ತುಂಬಿಕೊಳ್ಳುವುದಲ್ಲದೆ ದೊಡ್ಡ ರೀತಿಯ ಲಾಭವನ್ನೂ ಗಳಿಸುತ್ತಿವೆ. ಕಲ್ನಾರಿನ ಉದ್ಯಮವೂ ಇದೇ ತಂತ್ರಗಾರಿಕೆಯನ್ನು ಅನುಸರಿಸುತ್ತಿದೆ. ಬಹಳಷ್ಟು ದೇಶಗಳಲ್ಲಿ ಕಲ್ನಾರಿನ ಉತ್ಪಾದನೆಯನ್ನೇ ನಿಷೇಧಿಸಿದ್ದರಿಂದ ಬಹುರಾಷ್ಟ್ರೀಯ ಕಂಪನಿಗಳು ಬ್ರೆಜ಼ಿಲ್, ಭಾರತ, ಥೈಲ್ಯಾಂಡ್, ನೈಜೀರಿಯಾ, ಅಂಗೋಲಾ, ಉರುಗ್ವೆ, ಅರ್ಜಂಟೈನಾ ದೇಶಗಳಲ್ಲಿ ಬಹಳ ದೊಡ್ಡ ರೀತಿಯ ಮಾರುಕಟ್ಟೆ ಹೊಂದಿದ್ದು ಅಗಾಧ ಪ್ರಮಾಣದ ಲಾಭ ಗಳಿಸುತ್ತಿವೆ.

ಪ್ರಪಂಚದಾದ್ಯಂತ ಸಾಮಾನ್ಯ ಮತ್ತು ಪರಿಸರ ಆರೋಗ್ಯ ಸಂಶೋಧಕರು, ನಾಗರಿಕ ಸಮಿತಿಗಳು, ಕಾರ್ಮಿಕರ ಸಂಘಟನೆಗಳು, ಮಾನವ ಹಕ್ಕುಗಳ ಹೋರಾಟದ ಕಾರ್ಯಕರ್ತರು - ಎಲ್ಲರೂ ತಕ್ಷಣ ಕಲ್ನಾರಿನ ಉಪಯೋಗವನ್ನು ನಿಷೇಧಿಸುವಂತೆ ಆಗ್ರಹಿಸುತ್ತಿದ್ದಾರೆ. ಜೊತೆಗೆ ಜನರ ಆರೋಗ್ಯದ ಮೇಲೆ ಇದರಿಂದುಂಟಾಗುವ ಅಡ್ಡ ಪರಿಣಾಮಗಳ ಬಗ್ಗೆ ಅರಿವಿದ್ದರೂ ಕೆಲಸಗಾರರ ಜೀವಕ್ಕೆ, ಆರೋಗ್ಯಕ್ಕೆ ಹಾನಿ ಉಂಟುಮಾಡುತ್ತಿರುವ ಫ್ಯಾಕ್ಟರಿ ಮಾಲೀಕರು ಮತ್ತು ಕಂಪನಿಯ ನಿರ್ದೇಶಕರುಗಳನ್ನು ಅಪರಾಧಿಗಳೆಂದು ಪರಿಗಣಿಸಿ ಅವರ ಮೇಲೆ ಕಠಿಣ ಕಾನೂನು ಕ್ರಮ ಜರುಗಿಸುವಂತೆ ಈ ಸಂಘಟನೆಗಳು ಒತ್ತಾಯಿಸುತ್ತಿವೆ.

ಕೇರಳ ಮಾನವ ಹಕ್ಕುಗಳ ಆಯೋಗವು ಇದರ ಉಪಯೋಗ ಮಾನವ ಹಕ್ಕುಗಳ ವಿರುದ್ಧವಾದುದು ಎಂದು ನಿರ್ಣಯಿಸಿದೆ. ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವು ಕೂಡ ಕಟ್ಟಡಗಳ ಮೇಲ್ಛಾವಣಿಗೆ ಕಲ್ನಾರಿನ ಷೀಟ್‌ಗಳ ಬದಲು ಬೇರೆಯ ವಸ್ತುಗಳನ್ನು ಉಪಯೋಗಿಸುವಂತೆ ಶಿಫಾರಸ್ಸು ಮಾಡಿದೆ.

ಮುಂಬೈನ ಕೆ.ಇ.ಎಂ. ಆಸ್ಪತ್ರೆಯ ಶ್ವಾಸಕೋಶ ತಜ್ಞ ಡಾ|| ಎಸ್. ಆರ್. ಕಾಮತ್ ಅವರ ಪ್ರಕಾರ ನಮ್ಮ ದೇಶದಲ್ಲಿ ಕೈಗೊಂಡ ೫ ಸಮೀಕ್ಷೆಗಳಲ್ಲಿ ಹೆಚ್ಚಿನವರಲ್ಲಿ ಶ್ವಾಸಕೋಶ ಸಂಬಂಧಿತ ವಿವಿಧ ರೀತಿಯ ಕಾಯಿಲೆಗಳು ಕಂಡುಬಂದಿದ್ದವು. ಡಿಸೆಂಬರ್ ೨೦೦೯ರಲ್ಲಿ ದೆಹಲಿಯಲ್ಲಿ ಈ ಕುರಿತು ಒಂದು ಕಾರ್ಯಾಗಾರ ಜರುಗಿತು. ಅದರಲ್ಲಿ ರಾಜಸ್ಥಾನದ ಪುಪ್ಪುಸ ಕಲ್ನಾರಿನ ಬೇನೆಯ ಹಲವು ಮುಖಗಳು ಅನಾವರಣಗೊಂಡವು. ಸಾಮಾನ್ಯವಾಗಿ ಈ ನಾರಿನ ಧೂಳಿನಿಂದ ೧೫-೨೦ ವರ್ಷಗಳ ನಂತರ ರೋಗ ಲಕ್ಷಣಗಳು ಕಾಣಿಸಿಕೊಳ್ಳುವುದಾದರೂ, ರಾಜಸ್ಥಾನದಲ್ಲಿ ೫-೬ ವರ್ಷಗಳಲ್ಲಿಯೇ ಕಾಯಿಲೆ ಬಂದಿರುವ ಬಗೆಗೆ ಡಾ|| ಖಮಾರ್ ರೆಹಮಾನ್ ಎಂಬ ತಜ್ಞವೈದ್ಯರು ಸೋದಾಹರಣವಾಗಿ ವಿವರಿಸಿದರು. ರಾಜಸ್ಥಾನದಲ್ಲಿ ಈಗಾಗಲೇ ೫ಕ್ಕೂ ಹೆಚ್ಚು ಸಾವು ಕಂಡುಬಂದಿದ್ದು, ೧೦೦ಕ್ಕೂ ಹೆಚ್ಚು ಜನರಲ್ಲಿ ಕಾಯಿಲೆಯ ಲಕ್ಷಣಗಳಿವೆ.

ಒಟ್ಟಿನಲ್ಲಿ ಜನರ ಆರೋಗ್ಯಕ್ಕೆ ತೀವ್ರ ಹಾನಿಯುಂಟುಮಾಡುತ್ತಿರುವ ಈ ಕಲ್ನಾರಿನ ಗಣಿ, ಫ್ಯಾಕ್ಟರಿ ಮತ್ತು ಉದ್ಯಮವನ್ನು ಜಗತ್ತಿನ ಹಲವಾರು ದೇಶಗಳು ನಿಷೇಧಿಸಿರುವಂತೆ ಭಾರತವೂ ನಿಷೇಧಿಸಬೇಕೆಂಬುದು ಹಲವು ಚಿಂತಕರ ಒಮ್ಮತಾಭಿಪ್ರಾಯ. ಆದರೆ ಹಿಂದಿನ ಹಲವಾರು ಉದಾಹರಣೆಗಳನ್ನು ಗಮನಿಸಿದಾಗ, ದೂರದೃಷ್ಟಿ, ದೇಶಾಭಿಮಾನ, ಜನಪರ ಕಾಳಜಿಗಳಿಲ್ಲದ ಸ್ವಾರ್ಥ ರಾಜಕಾರಣಿಗಳು ಮತ್ತು ಅಧಿಕಾರಶಾಹಿ, ಧನದಾಹಿ ಉದ್ಯೋಗಪತಿಗಳ ಅಪಾಯಕಾರಿ ಸಮ್ಮಿಲನದಿಂದ ಇದು ಒಂದು ಮರೀಚಿಕೆಯಾಗಿ ಉಳಿಯಲಿದೆಯೇ ಎಂಬುದನ್ನು ಕಾಲವೇ ನಿರ್ಧರಿಸಬೇಕು.

**ಡಾ|| ಎಚ್. ಎಸ್. ಮೋಹನ್**
ವಿಜಯ ಕಣ್ಣಿನ ಚಿಕಿತ್ಸಾಲಯ, ಸಾಗರ- ೫೭೭ ೪೦೧, ಶಿವಮೊಗ್ಗ ಜಿಲ್ಲೆ




# ಕಪ್ಪು ಹಣದ ಸಮಸ್ಯೆ

**ನಾ**ವು ವಿನಿಮಯ ಸೌಕರ್ಯಕ್ಕಾಗಿ ಮಾಡಿಕೊಂಡ ಹಣ ಇಂದು ನಮ್ಮನ್ನೇ ಆಳಲು ಹೊರಟಿದೆ. ಹಣಕ್ಕೆ ಜೀವ ತುಂಬಿದವರು ನಾವು. ಅದನ್ನು ನಾವು ನಮ್ಮ ಹತೋಟಿಯಲ್ಲಿಟ್ಟುಕೊಳ್ಳಬೇಕಾಗಿತ್ತು. ನಾವು ಅದಕ್ಕೆ ನಮ್ಮ ಅರಿವಿಲ್ಲದೆಯೇ ವಿಶೇಷ ಶಕ್ತಿ ತುಂಬಿದ್ದೇವೆ. ನಾಯಿ ಬಾಲವನ್ನಲ್ಲಾಡಿಸುವುದು ಸಹಜ. ಆದರೆ ಬಾಲವೇ ನಾಯಿಯನ್ನಲ್ಲಾಡಿಸುವ ಸ್ಥಿತಿ ನಮ್ಮದಾಗಿದೆ.

ಹಣವನ್ನು (ರೂಪಾಯಿ) ದುಂಡಗೆ ಮಾಡಿದ್ದಾರೆ. ಅದು ಚಕ್ರದಂತೆ ತಿರುಗುತ್ತಾ ಕೈಯಿಂದ ಕೈಗೆ ಹರಿಯುತ್ತಿರಬೇಕು. ನೋಟನ್ನು ಕರೆನ್ಸಿ ಎನ್ನುತ್ತಾರೆ. ಅದು ಕರೆಂಟಿನಂತೆ ಕೈಯಿಂದ ಕೈಗೆ ಪ್ರವಹಿಸುತ್ತಿರಬೇಕು. ಆದರೆ ಈ ಹಣ ಕೆಲವರ ವಶದಲ್ಲಿ ನಿಂತುಹೋಗಿದೆ. ಇವರನ್ನು ಲಕ್ಷಾಧಿಪತಿಗಳು, ಕೋಟ್ಯಾಧಿಪತಿಗಳು ಎನ್ನುತ್ತದೆ ಸಮಾಜ. ಇವರೇ ದೇಶದಲ್ಲಿ ಆರ್ಥಿಕ ಅಸಮಾನತೆಯನ್ನೂ ಹುಟ್ಟುಹಾಕಿರುವವರು, ಬಡವರನ್ನು ಸೃಷ್ಟಿಸಿರುವವರು.

ಇವರು ಮಾಡುವ ಶೋಷಣೆಯ ಪರಿಣಾಮವಾಗಿಯೇ ಅಸಂಖ್ಯಾತ ಶೋಷಿತರು ದಾಸ್ಯಕ್ಕೊಳಗಾಗಿರುವುದು. ನಮ್ಮ ಸರ್ಕಾರ ಈ ವಿಷಮತೆಯನ್ನು ಬೆಳೆಸಲು ಪ್ರೋತ್ಸಾಹ ನೀಡುತ್ತದೆ. ಅದರ ಫಲವಾಗಿ ಸಮಾಜದಲ್ಲಿ ಉಳ್ಳವ, ಬಡವ, ಶೋಷಕ, ಶೋಷಿತ, ವಿದ್ಯಾವಂತ, ನಿರಕ್ಷರಕುಕ್ಷಿ, ಮೇಲು, ಕೀಳು, ದುಡಿಯುವವ, ದುಡಿಸಿಕೊಳ್ಳುವವ ಈ ಭೇದಾಸುರರು ಹುಟ್ಟಿಕೊಂಡಿದ್ದಾರೆ. ಈ ವಿಷಮತೆಯನ್ನು ಸಮಾಜದಿಂದ ತೊಡೆದುಹಾಕಬೇಕಾದರೆ ಹಣದ ಸ್ಥಾನವನ್ನು ಪಲ್ಲಟ ಮಾಡಬೇಕು. ಹಣ ಸಮಾಜದ ಹಿಡಿತದಲ್ಲಿರಬೇಕೇ ವಿನಃ ಸಮಾಜವನ್ನು ಹಣ ಆಳಲು ಬಿಡಬಾರದು. ಇದನ್ನು ಸರಿಪಡಿಸುವುದು ಹೇಗೆ? ಹತ್ತು ವರ್ಷಕ್ಕೊಮ್ಮೆ ಚಲಾವಣೆಯಲ್ಲಿರುವ ಒಟ್ಟು ಹಣದ ಲೆಕ್ಕ ತೆಗೆದು ಅವರವರ ವೃತ್ತಿಗನುಸಾರ ಒಬ್ಬರಲ್ಲಿ ಪರಮಾವಧಿ ಹಣ ಎಷ್ಟಿರಬೇಕೆಂಬುದನ್ನು ನಿರ್ಧರಿಸಿ, ಅದಕ್ಕೆ ಹೆಚ್ಚಿಗೆ ಇದ್ದವರಿಂದ ಅದನ್ನು ಸರ್ಕಾರ ವಶಪಡಿಸಿಕೊಳ್ಳಬಹುದು. ಅವರ ಬಳಿ ಇರುವ ಚಿನ್ನ, ಬೆಳ್ಳಿ, ಸ್ಥಿರಾಸ್ತಿಗಳ ವಿವರಗಳನ್ನು ಪ್ರತಿಯೊಬ್ಬರಿಂದ ಪ್ರತಿವರ್ಷ ಪಡೆದುಕೊಂಡು ಅದರ ಆಧಾರದ ಮೇಲೆ ಅವರಲ್ಲಿ ಪರಮಾವಧಿ ಆಸ್ತಿ ಎಷ್ಟಿರಬೇಕೆಂಬುದನ್ನು ನಿಗದಿ ಮಾಡಬಹುದು. ಇಲ್ಲವೇ ಆರ್ಥಿಕ ತಜ್ಞರ ಅಭಿಪ್ರಾಯ ಪಡೆದು ಅವರು ಸೂಚಿಸುವ ಕ್ರಮಗಳನ್ನು ಕೈಗೊಳ್ಳಬಹುದು. ಒಟ್ಟಿನಲ್ಲಿ ಬಡವ ಬಲ್ಲಿದರ ಮಧ್ಯದ ಕಂದರವನ್ನು ಮುಚ್ಚುವುದು, ಜನಸಾಮಾನ್ಯರ ಕೊಳ್ಳುವ ಶಕ್ತಿಯನ್ನು ಹೆಚ್ಚಿಸುವುದು, ಹಣದ ಪ್ರಭಾವವನ್ನು ಕುಗ್ಗಿಸುವುದು ಇದರ ಗುರಿಯಾಗಬೇಕು.

ನಮ್ಮ ಸಮಾಜ ಮೊದಲೇ ಶ್ರೇಣೀಕೃತ ಜಾತಿಪದ್ಧತಿಯ ಕಾರಣದಿಂದ ಹೋಳಾಗಿದೆ. ಹಣದ ಪ್ರಭಾವದಿಂದ ಮನೆಗಳು ಒಡೆಯುತ್ತಿವೆ, ಸಮಾಜ ಒಡೆಯುತ್ತಿದೆ. ಅಸಮಾನತೆ ವಿಪರೀತವಾಗಿ ಬೆಳೆದಿದೆ. ಇದಕ್ಕೆಲ್ಲ ಪರಿಹಾರ ಕಂಡುಕೊಳ್ಳಬೇಕು. ಹಣದ ನಿಯಂತ್ರಣ ಮಾಡದೆ, ಸಮಾಜದ ಈ ಬಿರುಕುಗಳನ್ನು ಮುಚ್ಚುವುದು ಸಾಧ್ಯವಿಲ್ಲ.

ಇದುವರೆಗೆ ಹೇಳಿದ್ದು ವೈಟ್ ಮನಿಗೆ ಅಂದರೆ ಪಾರದರ್ಶಕವಾದ ಹಣಕ್ಕೆ ಸಂಬಂಧಪಟ್ಟ ವಿಚಾರ. ಬ್ಲ್ಯಾಕ್ ಮನಿ, ಅಂದರೆ ಕಪ್ಪು ಹಣ, ಪಾರದರ್ಶಕ ಹಣಕ್ಕಿಂತ ಭೀಕರವಾದ ಪರಿಣಾಮಗಳನ್ನು ನಮ್ಮ ಸಮಾಜದಲ್ಲಿ ಮಾಡಿದೆ. ಕಪ್ಪು ಹಣ ದೇಶದ ಒಳಗೂ, ಹೊರರಾಷ್ಟ್ರಗಳ ಬ್ಯಾಂಕುಗಳಲ್ಲೂ ಕೊಳೆಯುತ್ತಿದೆ. ಈ ಹಣ ಮತದಾರರನ್ನು ಕೊಳ್ಳುತ್ತದೆ. ಮಂತ್ರಿಗಳನ್ನು, ಶಾಸಕರನ್ನು, ಅಧಿಕಾರಿಗಳನ್ನು ಗುಲಾಮರನ್ನಾಗಿ ಮಾಡಿಕೊಳ್ಳುತ್ತದೆ. ಮುಖ್ಯಮಂತ್ರಿಯ ಕುರ್ಚಿ ಅಲುಗಾಡುವಂತೆ ಮಾಡುತ್ತದೆ. ಕಾನೂನುಗಳನ್ನು ಕಾಲ ಕಸವಾಗಿ ಕಾಣುತ್ತದೆ. ಆದ್ದರಿಂದ ತುರ್ತಾಗಿ ಕಪ್ಪು ಹಣವನ್ನು ಹೊರ ತೆಗೆವ ಕೆಲಸ ಮಾಡಬೇಕು.

ಕಪ್ಪು ಹಣದ ಪಾತ್ರವೇನು ಎಂಬುದನ್ನು ಈ ರೀತಿ ವಿವರಿಸಬಹುದು: ನಗರದ ಎಲ್ಲ ಬೀದಿಗಳಲ್ಲೂ ಸಣ್ಣ ದೊಡ್ಡ ಗುಣಿ ಬಿದ್ದಿದೆ. ಮಳೆ ಬಿದ್ದಾಗ, ಹರಿದು ಹೋಗದೆ ಈ ಗುಣಿಗಳೆಲ್ಲ ಮಳೆ ನೀರಿನಿಂದ ತುಂಬಿಕೊಳ್ಳುತ್ತವೆ; ನಿಂತ ನೀರಾಗುತ್ತವೆ. ಕೆಲ ದಿನಗಳ ಮೇಲೆ ಆ ನೀರು ಕಲುಷಿತಗೊಳ್ಳುತ್ತದೆ. ಅದರಲ್ಲಿ ಕ್ರಿಮಿಗಳು ಹುಟ್ಟಿಕೊಳ್ಳುತ್ತವೆ. ನೀರು ವಿಷಪೂರಿತವಾಗುತ್ತದೆ. ರೋಗಾಣುಗಳು ಹರಡಿಕೊಳ್ಳುತ್ತವೆ. ಅವು ಊರಿನ ಎಲ್ಲ ಜನರ ಆರೋಗ್ಯ ಕೆಡಿಸುತ್ತವೆ. ಜೀವವನ್ನೂ ತೆಗೆಯಬಹುದು. ಕಪ್ಪು ಹಣದಿಂದ ಆಗುತ್ತಿರುವ ಅನಾಹುತವೂ ಇದೇ ಮಾದರಿಯದು. ನಾವು ಈ ಕೂಡಲೇ ಇರುವ ಹಳ್ಳಗಳನ್ನು ಮುಚ್ಚಲಿಲ್ಲವಾದರೆ ಅದು ಭ್ರಷ್ಟಾಚಾರವನ್ನೇ ಶಿಷ್ಟಾಚಾರ ಎಂದು ಸಮಾಜ ಅಂಗೀಕರಿಸುವಂತೆ ಮಾಡಬಹುದು. ಕಪ್ಪು ಹಣಕ್ಕೆ ಕಾರಣರಾಗದವರೂ ಅದರ ದುಷ್ಪರಿಣಾಮಕ್ಕೆ ಒಳಗಾಗುತ್ತಾರೆ.

ಬೀದಿಯ ಹಳ್ಳಗಳನ್ನೆಲ್ಲ ಮುಚ್ಚುವ ಮೂಲಕ ಹೇಗೆ ನಾವು ಸಾವು - ನೋವನ್ನು ತಡೆಗಟ್ಟಬಹುದೋ ಹಾಗೆ ಭ್ರಷ್ಟಾಚಾರವನ್ನು ತಡೆಗಟ್ಟಬೇಕಾದರೆ ಮೊದಲು ನಾವು ಕಪ್ಪು ಹಣವನ್ನೆಲ್ಲ ಹೊರತೆಗೆದು, ಅದು ಮಡುಗಟ್ಟಿದ ಹಳ್ಳಗಳನ್ನೆಲ್ಲ ಮುಚ್ಚಬೇಕು. ಆ ಮೂಲಕ ಸಮಾಜದ ಸ್ವಾಸ್ಥ್ಯವನ್ನು ಕಾಪಾಡಬೇಕು. ಈ ಕಪ್ಪು ಹಣವನ್ನೆಲ್ಲ ಸರ್ಕಾರ ಮುಟ್ಟುಗೋಲು ಹಾಕಿಕೊಳ್ಳಬೇಕು. ಕಪ್ಪು ಹಣ ದೇಶದಲ್ಲಿ ಬೆಳೆಯಲು ಸರ್ಕಾರದ ಮೃದು ನೀತಿಯೇ ಕಾರಣ. ಭ್ರಷ್ಟರನ್ನು, ತೆರಿಗೆ ವಂಚಕರನ್ನು, ಕಳ್ಳಸಾಗಾಣಿಕೆದಾರರನ್ನು, ಬೆಳೆಯಲು ಅವಕಾಶ ಮಾಡಿಕೊಟ್ಟದ್ದೇ ಸರ್ಕಾರ.

ಇದಕ್ಕೆ ಕಾರಣವಾದ ಸರ್ಕಾರದ ನೀತಿಗಳನ್ನು ಬದಲಾಯಿಸದೆ ಈ ಪಿಡುಗಿನಿಂದ ಸಮಾಜ ಪಾರಾಗಲು ಸಾಧ್ಯವೇ ಇಲ್ಲ. ಸರ್ಕಾರ ಈಗಿರುವಂತೆ ಜಡವಾಗಿ ಉಳಿಯುವುದಾದರೆ, ಅದನ್ನು ನಿಯಂತ್ರಿಸುವ ಅಧಿಕಾರ ಇರುವುದು ಪ್ರಜೆಗೆ ಮಾತ್ರ. ಆದ್ದರಿಂದ ಪ್ರಜೆ ತನ್ನ ಪರಮಾಧಿಕಾರವನ್ನು ಬಳಸಿಕೊಂಡು ಸರ್ಕಾರ ತನ್ನ ಕರ್ತವ್ಯವನ್ನು ಸಮರ್ಥವಾಗಿ ನಿರ್ವಹಿಸುವಂತೆ ಒತ್ತಡ ತರಬೇಕು. ಈ ದಿಸೆಯಲ್ಲಿ ಪ್ರಜೆ ಕಾರ್ಯೋನ್ಮುಖವಾಗಲಿ ಎಂದು ಹೇಳಬಯಸುತ್ತೇನೆ.

**ಎಚ್. ಎಸ್. ದೊರೆಸ್ವಾಮಿ**
ನಂ. ೭೬೧, ೩೭ನೇ ಕ್ರಾಸ್, ೧೮ನೇ ಮುಖ್ಯರಸ್ತೆ
ಜಯನಗರ 'ಟಿ' ಬ್ಲಾಕ್, ಬೆಂಗಳೂರು - ೫೬೦ ೦೪೧

# ನದಿಯೊಂದು ಹರಿಯುತಿದೆ... ನೆಲದಾಳದಲಿ

ಸುಮಂಗಲಾ ಎಸ್. ಮುಮ್ಮಿಗಟ್ಟಿ



**ನ**ದಿಯೆಂದರೆ ಸಾಕು 'ಜೀವ', 'ನಾಗರಿಕತೆ', 'ಕೃಷಿ' ಮುಂತಾದ ಎಲ್ಲ ಸಂಬಂಧಿತ ವಿಷಯಗಳು ತೆರೆದುಕೊಳ್ಳುತ್ತವೆ. ನದಿಯಲ್ಲಿರುವ 'ಸಿಹಿ ನೀರು' ಇವೆಲ್ಲವನ್ನೂ ನಿರ್ಧರಿಸುತ್ತದೆ. ನದಿಯೊಂದರ ಹಿರಿತನ ಅದು ಹರಿಯುವ ಉದ್ದ, ಅದರಲ್ಲಿರುವ ನೀರಿನ ಪ್ರಮಾಣವನ್ನು ಅವಲಂಬಿಸುತ್ತದೆ. ಉದ್ದಕ್ಕೆ ನೈಲ್ ನದಿ ಹೆಸರಾದರೆ, ತನ್ನಲ್ಲಿರುವ ನೀರಿನ ಪ್ರಮಾಣಕ್ಕೆ ಹೆಸರಾಗಿರುವ ನದಿ ದಕ್ಷಿಣ ಅಮೆರಿಕಾದ 'ಅಮೆಝಾನ್'. ಜಗತ್ತಿನ ಎಲ್ಲ ನದಿಗಳೂ ಸೇರಿ ಸಮುದ್ರಕ್ಕೆ ಸುರಿಯುವ ನೀರಿನ ಶೇಕಡ ೨೫ರಷ್ಟನ್ನು ಅಮೆಝಾನ್ ಒಂದೇ ಸುರಿಯುತ್ತಿದೆ. ಅದು ಪೆರುವಿನ ಆ್ಯಂಡಿಸ್ ಪರ್ವತ ಶ್ರೇಣಿಯಲ್ಲಿ ಹುಟ್ಟಿ ೬೪೪೦ ಕಿ.ಮೀ. ಹರಿದು ಅಟ್ಲಾಂಟಿಕ್ ಮಹಾಸಾಗರವನ್ನು ಸೇರುತ್ತದೆ. ಇದು ಸಾಗರವನ್ನು ಸೇರುವ ಕಡೆ, ಅಂದರೆ ಅಳಿವೆಯಲ್ಲಿ, ೨೪೦ ಕಿ.ಮೀ.ಗಳಷ್ಟು ಅಗಲ ಇದೆ. ಅಂದಾಗ ಇದರ ವಿಶಾಲತೆಯ ಅರಿವಾಗುತ್ತದೆ. ಈ ಬೃಹತ್ ನದಿಯನ್ನು ಫ್ರಾನ್ಸಿನ ಜೂಲ್ ಕ್ರೀವ್ ಕಂಡುಹಿಡಿದಾಗ ಇದರ ಅಗಾಧತೆಯನ್ನು ನೋಡಿ ದಿಗ್ಭ್ರಮೆಗೊಂಡಿದ್ದ, ಇದೀಗ ಈ ಮಹಾನದಿ ಮತ್ತೊಮ್ಮೆ ಸುದ್ದಿಯಲ್ಲಿದೆ.

ಇದೇ ಪ್ರದೇಶದಲ್ಲಿ ಭೂಮಿಯ ಮೇಲ್ಮೈಯಿಂದ ೪ ಕಿ.ಮೀ. ಆಳದಲ್ಲಿ ೬೦೦೦ ಕಿ.ಮೀ. ಉದ್ದಕ್ಕೆ ನದಿಯೊಂದು ನಿಧಾನವಾಗಿ ಗುಪ್ತಗಾಮಿನಿಯಾಗಿ ಹರಿಯುತ್ತಿದೆ. ಇದೂ ಕೂಡ ಆ್ಯಂಡಿಸ್ ಪರ್ವತ ಶ್ರೇಣಿಗಳಿಂದ ಅಟ್ಲಾಂಟಿಕ್ ಮಹಾಸಾಗರದತ್ತ ಪಶ್ಚಿಮದಿಂದ ಪೂರ್ವದ ಕಡೆಗೆ ಹೆಚ್ಚು ಕಡಿಮೆ ಅಮೆಝಾನ್ ನದಿಯ ರೀತಿಯಲ್ಲಿಯೇ ಹರಿಯುತ್ತಿದೆ. ನೆಲದಾಳದ ಈ ನದಿಯನ್ನು ಕಂಡುಹಿಡಿದ ಕೀರ್ತಿ ಭಾರತೀಯ ಮೂಲದ ಡಾ।। ವಾಲಿಯಾ ಎಮ್. ಹಮ್‌ಝಾ ಅವರಿಗೆ ಸಲ್ಲುತ್ತದೆ. ೧೯೬೬ರಲ್ಲಿ ಹೈದರಾಬಾದಿನ ನ್ಯಾಷನಲ್ ಜಿಯೋಫಿಸಿಕಲ್ ರಿಸರ್ಚ್ ಇನ್‌ಸ್ಟಿಟ್ಯೂಟ್‌ನಲ್ಲಿ ಹಿರಿಯ ಸಂಶೋಧಕರಾಗಿ ವೃತ್ತಿ ಆರಂಭಿಸಿದ್ದ ಡಾ।। ಹಮ್‌ಜಾ ಈಗ ಬ್ರೆಝಿಲ್‌ನ 'ಜಿಯೋಥರ್ಮಲ್ ಲ್ಯಾಬೋರೇಟರಿ ಆಫ್ ದಿ ನ್ಯಾಷನಲ್ ಅಬ್ಸರ್ವೇಟರಿ, ರಯೋ ಡಿ ಜನೈರೋ' ದ ಮುಖ್ಯಸ್ಥರು. ಅವರು ಕಂಡುಹಿಡಿದ ಈ ನೆಲದಾಳದ ನದಿಗೆ ಅವರ ವಿದ್ಯಾರ್ಥಿಗಳು 'ಹಮ್‌ಜ಼ಾ' ಎಂಬ ಹೆಸರಿಟ್ಟಿದ್ದಾರೆ. ಹಾಗೆಂದು ಈ ಹೆಸರು ಈ ನದಿಗೆ ಅಧಿಕೃತವಾಗಿಟ್ಟಿದ್ದಲ್ಲ.

**ನೆಲದಾಳದ ನದಿಯ ಹುಡುಕಾಟ ಹೇಗೆ ?**

ಹತ್ತೊಂಭತ್ತನೇ ಶತಮಾನದಲ್ಲಿ ಫ್ರಾನ್ಸ್‌ನ ಜೂಲ್ ಕ್ರೀವ್ ಅಮೆಝಾನ್ ಬೇಸನ್ನು ಶೋಧಿಸಿದ್ದು ಇತಿಹಾಸ. ಪ್ರತಿ ಸೆಕೆಂಡಿಗೆ ೫ ಮೀಟರ್ ವೇಗದಲ್ಲಿ ಓಡುತ್ತಾ ಸಾಗರವನ್ನು ಸೇರುವ ಇದು ತಳ ಭಾಗದಲ್ಲಿ ಸಮುದ್ರವನ್ನೇ ನೂರಾರು ಕಿ.ಮೀ. ನೂಕಿ ಹರಿಯುತ್ತದೆ. ಇದರ ೧೫,೦೦೦ ಉಪನದಿಗಳು ಸೇರಿ ಇದಕ್ಕೆ ಈ ಬೃಹತ್ ಗಾತ್ರವನ್ನು ಒದಗಿಸಿವೆ. ಜೂಲ್ ಕ್ರೀವ್ ಈ ಸಿಹಿ ನೀರಿನ ಜಾಡು ಹಿಡಿದು ಅಮೆಝಾನ್ ನದಿಯನ್ನು ಶೋಧಿಸಿದ್ದ.

ಆದರೆ 'ಹಮ್‌ಜ಼ಾ' ನದಿಯನ್ನು ಕಂಡುಹಿಡಿದ ಬಗೆಯೇ ಬೇರೆಯ ರೀತಿಯದ್ದು.

ಅಮೆಝಾನಿನ ನದಿಪಾತ್ರದ ಉತ್ತರದ ಅಂಚಿನುದ್ದಕ್ಕೂ ಸುಣ್ಣ ಕಲ್ಲಿನಿಂದಾದ ಭೂರಚನೆಯಿದೆ. ಸರ್ರಂಧ್ರತೆಯನ್ನು ಹೊಂದಿರುವ ಜಲಜಶಿಲೆಗಳ ಮುಖಾಂತರ ಭೂಮಿಯ ಮೇಲ್ಮೈಯ ನೀರು ಬಸಿದು ನೆಲದಾಳವನ್ನು ಸೇರುತ್ತದೆ. (ಅಮೆಝಾನ್ ಪ್ರದೇಶದಲ್ಲಿ ಭೂಮಧ್ಯರೇಖೆಯ ಉಷ್ಣವಲಯದ ಹವಾಮಾನವಿದ್ದು, ಪ್ರತಿವರ್ಷ ೪೦೦೦ ಇಂಚಿನಷ್ಟು ಮಳೆಯಾಗುತ್ತದೆ).

ಇದರೊಂದಿಗೆ ಅಮೆಝಾನ್ ನದೀಪಾತ್ರದಲ್ಲಿನ ಪ್ರದೇಶದ ಭೂ ಹೊದಿಕೆಯಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಸಾಗುವ ಶಿಲಾಪದರಗಳಲ್ಲಿ ಬಿರುಕುಗಳು ಕಂಡುಬರುತ್ತವೆ. ಇವುಗಳ ಮುಖಾಂತರವೂ ಭೂಮಿಯ ಮೇಲಿನ ನೀರು ಬಸಿದು ಒಳಸೇರುತ್ತದೆ.

ರಯೋ ಡಿ ಜನೈರೋದ ಜಿಯೋಫಿಸಿಕಲ್ ಸೊಸೈಟಿ ಇತ್ತೀಚೆಗೆ ತನ್ನ ಸಂಶೋಧನೆಯನ್ನು ಪ್ರಕಟಿಸಿದ ಸಂದರ್ಭದಲ್ಲಿ ಸಂಶೋಧನೆಯ ವಿಧಾನವನ್ನು ಹೊರಗೆಡವಿತು.

ಸಂಶೋಧನೆಗಾಗಿ ಈ ಪ್ರದೇಶದಲ್ಲಿರುವ ೨೪೧ ಕ್ರಿಯಾಶೀಲವಲ್ಲದ ತೈಲಬಾವಿಗಳನ್ನು ಆರಿಸಿಕೊಳ್ಳಲಾಗಿತ್ತು. ಈ ಎಲ್ಲ ತೈಲಬಾವಿಗಳ ಆಳದಲ್ಲಿ ಭೂಗರ್ಭದ ಉಷ್ಣತೆಯನ್ನು ಅಳೆಯಲಾಯಿತು. ಸಾಮಾನ್ಯವಾಗಿ ಭೂ ಮೇಲ್ಮೈಯಿಂದ ನೆಲದಾಳಕ್ಕೆ ಇಳಿದಂತೆ ಉಷ್ಣತೆ ಕ್ರಮೇಣವಾಗಿ ಹೆಚ್ಚಾಗುತ್ತಾ ಹೋಗುತ್ತದೆ. ಆದರೆ ಈ ನಿಯಮಬದ್ಧವಾದ ಹೆಚ್ಚಳ (ಪ್ರವಣತೆ) ಕೆಲವು ಪ್ರದೇಶಗಳಲ್ಲಿ ವ್ಯತ್ಯಾಸವನ್ನು ತೋರಿಸುತ್ತದೆ. ಇದಕ್ಕೆ ಎರಡು ಕಾರಣಗಳುಂಟು:

ಅಲ್ಲಿರುವ ಭೂ ಶಿಲೆಗಳ ಗುಣ ಅಥವಾ ಆ ಪ್ರದೇಶದ ಭೂ ಇತಿಹಾಸದಲ್ಲಿ ಹಿಂದೊಮ್ಮೆ ಉಂಟಾಗಿದ್ದಿರಬಹುದಾದ ಹವಾಮಾನ ಬದಲಾವಣೆ. ಆದರೆ 'ಹಮ್‌ಜ಼ಾ' ನದಿಯ ವಿಷಯದಲ್ಲಿ ಇವೆರಡೂ ಸಾಧ್ಯವಿರಲಿಲ್ಲ. ಆದ್ದರಿಂದ ಅಮೆಝಾನ್ ಪ್ರದೇಶದಲ್ಲಿ ಕಂಡುಬಂದ ಉಷ್ಣತೆಯ ಇಳಿಮುಖಕ್ಕೆ 'ಬೇರೆಯದೇ' ಕಾರಣವನ್ನು ಹುಡುಕಲಾರಂಭಿಸಿದರು. ಆಗ ಕಂಡುಬಂದ ಅಂಶಗಳು :

೧. ಎಣ್ಣೆ ಬಾವಿಗಳಿರುವ ಪ್ರದೇಶಗಳಲ್ಲಿ ಕ್ಯಾಲ್ಸಿಯಂಯುಕ್ತ ಖನಿಜಗಳನ್ನೊಳಗೊಂಡಿರುವ ಸಂಯುಕ್ತ ಶಿಲೆಗಳು ಕಂಡುಬರುತ್ತವೆ. ಇದರಿಂದ ಈ ಪ್ರದೇಶದ ನೆಲದಾಳದಲ್ಲಿ ಹರಿಯುತ್ತಿರುವ ನೀರಿಗೂ, ಈ ಶಿಲೆಗಳಿಗೂ ಸಂಬಂಧವನ್ನು ಕಲ್ಪಿಸಿದ್ದಾರೆ ವಿಜ್ಞಾನಿಗಳು.

೨. ಅಮೆಝಾನ್ ಪಾತ್ರದಲ್ಲಿ ಭೂ ಹೊದಿಕೆಯ ಬಿರುಕುಗಳು, ಈ ಪ್ರದೇಶದಲ್ಲಿರುವ ಸರ್ರಂಧ್ರ ಮಗ್ಗಿನ ಮೇಲ್ಮೈ, ಇಲ್ಲಿರುವ 'ಪೆಂಟೆಶಿಲೆ' (ಕಾಂಗ್ಲೊಮೇಟ್) ಗಳ ಮುಖಾಂತರವೂ ನೀರು ಬಸಿಯುತ್ತದೆ.

೩. ಇಲ್ಲಿರುವ ಮತ್ತೊಂದು ಪ್ರಮುಖ ಭೂಲಕ್ಷಣವೆಂದರೆ – ಜಗತ್ತಿನ ಅತ್ಯಂತ ದೊಡ್ಡ ಜಲಕುಹರ (ಭೂಮಿಯಲ್ಲಿರುವ ನೀರಿನ ಪೊಟರೆ) ಗಳು (ಉದಾ : ಅಲ್ಬರ್ ಮತ್ತು ಚಾವೋ) ಅಮೆಝಾನ್‌ನ ಮಧ್ಯಭಾಗದಲ್ಲಿವೆ. ಇಲ್ಲಿ ಸಂಗ್ರಹವಾಗಿರುವ ನೀರು ಸತತವಾಗಿ ಭೂಮಿಯಾಳಕ್ಕೆ ಬಸಿಯುತ್ತಿರುತ್ತದೆ.

ಇನ್ನು ಸಂಶೋಧನೆಯ ಎರಡನೆಯ ಭಾಗ ಇಲ್ಲಿರುವ ನೀರು ನದಿಯಾಗಿ ಹರಿಯುತ್ತಿರುವುದಕ್ಕೆ ಕಾರಣ ಮತ್ತು ಅದು ಹರಿಯುವ ದಿಕ್ಕನ್ನು ಕಂಡುಹಿಡಿಯುವುದು. ಇದು ಸಾಧ್ಯವಾದದ್ದು ನೆಲದಾಳಕ್ಕೆ ಇಳಿದಂತೆ ಕಂಡುಬಂದ ಉಷ್ಣತೆಯಲ್ಲಿನ ವ್ಯತ್ಯಾಸದ ಅಧ್ಯಯನದಿಂದ.

ಇದು ಹೇಗೆಂದರೆ ನಮಗೆಲ್ಲಾ ತಿಳಿದಿರುವಂತೆ ಹರಿಯುವ ನೀರು ಉತ್ತಮ ಉಷ್ಣವಾಹಕ. ನ್ಯೂಕ್ಲಿಯರ್ ರಿಯಾಕ್ಟರ್‌ಗಳಲ್ಲಿ ಅದನ್ನು ತಂಪಾಗಿಡಲು ನೀರನ್ನು ಹರಿಸುವ ಪ್ರಕ್ರಿಯೆಯನ್ನು ಇಲ್ಲಿ ನೆನೆಯಬಹುದು. ಭೂಗರ್ಭದಲ್ಲಿ ಹರಿಯುವ ನೀರು ತನ್ನೊಂದಿಗೆ ಭೂ ಶಿಲಾಪದರಗಳ ಉಷ್ಣತೆಯನ್ನು ವರ್ಗಾಯಿಸುತ್ತದೆ. ಇದು ಉಷ್ಣದ ವಹನ, ಸಂವಹನ ಮತ್ತು ವಿಕಿರಣಗಳಿಂದ ಬೇರೆಯದೇ ಆದ ಅಧಿವಹನ ಪ್ರಕ್ರಿಯೆ. ನೀರು ಹರಿಯದಿರುವ ಪ್ರದೇಶದಲ್ಲಿ, ಉಷ್ಣತೆ ಹೆಚ್ಚಾಗಿರುವುದು ಕೂಡ ಅಧ್ಯಯನಗಳಿಂದ ತಿಳಿದುಬರುತ್ತದೆ.

ಈ ರೀತಿ ನೆಲದಾಳದ ಉಷ್ಣತೆಯನ್ನು ಅಳೆಯುವುದು ನೀರಿಲ್ಲದ ಕೊಳವೆ ಬಾವಿಗಳಲ್ಲಿ, ಇಲ್ಲವೆ, ಕ್ರಿಯಾಶೀಲವಲ್ಲದ ತೈಲಬಾವಿಗಳಲ್ಲಿ ಮಾತ್ರ ಸಾಧ್ಯ. ಇದು ಆ ಪ್ರದೇಶದಲ್ಲಿ ಹರಿಯುತ್ತಿರುವ ನೀರನ್ನು ಮಾತ್ರವಲ್ಲ, ಅದು ಹರಿಯುವ ದಿಕ್ಕನ್ನು ಸಹ ಸೂಚಿಸುತ್ತದೆ. ನೆಲದ ಮೇಲೆ ನದಿ ಹರಿಯುವ ದಿಕ್ಕು ಅಲ್ಲಿಯ ಭೌಗೋಳಿಕ ಅಂಶಗಳನ್ನು ಅವಲಂಬಿಸಿದರೆ, ನೆಲದಾಳದ ನೀರು ಹರಿಯುವ ದಿಕ್ಕು ಭೂಶಿಲೆಗಳ ವ್ಯಾಪಕತೆ ಅಥವಾ ಸರಂಧ್ರತೆಯನ್ನು ಅವಲಂಬಿಸುತ್ತದೆ. ಅಮೆಝಾನ್ ನದಿ ಹರಿಯುವ ದಿಕ್ಕು ಹಾಗೂ ನೆಲದಾಳದ ಹಮ್‌ಜ಼ಾ ನದಿಯ ದಿಕ್ಕು ಒಂದೇ ಆಗಿರುವುದು ಅಧ್ಯಯನಗಳಿಂದ ತಿಳಿದುಬಂದಿದೆ.

ಅಮೆಝಾನ್ ಪೆರುವಿನ ಆ್ಯಂಡಿಸ್ ಪರ್ವತಗಳಲ್ಲಿ ಹುಟ್ಟುವಂತೆ ಈ ನದಿಗೂ ಹುಟ್ಟು ಎಂಬುದನ್ನು ಗುರುತಿಸಬಹುದೇ ಎಂಬ ಪ್ರಶ್ನೆ ಉದ್ಭವಿಸುವುದು ಸಹಜ. ಡಾ॥ ಹಮ್‌ಜ಼ಾ ಹೇಳುವಂತೆ ಹಾಗೆ ನಿಖರವಾಗಿ ಗುರುತಿಸುವುದು ಸಾಧ್ಯವಿಲ್ಲ. ಹೆಚ್ಚು ಕಡಿಮೆ ತೈಲ ಬಾವಿಗಳಿರುವ ಪ್ರದೇಶದಲ್ಲಿ ನೀರು ನೆಲದಾಳಕ್ಕೆ ಬಸಿದಿರುವ ಲಕ್ಷಣಗಳು ಕಂಡುಬರುತ್ತವೆ. ನೆಲದಾಳದಲ್ಲಿ ಹರಿಯುವ ನದಿ ತಾನು ಹರಿಯುವ ಎಲ್ಲ ಪ್ರದೇಶಗಳಲ್ಲಿ ನೀರಿನ ಬಸಿಯುವಿಕೆಗೆ ಒಳಗಾಗಿ ಸಮುದ್ರವನ್ನು ಸೇರುವವರೆಗೂ ನೀರು ಪಡೆಯುತ್ತದೆ.

ಭೂಮಿಯ ಮೇಲ್ಮೈಗೆ ಸಮಾನಾಂತರವಾಗಿ ೪ ಕಿಲೋ ಮೀಟರ್ ಆಳದಲ್ಲಿ ನದಿಯಾಗಿ ಹರಿಯುತ್ತಿರುವ ಈ ನೀರು ಮತ್ತಷ್ಟು ಆಳಕ್ಕೆ ಇಳಿಯದಿರುವುದಕ್ಕೆ ಕಾರಣಗಳಿವೆ. ಭೂಮಿಯ ಸರಂಧ್ರೀಕರಣ ಶಿಲೆಯ ಮುಖಾಂತರ ನೆಲದಾಳಕ್ಕೆ ಇಳಿದ ನೀರು ಇನ್ನೂ ಆಳಕ್ಕೆ ಇಳಿಯದಂತೆ ಅಲ್ಲಿ ಅಗ್ನಿಶಿಲೆಯಿಂದಾದ ಪದರವಿದೆ. ಇದರ ಮುಖಾಂತರ ನೀರು ಬಸಿದುಹೋಗುವುದಿಲ್ಲ. ಹಾಗಾಗಿ ಭೂಮಿಗೆ ಸಮಾನಾಂತರವಾಗಿ ನದಿಯಾಗಿ ಹರಿಯುತ್ತದೆ. ಈ ಸರಂಧ್ರೀಕರಣ ಶಿಲೆಗಳು ಪೂರ್ವದಿಂದ ಪಶ್ಚಿಮದ ಕಡೆಗೆ ನೀರಿನ ಜಿನುಗುವಿಕೆಯ ಪ್ರಮಾಣದಲ್ಲಿ ವ್ಯತ್ಯಾಸವನ್ನು ಕಾಣಬಹುದಾಗಿದೆ. ಆ್ಯಂಡಿಸ್ ಪರ್ವತಶ್ರೇಣಿಯ ಶಿಖರಗಳಿಂದ ಅಟ್ಲಾಂಟಿಕ್ ಮಹಾಸಾಗರದ ಕಡೆಗೆ ಕ್ರಮೇಣ ಹೆಚ್ಚುವುದಿದೆ. ಭೂಮಿಯ ಮೇಲ್ಮೈಯ ಶಿಲಾಪದರವೂ ಇಂತಹುದೇ ಲಕ್ಷಣವನ್ನು ತೋರಿಸುವುದು ಕೂಡ ಇದಕ್ಕೆ ಕಾರಣವಾಗಿದೆ.

ನೆಲದಾಳದಲ್ಲಿ ಹರಿಯುತ್ತಿರುವ ಈ ಹಮ್‌ಜ಼ಾ ನದಿಯ ವೇಗ ಸೆಕೆಂಡಿಗೆ ಒಂದು ಮಿಲಿಮೀಟರ್. ನೆಲದ ಮೇಲೆ ಹರಿಯುವ ಅಮೆಝಾನ್ ನದಿಯ ವೇಗವಾದ ಸೆಕೆಂಡಿಗೆ ೫ ಮೀಟರ್‌ಗೆ ಹೋಲಿಸಿದರೆ ಇದು ಬಹಳ ಕಡಿಮೆಯೆ. ಏಕೆಂದರೆ ನೆಲದ ಆಳದಲ್ಲಿ ನೀರು ಹರಿಯಬೇಕಾದರೆ ಹೆಚ್ಚಿನ ಒತ್ತಡದ ಅವಶ್ಯಕತೆ ಇದೆ. ನೆಲದಾಳದಲ್ಲಿರುವ ದ್ರವ ಚಲನದ ಒತ್ತಡ ಹಮ್‌ಜ಼ಾ ನದಿಯ ಕಡಿಮೆ ವೇಗಕ್ಕೆ ಕಾರಣ.

ಈ ಅಪಾರ ಪ್ರಮಾಣದ ನೀರು ಗುಪ್ತಗಾಮಿನಿಯಾಗಿ ಮಾತ್ರ ಹರಿಯಬೇಕೇ, ಇದರ ಉಪಯೋಗವನ್ನು ಪಡೆಯಲು ಸಾಧ್ಯವಿಲ್ಲವೇ– ಎಂಬ ಪ್ರಶ್ನೆಗಳಿಗೆ ಡಾ॥ ಹಮ್‌ಜ಼ಾ ಹೇಳುತ್ತಾರೆ: ''ಖಂಡಿತ ಸಾಧ್ಯವಿದೆ, ಕೊಳವೆ ಬಾವಿಯನ್ನು ಕೊರೆದು ಈ ನೀರನ್ನು ಪಡೆಯಬಹುದು. ಆದರೆ ಅಮೆಝಾನ್ ನದಿಯ ಪಾತ್ರದಲ್ಲಿ ಅದರ ಅವಶ್ಯಕತೆ ಬರಲಾರದು. ಏಕೆಂದರೆ ವಿಶ್ವದಲ್ಲಿಯೇ ಅತಿ ಹೆಚ್ಚು ನೀರು ಹೊಂದಿರುವ ನದಿ ಅಮೆಝಾನ್. 'ಹಮ್‌ಜ಼ಾ' ಸದಾ ನೆಲದಾಳದ ನದಿಯಾಗಿ ಗುಪ್ತಗಾಮಿನಿಯಾಗಿ ಹರಿಯುತ್ತಿರುತ್ತದೆ ಎಂದು ಮಾತ್ರ ಊಹಿಸಬಹುದಾಗಿದೆ.''

**ಸುಮಂಗಲಾ ಎಸ್. ಮುಮ್ಮಿಗಟ್ಟಿ**
ಆಲ್ ಇಂಡಿಯಾ ರೇಡಿಯೋ, ರಾಜಭವನ್ ರೋಡ್, ಬೆಂಗಳೂರು - ೫೬೦೦೦೧

---

*(೪೬ನೇ ಪುಟದಿಂದ)*

ಕಡಿಮೆ, ಆದರೆ ಮಾತನಾಡಿದಾಗ ಗಂಭೀರ ಚಿಂತನೆಯ ಸೊಗಡು ಎದ್ದುಕಾಣುತ್ತದೆ,'' ಎಂದು. ಅವರು ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಕರ್ನಾಟಕ ರಾಜ್ಯ ಶಾಂತಿ ಮತ್ತು ಸೌಹಾರ್ದತಾ ಸಮಿತಿಯು ವಿಶ್ವ ಶಾಂತಿ ಸಮಿತಿಯ ಅಂತರರಾಷ್ಟ್ರೀಯ ಸಮ್ಮೇಳನವೊಂದನ್ನು ನಡೆಸಿತು. ಅದಕ್ಕೆ ಶ್ರೀ. ರಂಗನಾಥ್ ಅವರ ಸಹಕಾರ ಮತ್ತು ಭಾಗವಹಿಸುವಿಕೆ ಪ್ರಮುಖ ಒತ್ತಾಸೆಯಾಗಿತ್ತೆಂಬುದು ಎಲ್ಲ ಪ್ರತಿನಿಧಿಗಳ ಅಭಿಪ್ರಾಯವಾಗಿತ್ತು. ವಿಶ್ವದ ವಿದ್ಯಮಾನಗಳ ವಿಶ್ಲೇಷಣೆಯನ್ನು ಅವರು ಅಷ್ಟು ಕ್ಲುಪ್ತವಾಗಿ ನೀಡಿದ್ದರು.

ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರು ಸ್ಥಾಪಿಸಿದ್ದ ''ಪೀಪಲ್ಸ್ ಎಜುಕೇಷನ್ ಸೊಸೈಟಿ''ಗೆ ಬೆಂಗಳೂರಿನಲ್ಲಿ ಮೈಸೂರಿನ ಮಹಾರಾಜರು ಸ್ವಲ್ಪ ಭೂಮಿ ಕೊಟ್ಟಿದ್ದರು. ಸೊಸೈಟಿಯ ಕೇಂದ್ರ ಕಚೇರಿ ಇರುವುದು ಮುಂಬೈಯಲ್ಲಿ, ಆದರೆ ಬೆಂಗಳೂರಿನ ಶ್ರೀ. ರಂಗನಾಥ್ ಆ ಸೊಸೈಟಿಯ ಅಧ್ಯಕ್ಷರಾಗಿ ಅನೇಕ ವರ್ಷ ಸೊಸೈಟಿಯ ಹತ್ತಾರು ವಿದ್ಯಾಸಂಸ್ಥೆಗಳನ್ನು ಮುನ್ನಡೆಸಿದ್ದಾರೆ. ಸೊಸೈಟಿಯ ಕಾರ್ಯಕ್ಷೇತ್ರದ ಭಾಗವಾಗಿ ಬೆಂಗಳೂರಿನಲ್ಲಿ ಒಂದು ಸೊಗಸಾದ ಬೌದ್ಧ ವಿಹಾರವನ್ನು ಶ್ರೀ. ರಂಗನಾಥ್ ಸ್ಥಾಪಿಸಿದ್ದಾರೆ. ಅಲ್ಲಿ ಬೌದ್ಧ ಸಾಹಿತ್ಯದ ಅಧ್ಯಯನಕ್ಕೆ ಒಳ್ಳೆಯ ಸೌಲಭ್ಯ ಕಲ್ಪಿಸಲಾಗಿದೆ ಮತ್ತು ಒಳ್ಳೆಯ ಪುಸ್ತಕ ಭಂಡಾರವೂ ಇದೆ. ಸೊಸೈಟಿಯ ಕಾಲೇಜುಗಳು ಹತ್ತಾರಿವೆ. ಮುಂಬೈ, ಔರಂಗಾಬಾದ್, ಮಹಾಡ್, ಮುಂತಾದೆಡೆಗಳಲ್ಲಿ ಐವತ್ತು- ಅರವತ್ತು ವರ್ಷಗಳ ಇತಿಹಾಸವಿರುವ ಪ್ರಸಿದ್ಧ ಕಾಲೇಜುಗಳನ್ನು ಸೊಸೈಟಿ ನಡೆಸುತ್ತಿದೆ. ಶ್ರೀ. ರಂಗನಾಥ್ ಅವರ ಕಾರ್ಯನಿಷ್ಠೆ, ವಸ್ತುನಿಷ್ಠ ದೃಷ್ಟಿಕೋನ, ಮುಲಾಜಿಲ್ಲದ ಆಡಳಿತ ತಂತ್ರ, ಇವೆಲ್ಲವನ್ನೂ ಪೀಪಲ್ಸ್ ಎಜುಕೇಷನ್ ಸೊಸೈಟಿಯ ವಿದ್ಯಾಸಂಸ್ಥೆಗಳ ಅಧ್ಯಾಪಕರು, ಸಿಬ್ಬಂದಿ ವರ್ಗ, ಆಡಳಿತ ಮಂಡಲಿಯ ಸದಸ್ಯರು, ಬಹುವಾಗಿ ಶ್ಲಾಘಿಸುತ್ತಾರೆ. ಸ್ವತಃ ನಾನು ಮಹಾಡಿನ ಡಾ॥ ಅಂಬೇಡ್ಕರ್ ಕಾಲೇಜಿನಲ್ಲಿ ಎರಡು ವರ್ಷಗಳ ಕಾಲ ಕೆಲಸ ಮಾಡಿದ್ದೆನಾದ್ದರಿಂದ ನನಗೆ ಸೊಸೈಟಿಯ ಬೇರೆ ಕಾಲೇಜುಗಳ ಅಧ್ಯಾಪಕರ ಸಂಪರ್ಕ ಸಾಕಷ್ಟಿದೆ. ಮುಂಬೈನ ಸಿದ್ಧಾರ್ಥ ಕಾಲೇಜು ಬಹಳ ಖ್ಯಾತಿ ಗಳಿಸಿರುವ ಸಂಸ್ಥೆ. ಶ್ರೀ. ರಂಗನಾಥ್ ಅವರು ಅಧ್ಯಕ್ಷರಾದ ಕೆಲವೇ ತಿಂಗಳುಗಳ ತರುವಾಯದಲ್ಲಿ ಆ ಕಾಲೇಜಿನಲ್ಲಿ ಒಂದು ಬಿಕ್ಕಟ್ಟು ತಲೆದೋರಿತ್ತು. ಒಬ್ಬ ಮಹಿಳೆ ಆಗ್ಗೆ ಕಾಲೇಜಿನ ಪ್ರಾಚಾರ್ಯರು. ಆಕೆಯ ತಂದೆ ಮುಂಬೈನಲ್ಲಿ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತರಾಗಿದ್ದವರು, ಉಗ್ರ ಸ್ವಾತಂತ್ರ್ಯ ಹೋರಾಟಗಾರರು. ಮುಂಬೈನ ಒಂದು ರಸ್ತೆಗೆ ಅವರ ಹೆಸರು ಸಹ ಇದೆ. ಆಕೆ ಪ್ರಾಚಾರ್ಯರಾಗಿದ್ದಾಗ ಕಾಲೇಜಿನ ಹೊರಗಿನವರು ಕೆಲವರು ಡಾ॥ ಅಂಬೇಡ್ಕರ್ ಅವರ ಅನುಯಾಯಿಗಳು ತಾವೆಂದು ಹೇಳಿಕೊಂಡು ಕಾಲೇಜಿನೊಳಕ್ಕೆ ನುಸುಳಿ ಅನಗತ್ಯವಾಗಿ ಕಾಲೇಜಿನಲ್ಲಿ ಅಸ್ಥಿರತೆ ಉಂಟುಮಾಡಲು ಯತ್ನಿಸಿದ್ದರು. ಆ ಸಂದರ್ಭದಲ್ಲಿ ಶ್ರೀ. ರಂಗನಾಥ್ ಅವರು ಮಧ್ಯಪ್ರವೇಶ ಮಾಡಿ ಕಠಿಣ ಕ್ರಮಗಳನ್ನು ಕೈಗೊಂಡು ಸಿದ್ಧಾರ್ಥ ಕಾಲೇಜಿನ ಘನತೆಯನ್ನು ಉಳಿಸಿದರು. ಬೆಂಗಳೂರಿನಲ್ಲಿದ್ದುಕೊಂಡೇ ಮುಂಬೈನ ಪೀಪಲ್ಸ್ ಎಜುಕೇಷನ್ ಸೊಸೈಟಿಯ ವ್ಯವಹಾರಗಳನ್ನು ಸುಗಮವಾಗಿ ನಡೆಯುವಂತೆ ಕಾರ್ಯ ನಿರ್ವಹಿಸುವುದು ರಂಗನಾಥ್ ಅಂಥವರಿಗೆ ಮಾತ್ರ ಸಾಧ್ಯ. ಅವರದೇನೂ ಸ್ವಾರ್ಥವಿಲ್ಲವೆಂದು ಸಂಸ್ಥೆಯ ಆಡಳಿತ ಮಂಡಲಿಯ ಸದಸ್ಯರೆಲ್ಲಾ ತಿಳಿದಿದ್ದಾರೆ; ಆದ್ದರಿಂದಲೇ ಅವರಿಗೆ ಬೆಂಬಲ ಮತ್ತು ಸಹಕಾರ ನೀಡುತ್ತಾ ಬಂದಿದ್ದಾರೆ. ಅಂತಹ ಸಂಸ್ಥೆಯಲ್ಲೂ ಒಂದೆರಡು ಒಡಕು ದನಿಗಳಿರುವುದು ಬಹಿರಂಗ ಸತ್ಯ. ಆ ಒಡಕುಗಳಿಂದ ಸಂಸ್ಥೆಯ ಚಟುವಟಿಕೆ ಮತ್ತು ಗೌರವಕ್ಕೆ ಕುಂದುಬಾರದಂತೆ ಕಾರ್ಯ ನಿರ್ವಹಿಸುತ್ತಿದ್ದುದು ಶ್ರೀ. ರಂಗನಾಥ್ ಅವರ ವ್ಯಕ್ತಿತ್ವದ ಒಂದು ಮೇರು ಲಕ್ಷಣ. ಅವರಂತೆ ಜನಪರ ಕಾಳಜಿಯುಳ್ಳ ನೇತಾರರ ಕೊರತೆ ಇಂದಿನ ಸನ್ನಿವೇಶದಲ್ಲಿ ಕಣ್ಣಿಗೆ ರಾಚುವಂತಿದೆ. ಅಂತಹ ಕೊರತೆಯನ್ನು ಸಾತ್ವಿಕವಾಗಿ ತುಂಬುವುದು ಮಾನ್ಯ ಶ್ರೀ. ರಂಗನಾಥ್ ಅವರಿಗೆ ನಾವು ಸಲ್ಲಿಸಬೇಕಾದ ಗೌರವ ಮತ್ತು ಕೃತಜ್ಞತೆ.

**ಜಿ. ರಾಮಕೃಷ್ಣ**
ಬೆಂಗಳೂರು

# ಪಾಕ ಚಾಲನೆ

**ಅಡುಗೆ ಮನೆಯಲ್ಲಿ ನೆರವಿಗೆ ಇರುವವರು ನಮ್ಮ ಆಲೋಚನೆಯ ಜೊತೆ ಹೆಜ್ಜೆ ಹಾಕುವವರಾದಾಗ ಅಡುಗೆ ಕೆಲಸ ಎಷ್ಟೇ ಇದ್ದರೂ ಬೇಸರ ಬಾರದು. ಹೀಗೆ ಸಮಾನ ಚಿಂತನಾಕ್ರಮ ಇರುವುದು ಅವರು ನಿರಂತರ ನಮ್ಮ ಜೊತೆ ನೆರವಿಗೆ ಬರುವ ಮೂಲಕ, ಇಲ್ಲವೆ ಅವರಿಗೂ ಅಡುಗೆ ಗೊತ್ತಿದ್ದಾಗ. ಅನನುಭವಿಗಳು ಹೆಚ್ಚುಗಟ್ಟಲೆ ಅಡುಗೆ ಕೆಲಸದಲ್ಲಿ ನೆರವಿಗೆ ಇದ್ದರೆ, ನಮ್ಮ ಶ್ರಮ ದುಪ್ಪಟ್ಟು ಆದಂತೆನಿಸುತ್ತದೆ. ''ಅದು ತಾ, ಇದು ತಾ'' ಅಂದರೆ, ವಸ್ತುವಿನ ಹೆಸರು ನಮ್ಮ ಬಾಯಿಂದ ಉದುರುವವರೆಗೆ ಅವರು ಕಾದು ನಿಂತಾರು; ಪಾಕ ಬಲ್ಲವರು ಹೇಳುವ ಮೊದಲು ಒದಗಿಸಿಯಾರು. ಇದೇ ಮುಖ್ಯ ವ್ಯತ್ಯಾಸ.**

ಡಾ॥ ಸಬೀಹಾ ಭೂಮಿಗೌಡ

ಅಡುಗೆಗೂ ವಾಹನ ಚಾಲನೆಗೂ ಇಷ್ಟೊಂದು ಹತ್ತಿರದ ಸಂಬಂಧ ಇದೆ ಎಂದು ನನಗೆ ಗೊತ್ತಿರಲಿಲ್ಲ. ಈ ಮಾತು ಬೇರೆ ಯಾರೋ ಹೇಳಿದ್ದಿದ್ರೆ ನಾನು ನಕ್ಕು ಬಿಡ್ತಿದ್ದೆ. ಆದ್ರೆ ಸ್ವಾನುಭವ ಇದೆಯಲ್ಲ, ಅದರ ಮುಂದೆ ಉಳಿದುದೆಲ್ಲ ಗಾಳಿಗೆ ತೂರಿದಂತೆ. ಎಲ್ಲವೂ ಆರಂಭವಾದದ್ದು ಅತ್ಯಂತ ಅನಿರೀಕ್ಷಿತವಾಗಿ. ''ನೀನು ಇಷ್ಟು ದೊಡ್ಡವಳಾದ್ರೂ ಅಡುಗೆಮನೆಯಲ್ಲಿ ನನಗೇನೂ ಸಹಾಯನೇ ಮಾಡೋದಿಲ್ಲ'', ...ಅದೊಂದು ದಿನ ಹೀಗೆ ಮಗಳೊಂದಿಗೆ ಕಾಲುಕೆರೆದುಕೊಂಡು ಜಗಳ ಹೂಡಿದ್ದೆ. ಅದರ ಪರಿಣಾಮ ಏನಾಗಬಹುದು ಎಂದು ಆಗ ನಾನು ಅಂದಾಜೂ ಮಾಡಿರಲಿಲ್ಲ. ನನ್ನ ಈ ಬಗೆಯ ಆಕ್ಷೇಪಗಳನ್ನು ಈ ಹಿಂದೆಯೂ ಹತ್ತಾರು ಬಾರಿ ಕೇಳಿ, ಕೇಳಿದ ಮರುಕ್ಷಣ ಮರೆತಂತೆ, ಇದೂ ಆದೀತು ಎಂದೇ ಅಂದುಕೊಂಡಿದ್ದೆ. ಉಹೂಂ... ಬರೆಯುವುದನ್ನು ಬಿಟ್ಟು ಮಗಳು ಎದ್ದುಬಂದಳು. ''ಏನ್ ಮಾಡಬೇಕು ಹೇಳಮ್ಮ'' ಎಂದಾಗ ಅವಳಿಗೆ ಕೊಡಲು ಕೆಲಸಕ್ಕಾಗಿ ಹುಡುಕಿದೆ. ''ತಗೋ ಚಪಾತಿ ಹಿಟ್ಟು ಕಲ್ಸು'' ಎಂದೆ.



''ಉಹೂಂ, ಅದು ನಂಗಾಗಲ್ಲ, ಬೋರು'' ಎಂದಳು.

''ಹಾಗಂದ್ರೆ ಹ್ಯಾಗೆ? ನಾನೂ ಬೋರು ಅಂತ ಕೂತ್ರೆ ನೀನು ಚಪಾತಿ ತಿನ್ನೋಕಾಗ್ತಿತ್ತಾ?... ಹೋಗ್ಲಿ... ನಾನೇ ಹಿಟ್ಟು ನಾದ್ತೀನಿ ನೀನು ಚಪಾತಿಯಾದ್ರೂ ಲಟ್ಸು'' ಎಂದೆ.

''ಅಮ್ಮಾ, ಬರೀ ಕಷ್ಟದ ಕೆಲ್ಸ ಹೇಳ್ತೀಯಲ್ಲ... ಏನಾದ್ರೂ ಸುಲಭದ್ದು ಇದ್ರೆ ಹೇಳು. ನೀನು ಲಟ್ಟಿಸಿಕೊಡು, ನಾನು ಬೇಕಂದ್ರೆ ನಿಂತುಕೊಂಡು ಸುಡ್ತೀನಿ'' ಎಂದಳು. ಅನಿವಾರ್ಯವಾಗಿ ಒಪ್ಪಿಕೊಂಡೆ.

ಕಾವಲಿ, ಎಣ್ಣೆಬಟ್ಟಲು, ಚುಚ್ಚುಗ, ಗೆರಸೆ, ಕೈ ಒರೆಸಲು ಬಟ್ಟೆ ಹೀಗೆ ಒಂದೊಂದೇ ಹತಾರಗಳನ್ನು ಆಕೆ ಜೋಡಿಸಿಕೊಳ್ಳತೊಡಗಿದ್ದನ್ನು ಓರೆಗಣ್ಣಿನಿಂದಲೇ ನೋಡಿ, ಪರವಾಗಿಲ್ಲ ಎಂದುಕೊಂಡೆ. ಬೆಂಕಿಕಡ್ಡಿ ಹುಡುಕಿ, ಆಕೆ ಗ್ಯಾಸ್ ಹಚ್ಚುವಷ್ಟರಲ್ಲಿ ಒಂದು ಚಪಾತಿ ಲಟ್ಟಿಸಿ ಇಟ್ಟೆ. ಟಿಂವ್ ಎನ್ನುವಂತೆ ಸಣ್ಣ ಉರಿ ಹಚ್ಚಿ, ಕಾವಲಿ ಕಾಯಲು ಇಟ್ಟಾಗ ಕಿರಿಕಿರಿಯಾದರೂ ತಡೆದುಕೊಂಡು, ''ಉರಿ ಜೋರು ಮಾಡು'' ಎಂದೆ. ಆಕೆ ಲಟ್ಟಿಸಿಟ್ಟ ಚಪಾತಿಯನ್ನ ಕೈಯಲ್ಲಿ ಎತ್ತಿಕೊಳ್ಳಲು ಒಂದು ಗಂಟೆ, ಎತ್ತಿದ್ದನ್ನು ಕಾವಲಿಗೆ ಹಾಕಲು ಒಂದು ಗಂಟೆ ಮಾಡುತ್ತಿದ್ದುದನ್ನು ಕಂಡು ಕಸಿವಿಸಿ ಜೋರಾಗತೊಡಗಿತು. ಸಿಟ್ಟು ನೆತ್ತಿಗೇರೀತು ಎಂದುಕೊಂಡು, ಅವಳಿಗೆ ಬೆನ್ನು ಹಾಕಿ ಚಪಾತಿ ಲಟ್ಟಿಸತೊಡಗಿದೆ. ಗಳಿಗೆ ಗಳಿಗೆಗೂ ಚುಚ್ಚುಗಧಾರಿಯಾಗಿ ಚಪಾತಿಯನ್ನು ಕಾವಲಿಯಲ್ಲಿ ಒಂದೆಡೆ ಇರಲು ಬಿಡದೆ, ಇತ್ತಿಂದತ್ತ, ಅತ್ತಿಂದಿತ್ತ ಸ್ಥಾನಾಂತರ ಮಾಡತೊಡಗಿದಾಗ ನನ್ನಿಂದ ಸುಮ್ಮನಿರಲಾಗಲಿಲ್ಲ.

''ಚಪಾತಿ ಬೇಯಲಿಕ್ಕೆ ಪುರುಸೊತ್ತು ಕೊಡು. ಅದೇನು ಚಪಾತಿ ಸುಡ್ತಾ ಇದ್ದೀಯೋ ಆಟ ಆಡ್ತಾ ಇದ್ದೀಯೋ'' ಎಂದೆ.

''ಅಮ್ಮಾ, ನೀನು ಸುಮ್ನೆ ಲಟ್ಸು. ನಂಗೆ ಗೊತ್ತು ಹ್ಯಾಗ್ ಸುಡ್‌ಬೇಕು ಅಂತ.''

''ಸರಿ ತಾಯಿ, ದೊಡ್ಡ್ ನಮಸ್ಕಾರ. ಆಗ್ಲೇ ನಾನು ನಾಲ್ಕು ಲಟ್ಸಿ ಆಯ್ತು. ನೀನು ಇನ್ನೂ ಮೊದಲನೇದ್ದೇ ಸುಡ್ತಾಇದ್ದಿ. ಅದ್ಕಂತ...''

ನನ್ನ ಮಾತು ಪೂರ್ಣವಾಗುವಷ್ಟರಲ್ಲಿ ಗ್ಯಾಸ್‌ನ ಉರಿ ಒಮ್ಮೆಲೆ ಜೋರಾಯಿತು; ಚುಚ್ಚುಗದ ಸದ್ದು ಗಣನೀಯವಾಗಿ ತಗ್ಗಿತು.

''ಚಪಾತಿ ಹೊತ್ತಿತು ಅನ್ಸುತ್ತೆ, ಬೇಗ ತಿರುಗ್ಸು.''

''ಏನಮ್ಮ ನೀನು, ಸುಮ್ನೆ ವಟವಟ ಅಂತೀಯಾ. ಇಲ್ಲಿ ನಾನಿಲ್ವಾ'' ಎಂದು ರಾಗ ಎಳೆದೇ ಚಪಾತಿ ತಿರುಗಿಸಿದ ಆಕೆ, ಅದು ಕರಕಲಾದದ್ದು ಕಂಡು, ''ನನ್ಗೆ ಬೆನ್ನುಹಾಕಿ ಕೂತಿದ್ರೂ, ನಿಂಗೆ ಚಪಾತಿ ಹೊತ್ತಿದ್ದು ಹ್ಯಾಗೆ ಗೊತ್ತಾಯ್ತು'' ಎಂದು ಪ್ರಶ್ನೆಯನ್ನು ಎಸೆದಳು.

''ಬೆನ್ನು ಹಾಕಿ ಕೂತ್ರೆ ಏನಾಯ್ತು, ಮೂಗಿಲ್ವಾ ?''

''ನಂಗೂ ಇದೆಯಲ್ಲ, ನಂಗೆ ಗೊತ್ತಾಗದ ವಾಸ್ನೆ ನಿಂಗೆ ಹ್ಯಾಗೆ ಗೊತ್ತಾಯ್ತು?''

''ನೋಡು, ಚಪಾತಿ ಜೊತೆ ನೀನು ಮಾತಾಡ್ಬೇಕು... ಆಗ ನಿಂಗೇ ಇದೆಲ್ಲ ಅರ್ಥ ಆಗುತ್ತೆ.''

''ಏನ್ ನೀನು! ನಿನ್ನ ಸಾಹಿತ್ಯದ ಕ್ಲಾಸಲ್ಲಿ ಪಾಠ ಮಾಡ್ದ್ಹಂಗೆ ಕಾಣ್ತಾ ಇದೆ.... ಅದ್ಹ್ಯಾಗಮ್ಮಾ ಚಪಾತಿ ಜೊತೆ ಮಾತಾಡೋದು ?''

''ಉರಿ ಇಷ್ಟಿದ್ರೆ, ಎಷ್ಟ್ ಸೆಕೆಂಡ್‌ಗೆ ಅದು ಉಬ್ಬುತ್ತೆ, ಯಾವಾಗ ತಿರುಗ್ಸಿ ಹಾಕ್‌ಬೇಕು, ಯಾವಾಗ ಎಣ್ಣೆ ಸವರ್‌ಬೇಕು, ಯಾವ್ ಕಡೆ ಬೆಂದಿದೆ, ಯಾವ್ ಕಡೆ ಇಲ್ಲ ಅಂತ ತಿಳ್ಕೊಳ್ಳೋದು. ಬಿಟ್ಟೂ ಬಿಡದೆ ಚಪಾತೀನ ಹೊರಳಿಸ್ತಾ ಇದ್ರೆ, ಅದು ಪೂರಿ ಉಬ್ಬಿದ್‌ಹಾಗೆ ಉಬ್ಬಲ್ಲ; ಗಟ್ಟಿ ಆಗುತ್ತೆ, ನಾರ್ ಆಗುತ್ತೆ. ಚಪಾತಿ ಮೃದು ಆಗಬೇಕಂದ್ರೆ, ಅದ್ರ ಜೊತೆ ಮಾತಾಡ್ಕೊಂಡು, ಅದನ್ನ ಅರ್ಥ ಮಾಡ್ಕೊಂಡು ಬೇಯಿಸಬೇಕು. ಲಟ್ಟಿಸುವಾಗ ಇರುವಷ್ಟೇ ಕಾಳಜಿ ಇದ್ರಲ್ಲೂ ತೋರಿಸಬೇಕು. ಇಲ್ಲಂದ್ರೆ...''

''ಇಲ್ಲಂದ್ರೆ, ಅವತ್ತ್ ಅಪ್ಪ ನಿಂಗೆ ಡ್ರೈವಿಂಗ್ ಪಾಠ ಮಾಡಿದ್ರಲ್ಲ ಹಾಗೆ...'' ಎಂದು ಅಣಕಿಸಿದಳು. ನನ್ನ ಮನಸ್ಸು ಆ ದಿನಕ್ಕೆ ಹೊರಳಿತು.

ಆ ದಿನ ಕಾರು ನಾನೇ ಚಲಾಯಿಸ್ತಿದ್ದೆ. ಅವನು ಪಕ್ಕದಲ್ಲಿ ಕೂತಿದ್ದ. ಇದ್ದಕ್ಕಿದ್ದಂತೆ ''ನಿಲ್ಸು ನಿಲ್ಸು'' ಎಂದು ಕೂಗಿಕೊಂಡ. ಗಾಬರಿಗೊಂಡು ಬ್ರೇಕ್ ಒತ್ತಿದೆ. ಧಡಕ್ಕನೆ ಇಳಿದ ಆತ ''ಆಯ್ತು ಕತೆ'' ಎಂದು ಉದ್ಗರಿಸಿ, ''ಇಳಿ ಇಳಿ'' ಎಂದ. ಕಾರಣ ಹೊಳೆಯದೆ ಇಂಜಿನ್ ಆಫ್ ಮಾಡಿ ಇಳಿದು ನೋಡಿದರೆ ಟಯರ್ ಪಂಕ್ಚರ್ ಆಗಿತ್ತು. ಹೊರಟು ಒಂದು ನಿಮಿಷವೂ ಆಗಿರಲಿಲ್ಲ. ಅದುವರೆಗೆ ಸರಿಯಿದ್ದ ಚಕ್ರ ಅಷ್ಟು ಪಕ್ಕನೆ ಪಂಕ್ಚರ್ ಆದದ್ದು ಹೇಗೆ, ಎಂದು ಅಚ್ಚರಿಗೊಂಡೆ. ಜೊತೆಗೇ ವಾಹನ ಚಲಾಯಿಸುತ್ತಿದ್ದ ನನಗೆ ತಿಳಿಯದ ವ್ಯತ್ಯಾಸ ಪಕ್ಕದಲ್ಲಿದ್ದ ಆತನಿಗೆ ತಿಳಿದ ಬಗೆಯಾದರೂ ಹೇಗೆ ಎಂದು ಅವನನ್ನು ಕೇಳಿದೆ. ''ಡ್ರೈವರ್ ಸೀಟಲ್ಲಿ ಕೂತ್ರೆ ಸಾಲದು, ಗಾಡಿ ಜೊತೆ ಮಾತಾಡೋದ್ ಕಲೀಬೇಕು. ಅದರ ನಾಡಿಮಿಡಿತ ಅರ್ಥ ಮಾಡ್ಕೋಬೇಕು'' ಎಂದ. ನನ್ನ ಸರಳ ಪ್ರಶ್ನೆಗೆ ಆತನದು ಗೂಢವಾದ ಉತ್ತರ ಎನಿಸಿತು. ಹಟಬಿಡದೆ ''ವ್ಯತ್ಯಾಸವೇನು ಹೇಳು'' ಎಂದೆ. ''ಪಂಕ್ಚರ್ ಆದ್ರೆ ಗಾಡಿ ಒಂದ್‌ಕಡೇ ಎಳೀತದೆ... ಮತ್ತೇ... ಅದು... ಅದು... ಅಭ್ಯಾಸ ಆದಾಗ ನಿಂಗೇ ವ್ಯತ್ಯಾಸ ಗೊತ್ತಾಗುತ್ತೆ'' ಎಂದ. ನನಗೋ ತಲೆಬುಡ ಅರ್ಥ ಆಗಲಿಲ್ಲ. ಆ ದಿನದಿಂದ ಮುಂದೆ ಯಾವಾಗ್ಲೇ ವಾಹನ ಚಲಾಯಿಸುವಾಗಲೂ, ಒಂದಿಷ್ಟು ವ್ಯತ್ಯಾಸ ಅನ್ನಿಸಿದರೂ ಪಂಕ್ಚರ್ ಭಯ ನನ್ನನ್ನು ಕಾಡತೊಡಗಿತು. ಕಾರಿನಿಂದ ಇಳಿದ ಮೇಲೆ, ಕಾರಿಗೆ ಹತ್ತುವ ಮೊದಲು ಟಯರ್‌ಗೆ ಒದೆದು, ಗಟ್ಟಿ ಇದೆಯಾ ಅಂತ ನೋಡುವ ಚಾಳಿ ನನಗೆ ಶುರುವಾಯಿತು. ಹೀಗೆ ನಾನು ಮಾಡುತ್ತಾ ಇದ್ದಾಗ ಒಮ್ಮೆ ಸೆಕ್ಯುರಿಟಿಯವನು ಓಡಿಬಂದು, ವಿಚಾರಿಸತೊಡಗಿದಾಗ, ನಾಚಿಕೆಯಾಗಿ ಅಂದಿನಿಂದ ಇಂಥ ಅಭ್ಯಾಸ ಕಡಿಮೆ ಮಾಡಿದೆ. ನನ್ನ ಈ ಫಜೀತಿಯನ್ನು ಮಗಳೊಂದಿಗೆ ಹಂಚಿಕೊಂಡಿದ್ದೆ. ಹೀಗಾಗಿ ನಾನು ಅವಳಿಗೆ ''ಚಪಾತಿ ಜೊತೆ ಮಾತಾಡ್ಬೇಕು'' ಅಂದೊಡನೆ, ನನಗೇ ಬಾಣ ತಿರುಗಿಸಿದ್ದಳು.



೨

''ಇಬ್ರೂ ಸೀದಾ ಬಂದ್ ಕೂತ್‌ಬಿಡ್ತೀರಾ. ಕಾರಿನ ಗ್ಲಾಸ್ ಒರೆಸ್ಬೇಕು ಅಂತ ಒಬ್ರಿಗೂ ಅನ್ನಿಸಿಲ್ಲಲ್ವ. ಡ್ರೈವ್ ಮಾಡೋದಲ್ದೇ, ಇದ್ನೂ ನಾನೇ ಮಾಡ್ಬೇಕಾ'' ಹೀಗೆ ಒಂದು ದಿನ ಆತ ಗೊಣಗಿದ.

ತಪ್ಪು ನಮ್ಮದಾದ್ದರಿಂದ ತೆಪ್ಪಗಿದ್ದೆವು. ಒಂದು ಗಂಟೆ ಕಾಲ ಪ್ರಯಾಣ ಮಾಡುತ್ತಿದ್ದಂತೆ, ''ಸ್ವಲ್ಪ ನೀರಿದ್ರೆ ಕೊಡಿ'' ಎಂದ. ಕಾರೊಳಗೆ ಹುಡುಕಿದರೆ, ಒಂದೂ ನೀರಿನ ಬಾಟ್ಲು ಸಿಗಲಿಲ್ಲ. ಮಗಳೂ ನಾನೂ ಮುಖಮುಖ ನೋಡಿಕೊಂಡೆವು. ''ಹೂಂ, ಅದೂ ತಂದಿಲ್ವಾ ? ನಾನು ಏನೇನ್ ಮಾಡ್ಬೇಕು ಅಂತ ನಿರೀಕ್ಷಿಸ್ತೀರಿ ? ಹೊರಡೋ ಮುಂಚೆ ಏನೇನಿದೆ ಏನಿಲ್ಲ ಅಂತ ನೋಡೋ ಜವಾಬ್ದಾರಿ ನಿಮ್ಗೆ ಬೇಡ್ವಾ ? ಎಲ್ಲಾದಕ್ಕೂ ನಾನೇ ತಲೆಕೊಡ್ಬೇಕಾ ? ಒಂದ್ ದಿನವಾದ್ರೂ ನೀವು ಈ ಕೆಲ್ಸ ಸರಿಯಾಗಿ ಮಾಡಿದ್ ಇದೆಯಾ ?'' ಅವನು ಸಹಜವಾಗೇ ರೇಗಾಡಿದರೆ, ನಾವು ಉಸಿರಾಟದ ಸದ್ದು ಕೇಳದಂತೆ ತೆಪ್ಪಗಿದ್ದೆವು. ಒಂದಷ್ಟು ಹೊತ್ತು ಕಳೆದಾಗ, ''ಅಪ್ಪಾ, ಒಂದ್ ಮಾತ್ ಹೇಳ್ಲಾ'' ಎಂದಳು. ಅಷ್ಟೊತ್ತಿಗೆ ತಣ್ಣಗಾಗಿದ್ದ ಆತ, 'ಏನು ?' ಎಂದ. ''ನೀನು ಒಂದ್ ದಿನಾನಾದ್ರೂ ಊಟಕ್ಕ ತಯಾರಿ ಮಾಡಿದ್ ಇದೆಯಾ ? ಅಡಿಗೆ ಮಾಡೋದೂ ಅಮ್ಮಾ, ತಟ್ಟೆ, ಲೋಟ, ನೀರು ಇಡೋದೂ ಅಮ್ಮ. ಬಡಿಸೋದೂ ಅವ್ಳೇ ಅಲ್ವಾ ?''

''ಏನೀಗ ?''

''ಏನೂ ಇಲ್ಲ, ಆಗೇನೋ ನಮ್ಗೆ ಅಂದೆಯಲ್ಲ, ಅದ್ಕೇ'' ...ಅಂತ ರಾಗ ಎಳೆದು, ಅವನ ಕೆನ್ನೆ ಸವರುತ್ತ ಆತನಿಗೆ ಬೆಣ್ಣೆ ಹಚ್ಚತೊಡಗಿದಳು. ಸಣ್ಣನೆಯ ನಗು ಅವನ ಮುಖದಲ್ಲಿ ಕುಡಿ ಒಡೆದು, ''ಏನಾದ್ರೂ ಹೇಳಿದ್ರೆ ಇನ್ನೇನಾದ್ರೂ ಹೇಳ್ತೀರಿ. ಇದ್ಕೆಲ್ಲ ಸರೀ ಇದ್ದೀರಿ'' ಎಂದ. ''ಜಟ್ಟಿ ಅಡಿಗೆ ಬಿದ್ರೂ... ಅಂತ ಅದೇನೋ ಅಂತಾರೆ'' ಎಂದು ನಾನು ಒಗ್ಗರಣೆ ಹಾಕಿದೆ.

ಮಾತು ಸಾಗುತ್ತಿದ್ದಂತೆ, ಎದುರಿನ ವಾಹನದಾತ, ನಮಗೆ ದಾಟಿಹೋಗಲು ಜಾಗ ಬಿಡದೆ, ರಸ್ತೆಯೆಲ್ಲ ತನ್ನದೇ ಎಂಬಂತೆ ಹೋಗುತ್ತಿದ್ದ. ಒಂದಷ್ಟು ದೂರ ನೋಡಿದ ಈತ, ಜೋರಾಗಿ ಹಾರ್ನ್ ಮಾಡುತ್ತ, ಎಕ್ಸಲೇಟರ್ ಒತ್ತಿದ. ನಾವು ಬೇಡ ಬೇಡ ಎನ್ನುತ್ತಿದ್ದರೂ ಹಟ ಬಿಡದೆ ಓವರ್‌ಟೇಕ್ ಮಾಡಿದ ಬಳಿಕವೇ ಈತನಿಗೆ ಸಮಾಧಾನ ಸಿಕ್ಕಿದ್ದು! ಇದೂ ಒಂದು ಬಗೆಯ ಪಿತೃಪ್ರಧಾನ ಚಿಂತನೆ ಎನಿಸಿತು. ಹಾಕಿದ ಸವಾಲನ್ನು ಸ್ವೀಕರಿಸಿ, ಕೊನೆ ಮುಟ್ಟಿಸುವುದು, ಗೆಲ್ಲುವುದು ಪೌರುಷದ ಸಂಕೇತ ಎಂಬ ಚಿಂತನೆ ಇಂಥ ವರ್ತನೆಗಳ ಹಿಂದೆ ಕೆಲಸ ಮಾಡುತ್ತದೆ ಎಂದೇ ನನಗೆ ಅನ್ನಿಸುವುದು.

'ಅಳುವವರ ಎಡಕ್ಕೂ ಹೊಲಿಯುವವರ ಬಲಕ್ಕೂ ಕೂರಬಾರದು' ಎಂಬುದು ನಾನು ಚಿಕ್ಕಂದಿನಲ್ಲಿ ಕೇಳಿದ ಗಾದೆ. ಅದರ ಅರ್ಥ ಮಾತ್ರ ಅನಂತರದ ವರ್ಷಗಳಲ್ಲಿ ನನಗೆ ಸರಿಯಾಗಿ ಆಯಿತು. ಅದೇ ಗಾದೆಯನ್ನು ಸ್ವಲ್ಪ ಅನುಸರಿಸಿ, ಡ್ರೈವಿಂಗ್ ಬಲ್ಲವರು ಮುಂದಿನ ಸೀಟಲ್ಲೂ ಅಳ್ಳೆದೆಯವರು ಹಿಂದಿನ ಸೀಟಲ್ಲೂ ಕೂರಬಾರದು ಎಂದು ಹೇಳಬೇಕು. ಯಾಕೆಂದರೆ, ಸರಿಯಾಗಿ ಡ್ರೈವಿಂಗ್ ಬಲ್ಲವರು ಚಾಲಕರ ಎಡಭಾಗದಲ್ಲಿ ಕೂತರೆ, ಅವರೂ ಡ್ರೈವರ್‌ನ ಟೆನ್‌ಶನ್ ಅನುಭವಿಸುತ್ತಿರುತ್ತಾರೆ. ಕೈಕಾಲುಗಳು ಸುಮ್ಮನಿದ್ದರೂ ಅವರ ಮೆದುಳಿನಲ್ಲಿ ಡ್ರೈವಿಂಗ್ ಕ್ರಿಯೆ ನಿರಂತರ ನಡೆಯುತ್ತಿರುತ್ತದೆ. ಹೀಗಾಗಿ ರಸ್ತೆಯಲ್ಲಿ ಗುಂಡಿ ಕಂಡಾಗ, ಎದುರಿನ ಗಾಡಿಗೆ ತೀರ ಹತ್ತಿರವಾದಾಗ ಬ್ರೇಕ್ ಒತ್ತುವಂತಾಗುತ್ತದೆ. ಇನ್ನು ಚಾಲಕರು ಹೊಸಬರು, ಅನುಭವಿಗಳಲ್ಲ ಎಂದು ಗೊತ್ತಿದ್ದಾಗ, ಈ ಕ್ರಿಯೆ ಇನ್ನಿಷ್ಟು ಚುರುಕುಗೊಂಡು, ''ವೇಗ ಜಾಸ್ತಿ ಆಯ್ತು, ಕಡಿಮೆ ಮಾಡು; ಆ ಗುಂಡಿ ತಪ್ಪಿಸ್‌ಬಹುದಿತ್ತು; ಈಗ ಓವರ್‌ಟೇಕ್ ಮಾಡ್‌ಬೇಡ; ಎಡಕ್ಕೆ ಹೋದದ್ದು ಜಾಸ್ತಿ ಆಯ್ತು...'' ಹೀಗೆ ಪುಕ್ಕಟೆ ಸಲಹೆ ಕೊಡುತ್ತಿರುತ್ತಾರೆ. ಚಾಲಕರು ಮುಂಗೋಪಿಗಳಾಗಿದ್ದರಂತೂ ಕೂತಿದ್ದ ಯಾರಿಗೂ ಸಮಾಧಾನವೇ ಇರುವುದಿಲ್ಲ. ಡ್ರೈವರ್ ಜಾಗದಲ್ಲಿ ಹೆಂಡತಿ ಅಥವಾ ಮಗಳಿದ್ದರಂತೂ ಬಿಟ್ಟಿ ಸಲಹೆಗೆ ಕೊನೆಯೇ ಇರುವುದಿಲ್ಲ. ಒಂದು ಕಾಲಕ್ಕೆ ಈ ಕಿರುಕುಳ ಅನುಭವಿಸಿದ ಬಳಿಕ ಈ ಒಟ್ಟೂ ಪ್ರತಿಕ್ರಿಯೆಯ ಬಗ್ಗೆ ನನಗೆ ನನ್ನದೇ ಆದ ನಿಲುವುಗಳಿವೆ.

ಡ್ರೈವಿಂಗ್‌ಗೂ ಒಂದು ವ್ಯಾಕರಣವಿದೆ. ಇದೊಂದು ಭಾಷೆ ಇದ್ದಂತೆ. ಭಾಷೆಯನ್ನು ಪ್ರಜ್ಞಾಪೂರ್ವಕವಾಗಿ ಕಲಿಕೆಯಿಂದ ಮೈಗೂಡಿಸಿಕೊಂಡಂತೆ

ಡ್ರೈವಿಂಗ್ ಕೂಡ ನಮಗೆ ಲಭಿಸುತ್ತದೆ. ತೊದಲು ಮಾತು ಕಲಿತೇ ಪುಟ್ಟ ರಚನೆ, ವಾಕ್ಯಗಳನ್ನು ನಾವು ಬಳಸಲು ಕಲಿಯುವಂತೆ, ಡ್ರೈವಿಂಗ್‌ನಲ್ಲಿ ತೊದಲು ಹೆಜ್ಜೆ ಇಟ್ಟೇ, ಅವರವರ ಕಲಿಕೆಯ ವೇಗವನ್ನು ಅನುಸರಿಸಿ ಪ್ರಮಾದಗಳನ್ನು ಮಾಡಿ, ಅದರಿಂದಲೇ ಪಾಠದ ಕಲಿಕೆಯಾಗುತ್ತದೆ. ಅದೇ ರೀತಿಯಲ್ಲಿ ಭಾಷೆಗೆ ಉಪಭಾಷೆಗಳನ್ನು ನಾವು ಹಿರಿಯ-ಕಿರಿಯ ವಯಸ್ಸಿನವರ ಚಾಲನೆಯಲ್ಲಿ, ಹೊಸಬರ-ಹಳಬರ ಮತ್ತು ಪುರುಷರ-ಮಹಿಳೆಯರ ಚಾಲನೆಯಲ್ಲಿ ಕಾಣಲು ಸಾಧ್ಯವಿದೆ. ಡ್ರೈವಿಂಗ್‌ನ ಮೂಲ ವ್ಯಾಕರಣವನ್ನು ಎಲ್ಲರೂ ಒಪ್ಪಿಕೊಂಡರೂ ಅವರವರ ಸ್ವಭಾವ, ವಯಸ್ಸು, ಧೈರ್ಯ, ಛಾತಿ, ಪ್ರದೇಶ ಇವುಗಳಿಗನುಸಾರವಾಗಿ, ಅಲ್ಪ ಸ್ವಲ್ಪ ಭಿನ್ನತೆಗಳು ಇರುತ್ತವೆ ಮತ್ತು ಆ ಕಾರಣಕ್ಕಾಗಿ ಅವು ಉಪಭಾಷೆಗಳು ಎನಿಸಿಕೊಳ್ಳುತ್ತವೆ. ಇವುಗಳ ಜೊತೆಗೆ ವರ್ಗಾಧಾರಿತ ಉಪಭಾಷೆಗಳೂ (ಸಾಮಾಜಿಕ ಉಪಭಾಷೆ ಎನ್ನೋಣವೇ?) ಇರುತ್ತವೆ. ಲಾರಿ ಡ್ರೈವರ್‌ಗಳ ಭಾಷೆ ಕಾರು ಡ್ರೈವರ್‌ಗಳದ್ದಲ್ಲ, ಕೆಲವು ಊರುಗಳಲ್ಲಿ ಆಟೋರಿಕ್ಷಾ ಡ್ರೈವರ್‌ಗಳ ಭಾಷೆ ಭಯ ತರಿಸುವಂತಿರುತ್ತದೆ. ಕೆಎಸ್ಸಾರ್ಟಿಸಿ ಬಸ್ ಡ್ರೈವರ್‌ಗಳ ಭಾಷೆ ಮಗದೊಂದು ರೀತಿ. ರಸ್ತೆಯಲ್ಲಿ ಯಾರ್‍ಯಾರಿಗೆ ಎಷ್ಟೆಷ್ಟು ಮರ್ಯಾದೆ ನೀಡಬೇಕೆಂಬ ಅಘೋಷಿತ ನಿಯಮ ಆಯಾ ಊರಲ್ಲಿ ಚಾಲ್ತಿಯಲ್ಲಿರುತ್ತದೆ. ಅದಕ್ಕೆ ಭಂಗ ಬಂದಾಗ, ಪ್ರತಿಷ್ಠೆಗೆ ಪೆಟ್ಟು ಬಿದ್ದಿತೆಂದು ಅವರು ತೀಕ್ಷ್ಣ ಪ್ರತಿಕ್ರಿಯೆ ತೋರುವುದೂ ಇರುತ್ತದೆ. ಇರಲಿ, ಒಟ್ಟಿನಲ್ಲಿ ಇವೆಲ್ಲವೂ ಡ್ರೈವಿಂಗ್ ಎಂಬ ಮೂಲಭಾಷೆಯ ಉಪಭಾಷೆಗಳು ಎನ್ನಲು ಅಡ್ಡಿಯಿಲ್ಲ. ಹೀಗಾಗಿ ಪ್ರತಿ ಉಪಭಾಷೆಗೂ ಅದರದೇ ಆದ ಸ್ವಾಯತ್ತತೆ ಇರುತ್ತದೆ. ಅದನ್ನು ಪಳಗಿದ ಚಾಲಕರು ಎಳೆಯ ಚಾಲಕರ ಸಂದರ್ಭದಲ್ಲಿ, ಪುರುಷರು ಮಹಿಳೆಯರ ಸಂದರ್ಭದಲ್ಲಿ ಮಾನ್ಯಮಾಡುವುದೇ ವಿರಳ. ಭಾಷಾ ದಾದಾಗಿರಿಯಂತೆ ಇದು ಚಾಲನಾ ದಾದಾಗಿರಿ! ನಿಲ್ಲಿ, ಒಂದ್ ನಿಮಿಷ. ಭಾಷೆ-ಉಪಭಾಷೆ-ಭಾಷಾದಾದಾಗಿರಿ ಡ್ರೈವಿಂಗ್‌ಗೆ ಮಾತ್ರವಲ್ಲ; ಪಾಕಗೃಹದೊಳಗೂ ಸ್ಥಾನ ಪಡೆದಿದೆ. ಪ್ರತಿಯೊಬ್ಬರಿಗೂ ಅವರದೇ ಆದ ವ್ಯಾಕರಣಗಳಿವೆ. ಉಳಿದವರಿಗೆ ಅವು ಗೋಜಲೆನಿಸುವ ನಿಯಮಗಳು. ಅದನ್ನು ನಿತ್ಯ ಅನುಸರಿಸುವವರಿಗೆ ಲೀಲಾಜಾಲ ಎನಿಸುತ್ತವೆ. ಹೌದೇ?

ಇಂತಹ ಅಪೂರ್ವ ಹೊಳಹು ನನಗೆ ಮೂಡಿದ್ದೂ ಅಡುಗೆಮನೆಯಲ್ಲಿ. "ಕ್ಲಚ್ಚು, ಗೇರು, ಬ್ರೇಕು ಅಂದ್ರೆ ನನಗೆ ಏನೂ ಗೊತ್ತಿಲ್ಲ" ಅಂತ ನನ್ನ ಡ್ರೈವಿಂಗ್ ಗುರುವಿನ ಬಳಿ ಆತಂಕದಿಂದ ಹೇಳಿದ್ದೆ. ಅದಕ್ಕವರು ಡ್ರೈವಿಂಗ್ ಕಲಿಯಲು ಇದೇ ಅತ್ಯಂತ ಒಳ್ಳೆಯ ಪರಿಸರ ಎಂದಿದ್ದರು. ಅಚ್ಚರಿಯಿಂದ ಅವರತ್ತ ನೋಡಿದಾಗ, "ಅರೆಬರೆ ತಿಳುವಳಿಕೆ ಇರುವವರು ಅಥವಾ ನನಗೆಲ್ಲ ಗೊತ್ತು ಎನ್ನುವವರಿಗೆ ಡ್ರೈವಿಂಗ್ ಕಲಿಸೋದು ಕಷ್ಟ. ಅವರು ಕಲಿಸುವುದನ್ನು ಅರ್ಥ ಮಾಡಿಕೊಳ್ಳುವುದಕ್ಕೂ ಮೊದಲು ತಮ್ಮ ವಿಚಾರಗಳನ್ನು ಪ್ರಯೋಗ ಮಾಡಲು ಹೋಗ್ತಾರೆ. ನಿಮ್ಮಂಥವರಿಗೆ ಕಲಿಸೋದು ಸುಲಭ" ಎಂದಿದ್ದರು. ಅದೇ ರೀತಿ ಎಲ್ಲರಿಗೂ ಅಡುಗೆ ಕಲಿಸೋದು ಅಷ್ಟು ಸುಲಭವಲ್ಲ. ಇದು ಮಗಳಿಗೆ ಅಡುಗೆ ಕಲಿಸುವ ಹೊತ್ತಲ್ಲಿ ನನ್ನ ಅರಿವಿಗೆ ಬಂದಿತು. ಅವಳೋ ವಿಧೇಯ ವಿದ್ಯಾರ್ಥಿನಿ. ಅವಳ ಜಾಗದಲ್ಲಿ ಅವಳಪ್ಪ ಬಂದಾಗಲೇ ನಮ್ಮಲ್ಲಿ ಜಗಳ ಹುಟ್ಟೋದು. "ಅದ್ಯಾಕೆ ಅಷ್ಟು ನೀರುಳ್ಳಿ? ಟೊಮೆಟೋ ಹಾಕ್ದಿದ್ರೆ ಆಗಲ್ವ? ಇಷ್ಟ ಎಣ್ಣೆ ಹಾಕ್ತೀಯಾ? ಇದ್ಕೆ ಬೆಲ್ಲ ಬೇರೆ ಹಾಕ್ತೀಯಾ?" ಎಂಬ ತಕರಾರುಗಳು ಆರಂಭವಾಗಿ, "ನೀನು ಹೇಳಿದ ಹಾಗೇ ಮಾಡ್ಬೇಕಂತ ಏನು? ಹೀಗೆ ಮಾಡಿದ್ರೇನ್ ಆಗತ್ತೆ" ಎಂದು ಆತ ಪ್ರಯೋಗಕ್ಕೆ




# ಅಂಗಳದ ತುಂಬಾ ನಗುವ ಚೆಲ್ಯಾನು

ತಾಯೇ
ನಿನ್ನೆಲ್ಲ ನೋವು
ಒಲೆಯ ಬೆಂಕಿಯಾಗಿ ಉರಿದು
ಈ ನೆಲದ ಮಕ್ಕಳ
ಹಸಿವು
ಕೂಳ ಕಂಡಿತ್ತು

ತಾಯೇ
ನಿನ್ನೆಲ್ಲ ನೋವು
ಎಳ್ಳು ಹೂವಾಗಿ ಅರಳಿ
ಈ ಕೇರಿ ಮಕ್ಕಳ
ಮಾರಿ
ನಗುವ ಕಂಡಿತ್ತು

ತಾಯೇ
ನಿನ್ನೆಲ್ಲ ನೋವು
ಶ್ರಾವಣದ ಮಳೆಯಾಗಿ ಸುರಿದು
ಈ ಕರುಳ ಕುಡಿಗಳ
ದಾಹ
ನೀರ ನೋಡಿತ್ತು

ತಾಯೇ
ನಿನ್ನೆಲ್ಲ ನೋವು
ಕತ್ತಿ ಕೋಲಾಗಿ ಝಳಪಿಸಿ
ಈ ಬೇಟೆಗಾರರ ಸಿಟ್ಟು
ರಕ್ಕಸರ
ರುಂಡ ಕಡಿದಿತ್ತು...

ತಾಯೇ
ನಿನ್ನೆಲ್ಲ ನೋವು
ಒಂದರೆಕ್ಷಣ
ಈ ಹೆಗಲ ಮೇಲಿಡು
'ಹರ್ಕ್ಯುಲಸ್'ನಂತೆ
ಈ ಮಗನು
ಹೊತ್ತು ನಿಂತಾನು
ಒಡಲುರಿಯ

ಸುಕ್ಕುಗಟ್ಟಿದ ನಿನ್ನ
ಮೊಗದೊಳಗೆ
ಚೆಂಡುವ್ವ ಅರಳಿಸ್ಯಾನು
ಅಂಗಳದ ತುಂಬಾ
ಹಸುಗೂಸುಗಳ
ನಗುವ ಚೆಲ್ಯಾನು

ತಾಯೇsss...


ವಿ. ಹರಿನಾಥ ಬಾಬು ಸಿರುಗುಪ್ಪ
ಉಪ ಖಜಾನಾಧಿಕಾರಿ, ಉಪ ಖಜಾನೆ, ಗಂಗಾವತಿ - ೫೮೩ ೨೨೭, ಕೊಪ್ಪಳ ಜಿಲ್ಲೆ

ನಿಂತುಬಿಡುತ್ತಾನೆ. ನಿರುಪಾಯಳಾಗಿ ನಾನು ''ಮಾಡ್‌ಬಹುದು; ಜೊತೆಗೆ ರಿಸಲ್ಟ್ ಕೂಡ ಬದಲಾಗಬಹುದು'' ಎಂದೆಂದು ಸಿಟ್ಟನ್ನು ನುಂಗಿಕೊಳ್ಳುತ್ತೇನೆ. ಕೆಲವೊಮ್ಮೆ ಆತನ ಪಾಕ ನನಗಿಂತ ಚೆನ್ನಾಗಿ ಆದಂತೆ, ಇನ್ನೊಮ್ಮೆ ಕಳಪೆಯಾಗಿ ಮೂಲೆ ಸೇರಿದ್ದೂ ಇದೆ.

ಅಡುಗೆ ಮನೆಯಲ್ಲಿ ನೆರವಿಗೆ ಇರುವವರು ನಮ್ಮ ಆಲೋಚನೆಯ ಜೊತೆ ಹೆಜ್ಜೆ ಹಾಕುವವರಾದಾಗ ಅಡುಗೆ ಕೆಲಸ ಎಷ್ಟೇ ಇದ್ದರೂ ಬೇಸರ ಬಾರದು. ಹೀಗೆ ಸಮಾನ ಚಿಂತನಾಕ್ರಮ ಇರುವುದು ಅವರು ನಿರಂತರ ನಮ್ಮ ಜೊತೆ ನೆರವಿಗೆ ಬರುವ ಮೂಲಕ, ಇಲ್ಲವೆ ಅವರಿಗೂ ಅಡುಗೆ ಗೊತ್ತಿದ್ದಾಗ. ಅನನುಭವಿಗಳು ಹೆಚ್ಚುಗಟ್ಟಲೆ ಅಡುಗೆ ಕೆಲಸದಲ್ಲಿ ನೆರವಿಗೆ ಇದ್ದರೆ, ನಮ್ಮ ಶ್ರಮ ದುಪ್ಪಟ್ಟು ಆದಂತೆನಿಸುತ್ತದೆ. ''ಅದು ತಾ, ಇದು ತಾ'' ಅಂದರೆ, ವಸ್ತುವಿನ ಹೆಸರು ನಮ್ಮ ಬಾಯಿಂದ ಉದುರುವವರೆಗೆ ಅವರು ಕಾದು ನಿಂತಾರು; ಪಾಕ ಬಲ್ಲವರು, ಹೇಳುವ ಮೊದಲು ಒದಗಿಸಿಯಾರು. ಇದೇ ಮುಖ್ಯ ವ್ಯತ್ಯಾಸ. ಇವನು ಗಾಡಿಯ ರಿಪೇರಿಗೋ, ಗಾಡಿ ತೊಳೆಯಲೋ ನಿಂತಾಗ ಇದೇ ಕರಕರೆ. ನಟ್ಟು, ಬೋಲ್ಟು, ಸ್ಪಾನರು ಅಂತ ಅವನು ಹೇಳಿದ ತಕ್ಷಣ ನೀಡುವವರು ಇದ್ದಾಗ ಅವನು ಅನುಭವಿಸುವ ನೆಮ್ಮದಿ, ಅನನುಭವಿಗಳಿದ್ದಾಗ ನಡೆಯುವ ಜಗಳ ಅಡುಗೆಮನೆಗಿಂತ ಭಿನ್ನ ಅಂತ ನನಗನ್ನಿಸಿಲ್ಲ. ದೂರದೂರದ ಊರಿಗೆ ಹೋಗುವಾಗ ಡ್ರೈವಿಂಗ್ ಮತ್ತು ಗಾಡಿ ರಿಪೇರಿ ಬಲ್ಲ ಒಬ್ಬ ಗಂಡಸು ಜೊತೆಗಿರಬೇಕೆಂದು ಅವನು ಬಯಸುವಂತೆ, ಅತಿಥಿಗಳು ಬಂದಾಗ ಹೆಚ್ಚುಗಟ್ಟಲೆ ಅಡುಗೆ ಇದ್ದಾಗ, ಅಡುಗೆ ಬಲ್ಲವರು ಜೊತೆಗಿರಬೇಕೆಂದು ನಾನು ಬಯಸುತ್ತೇನೆ.

'ನೆನಪಿದೆಯೇ ಮೊದಲ ನೋಟ, ನೆನಪಿದೆಯೇ ಮೊದಲ ಸ್ಪರ್ಶ, ನೆನಪಿದೆಯೇ ಮೊದಲ...' ಎಂಬ ಸಿನಿಮಾ ಗೀತೆಯಂತೆ ಮೊದಮೊದಲ ಅನುಭವಗಳ ಸವಿಯೇ ಬೇರೆ. ದ್ವಿಚಕ್ರ ವಾಹನ ಚಾಲನೆಗೆ ಹೊರಟಾಗ, ನಾನು ಪಡೆದ ಪುಳಕ ಇಂದಿಗೂ ನನ್ನಲ್ಲಿ ಹಸಿರಾಗಿದೆ. ಸದಾ ಇವನ ಹಿಂದಿನ ಸೀಟಿನಲ್ಲಿ ಕುಳಿತ ನನಗೆ, ಗಾಡಿಯ ಮುಂಭಾಗದಲ್ಲಿ ಕೂತರೆ ರಸ್ತೆ ಹೇಗೆ ಕಂಡೀತು ಎಂದು ಕಲ್ಪಿಸಿಕೊಳ್ಳಲು ಆಗಿರಲಿಲ್ಲ. ಅದಕ್ಕಿಂತಲೂ ನನ್ನ ಹಿಂದೆ ಆತ ಕೂತು, ನನ್ನ ಸುತ್ತ ತನ್ನ ತೋಳು ಬಳಸಿ ಸ್ಕೂಟರ್‌ಅನ್ನು ಸ್ಟಾರ್ಟ್ ಮಾಡಿ ಹೊರಟಾಗ ಆದ ಸಂಭ್ರಮ, ಪುಳಕ, ಸಂತೋಷ ಅವರ್ಣನೀಯ. ಪುಷ್ಪಕ ವಿಮಾನದಲ್ಲಿ ಕೂತು ಹೊರಟಂತೆ... ಊಹೂಂ... ಏನೇ ಹೋಲಿಕೆ ಕೊಟ್ಟರೂ ಅಪೂರ್ಣವೇ ಸರಿ. ಚಿಟಿಕೆ ಹೊಡೆಯುವಷ್ಟರಲ್ಲಿ ಪಟಪಟ ರೊಟ್ಟಿ ಬಡಿದು, ಬಿಸಿಬಿಸಿ ರೊಟ್ಟಿ ಉಣಬಡಿಸುವ ನನ್ನ ಗೆಳತಿಗೆ ಅವಳು ರೊಟ್ಟಿ ಮಾಡಲು ಕಲಿತ ದಿನ ಮರೆಯಲಾಗದ್ದಂತೆ. ಪ್ರತಿದಿನ ಹಿರಿಯರು ರೊಟ್ಟಿ ತಟ್ಟುವಾಗ ಕಾಡಿ ಬೇಡಿ ಹಿಟ್ಟು ಪಡೆದು, 'ಹಲಚಿ' (ಚಿಕ್ಕ ರೊಟ್ಟಿ) ಮಾಡುತ್ತಿದ್ದವಳಿಗೆ, ಒಂದು ದಿನ 'ಕೊಣಮಿಗೆ' (ರೊಟ್ಟಿ



...ಬರ, ವಿದ್ಯುತ್‌ಕ್ಷಾಮ ನಿಂ ಸರ್ಕಾರದ ಸಾಧನೆಯೋ...? ಹಿಂದಿನ ಸರ್ಕಾರದ ಕೊಡುಗೆಯೋ...?

ತಟ್ಟುವ ಸಾಧನ) ಕೊಟ್ಟು ಅದರಲ್ಲೇ ಮಾಡು ಎಂದಾಗ ಉಂಟಾದ ಸಂಭ್ರಮ; ಹಾಗೆ ಆಕೆ ಮಾಡಿದ ಪುಟ್ಟ ರೊಟ್ಟಿಯನ್ನು ಬೇಯಿಸಿದಾಗ ಅಪ್ಪನಾದಿಯಾಗಿ ಎಲ್ಲರೂ ಇಷ್ಟಿಷ್ಟು ಮುರಿದು ಬಾಯಿಗಿಟ್ಟುಕೊಂಡು ಶಹಭಾಸ್ ಹೇಳಿದ ಗಳಿಗೆ ಆಕೆಗೆ ಮರೆಯಲಾಗದ ಅನುಭವವಂತೆ.

೩

''ನಿಮ್ಮಮ್ಮ ನಿಂಗೆ ಹೀಗೇ ಅಡಿಗೆ ಕಲಿಸ್ಕೊಟ್ಟಿದ್ರ'' ಎಂಬ ಮಗಳ ಪ್ರಶ್ನೆಗೆ, ''ಇರ್ಬೇಕು ಅನ್ಸುತ್ತೆ. ಈಗ ಅದೆಲ್ಲ ನೆನಪಿಲ್ಲ. ಆದ್ರೆ ನಿನ್ನ ಹಾಗೆ ಪ್ರೊಬೇಷನರಿ ಪೀರಿಯಡ್ ನನ್ದು ತಡಾ ಆಗಿರ್ಲಿಲ್ಲ. ಹೈಸ್ಕೂಲ್ಗೆ ಸೇರೋ ಮೊದ್ಲೇ ನಾನು ಚಪಾತಿ, ರೊಟ್ಟಿ, ಅನ್ನ, ಸಾರು ಎಲ್ಲ ಮಾಡೋದ್ ಕಲ್ತಿದ್ದೆ. ಆವಾಗೆಲ್ಲ ಲಟ್ಸೋರು ಒಬ್ರು, ಸುಡೋರು ಒಬ್ರು ಅಂತ ಕೆಲ್ಸ ಹಂಚಿಕೊಳ್ಳೋ ಪ್ರಸಂಗಾನೇ ಇರ್ಲಿಲ್ಲ. ಹಾಗೆ ಮಾಡ್ತೀವಿ ಅಂದ್ರೆ ಕೈಗೆ ಏಟು ಹಾಕೋರು. ಅಷ್ಟೇ ಯಾಕೆ, ಹೂರಣದ ಹೋಳಿಗೆ ಮಾಡ್ಬೇಕಾದ್ರೂ, ಒಬ್ರೇ ಹೂರಣ ತುಂಬಿಕೊಂಡು, ಲಟ್ಟಿಸಿ, ಅವರೇ ಸುಡ್‌ಬೇಕಿತ್ತು. ಹಾಗೆ ಮಾಡಿದ್ರೇನೇ ಅವ್ರಿಗೆ ಅಡಿಗೆ ಬಂದಿದೆ ಅಂತ ಸರ್ಟಿಫಿಕೇಟ್ ಸಿಗ್ತಿತ್ತು.''

''ನಂಗೆ ಅಂಥಾ ಸರ್ಟಿಫಿಕೇಟೂ ಬೇಡ, ಅಡಿಗೆ ಮಾಡೋ ರಗಳೇನೂ ಬೇಡ. ಹಾಯಾಗಿ ಹೋಟೆಲ್ ಊಟ ಮಾಡ್ಕೊಂಡು ಇರ್ಬಹುದು. ಇಲ್ಲಂದ್ರೆ ದುಡ್ಡು ಕೊಟ್ರೆ ಯಾರಾದ್ರೂ ಬಂದು ಬೇಯ್ಸಿ ಹಾಕ್ತಾರೆ.'' ಅವಳ ಮಾತು ಮುಗಿಯುವಷ್ಟರಲ್ಲಿ ಬಂದ ಆತ, ನಗುತ್ತಾ,

''ಹೂಂ... ಈಗ ರಗಳೆ ಅನ್ಸುತ್ತೆ. ಎರಡ್ ದಿವ್ಸ ಹೋಟೆಲ್ ಊಟ ಉಂಡ್ರೆ ಆಗ ಗೊತ್ತಾಗತ್ತೆ. ಹೆಚ್ಚೇ ಬೇಡ. ಎಷ್ಟ್ ಬೇಕೋ ಅಷ್ಟನ್ನಾದ್ರೂ ನೀನು ಕಲೀಬೇಕು. ಇಲ್ಲಂದ್ರೆ ಅಷ್ಟೇ...'' ಎಂದ.

ನನಗೆ ಡ್ರೈವಿಂಗ್ ಕಲಿಯಲು ಒತ್ತಾಯಿಸುವಾಗಲೂ ಇವನು ಇಂಥದ್ದೇ ಮಾತನ್ನ ಹೇಳಿದ್ದ! ''ಎಂಥಾ ಒಳ್ಳೇ ಡ್ರೈವರ್ರೇ ಆದ್ರೂ, ಯಾವಾಗ್ಲೂ ಒಬ್ಬನ್ನ ನಂಬಿಕೊಂಡು, ಅವಲಂಬಿಸಿಕೊಂಡು ಇರಬಾರ್ದು. ಕನಿಷ್ಠಮಟ್ಟಿನ ಜ್ಞಾನ ನಿನಗೂ ಇರ್ಬೇಕು. ದೂರಕ್ಕೆ ಅಲ್ಲದಿದ್ರೂ ಹತ್ರಕ್ಕಾದ್ರೂ ನೀನೇ ಕಾರ್ ತಗೊಂಡು ಹೋಗುವ ಹಾಗೆ ಇರ್ಬೇಕು. ಅದರಲ್ಲಿ ಇರೋ ಸುಖ ಅಷ್ಟಿಷ್ಟಲ್ಲ'' ಎನ್ನುವುದನ್ನು ಒತ್ತಿ ಒತ್ತಿ ಹೇಳಿದ್ದ.

ಆತನಿಗೆ ತಾಳ್ಮೆಯೇ ಇಲ್ಲ ಎಂದುಕೊಂಡಿದ್ದೆ. ಯಾರಾದ್ರೂ ಮಾತಾಡ್ತಿದ್ರೆ ಅವರ ಮಾತು ಪೂರ್ಣ ಆಗೋತನಕ ಆತ ಕಾಯಲಾರ. ನಡುನಡುವಲ್ಲಿ ತನ್ನ ಮಾತನ್ನು ಬಿಡದೆ ಜೋಡಿಸುವಾತ. ಎಂಥ ಭಾವನಾತ್ಮಕ ಸಂಗತಿಯನ್ನು ಎದುರಿನವರು ಹಂಚಿಕೊಳ್ಳುತ್ತಿದ್ದರೂ, ಪೂರ್ಣ ಕಿವಿಗೊಡುವ ಬದಲು ಮೊದಲೇ ಟೀಕೆಗೆ, ವಿಮರ್ಶೆಗೆ ತೊಡಗುವಾತ. ಯಾವುದಾದರೂ ಮನಸ್ಸಿಗೆ ಬಂತೆಂದರೆ ಅದು ಮಾಡಿಯೇ ಸಿದ್ಧ ಎಂದು ನಿಂತ ಕಾಲ ಮೇಲೆ ಹೊರಡುವಾತ. ಹೀಗಾಗಿ ಸದಾ ಆತುರಗಾರ ಎಂದು ಟೀಕಿಸಿಕೊಳ್ಳುವ ಆತನೊಳಗೂ ತಾಳ್ಮೆಯ ಪ್ರಮಾಣ ಎಷ್ಟಿದೆ ಎಂದು ಗೊತ್ತಾದುದೇ ಟ್ರಾಫಿಕ್ ಜಾಮ್ ಸಂದರ್ಭದಲ್ಲಿ. ಅದೊಂದು ದಿನ ಹೆದ್ದಾರಿಯಲ್ಲಿ ಎಂಥದ್ದೋ ಅಪಘಾತ ಸಂಭವಿಸಿ, ಮೈಲುಗಟ್ಟಲೆ ದೂರದವರೆಗೆ ವಾಹನಗಳು ನಿಂತಿದ್ದವು. ಎಲ್ಲರಿಗೂ ಅವಸರ. ಸಾಲಾಗಿ ನಿಂತಿದ್ದ ಒಂದು-ಇನ್ನೊಂದು ಗಾಡಿಯ ನಡುವಿನ ಅಂತರ ಕೆಲವು ಇಂಚುಗಳು ಮಾತ್ರ. ಹಿಂದಿನವರ ಹಾರ್ನ್, ದ್ವಿಚಕ್ರಿಗಳ ಎದ್ವಾತದ್ವ ಮುನ್ನುಗ್ಗುವಿಕೆ, ಆಮೆ ವೇಗದಲ್ಲಿ ಸಾಗುವ, ಸಾಗಿಯೂ ಸ್ಥಗಿತವಾದಂತೆ ಅನಿಸುವ ಟ್ರ್ಯಾಫಿಕ್‌ನಲ್ಲಿ ಸಿಲುಕಿದ್ದೆವು. ಹತ್ತು ನಿಮಿಷದ ಹಾದಿ ಕ್ರಮಿಸಲು ಒಂದೂವರೆ ಗಂಟೆಯೇ ಬೇಕಾಗಿತ್ತು. ಆವತ್ತು ಅವನ ಸಹನೆಯ ಎಲ್ಲೆ ಎಷ್ಟು ಅಗಾಧವಾದುದು ಎಂಬುದು ಮೊದಲ ಬಾರಿಗೆ ಅರಿವಿಗೆ ಬಂದಿತು. ಆತ ಒಂದಿಷ್ಟೂ ಸಿಡುಕಲಿಲ್ಲ; ಗದರಲಿಲ್ಲ. ದಿವ್ಯ ನಿರ್ಲಿಪ್ತನಂತೆ ಡ್ರೈವಿಂಗ್ ಸೀಟಲ್ಲಿ ಕೂತಿದ್ದ! ಕುತೂಹಲ ತಡೆಯದೆ, ''ಇಷ್ಟೊಂದು ಸಹನೆ ನಿನ್ನಲ್ಲಿ ಎಲ್ಲಿತ್ತು'' ಎಂದೆ. ''ಬೇರೆ ವಿಧಿಯೇ ಇಲ್ಲ ಅಂತ ತಿಳಿದಾಗ ಎಂಥವರಿಗೂ ಸಹನೆ ಬಂದೇ ಬರತ್ತೆ. ಅದರಲ್ಲಿ ಆಶ್ಚರ್ಯ ಪಡುವಂಥದ್ದು ಏನೂ ಇಲ್ಲ'' ಎಂದ. ನನಗೆ ಹೊಗೆಗೂಡಲ್ಲಿ ನಿತ್ಯವೂ ತಾವು ಬೆಂದು ಎಲ್ಲರ ಹೊಟ್ಟೆ ತಂಪಾಗಿಸುವವರು ಥಟ್ಟನೆ ನೆನಪಿಗೆ ಬಂದರು.

ಹೌದಲ್ಲ, ಪಾಕ ಮಾಡುವುದಕ್ಕೂ ವಾಹನ ಚಾಲನೆಗೂ ಎಷ್ಟು ಹತ್ತಿರದ ಸಂಬಂಧವಿದೆಯಲ್ಲ ಎನ್ನಿಸಿತು. ಅನಿಸಿಕೆಯನ್ನು ಇವರ ಜೊತೆ ಹಂಚಿಕೊಳ್ಳುತ್ತ ಸಾಗುತ್ತಿದ್ದೆ. ಮನೆ ಇನ್ನೇನು ಹತ್ತಿರವಾಗುತ್ತಿತ್ತು. ಕಾರಿನ ವೇಗ ಇನ್ನಿಲ್ಲದಂತೆ ಏರಿತು. ''ಯಾಕಪ್ಪಾ ಈ ಸ್ಪೀಡು ? ಮನೆ ಬಂದೇ ಬಿಡ್ತಲ್ಲ ಡ್ರೈವ್ ಮಾಡಿ ಸಾಕಾಯ್ತಾ'' ಎಂದಳು ಮಗಳು. ಚಪಾತೀನೋ ಹೋಳಿಗೇನೋ ಗಂಟೆಗಟ್ಟಲೆ ಒತ್ತಿ, ಕೊನೆಯಾಗುತ್ತ ಬಂದಂತೆ ಅವುಗಳ ಗಾತ್ರವನ್ನು ಹಿಗ್ಗಿಸುವ ನನಗೆ ಮಾತ್ರ ಅವನು ಕೊಡಬಹುದಾದ ಉತ್ತರ ತಿಳಿದಿತ್ತು.

**ಡಾ॥ ಸಬೀಹಾ ಭೂಮಿಗೌಡ**
ಕನ್ನಡ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ
ಮಂಗಳಗಂಗೋತ್ರಿ, ಮಂಗಳೂರು - ೫೭೪ ೧೯೯

# ಕರ್ನಾಟಕ ಸಂಗೀತ, ಕನ್ನಡ ಮತ್ತು ಕನ್ನಡಿಗ

**ಡಾ|| ಶಶಿಕಾಂತ ಕೆ.**

ಕರ್ನಾಟಕ ಸಂಗೀತವನ್ನು ಕನ್ನಡಿಗರು ಕನ್ನಡದಲ್ಲೇ ಹಾಡಬೇಕೆಂಬುದು ೧೯೬೦ರ ದಶಕದಲ್ಲಿ ಕನ್ನಡಕ್ಕೆ ಬಂದ ಒಂದು ಕಾತರತೆಯಾಗಿತ್ತು. ಏಕೀಕೃತ ಮೈಸೂರು ರಾಜ್ಯ ಸ್ಥಾಪನೆಯಾದಾಗ ತಮಿಳುನಾಡಿನ, ಅದರಲ್ಲೂ ಮದ್ರಾಸಿನ ಮೇಲಿನ ಸಾಂಸ್ಕೃತಿಕ ಅವಲಂಬನೆಯನ್ನು ಕಳೆದುಕೊಂಡು ಮೈಸೂರು ರಾಜ್ಯಕ್ಕೆ ಹಾಗೂ ಕನ್ನಡಕ್ಕೆ ಕನ್ನಡದ್ದೇ ಆದ ಒಂದು ಸಂಸ್ಕೃತಿಯನ್ನು ಕ್ರೋಡೀಕರಿಸಿಕೊಳ್ಳುವಂಥ ಪ್ರಕ್ರಿಯೆಯ ಭಾಗ ಇದಾಗಿತ್ತು. ಕನ್ನಡದ ಪ್ರಖ್ಯಾತ ಲೇಖಕರಾದ ಅ.ನ.ಕೃ. ಮತ್ತಿತರರು ಈ ಸಮಯದಲ್ಲಿ ಕನ್ನಡ ಚಳುವಳಿಯನ್ನು ಹುಟ್ಟುಹಾಕಿದಾಗ ಕರ್ನಾಟಕ ಸಂಗೀತಕ್ಷೇತ್ರವೂ ಅದರ ಕಾಳಜಿಗಳಲ್ಲೊಂದಾಗಿ ಮೂಡಿ ಬಂತು. ಸಾಕಷ್ಟು ಸಂಖ್ಯೆಯಲ್ಲಿ ಕನ್ನಡ ಕಲಾವಿದರನ್ನು ಕರ್ನಾಟಕ ಸಂಗೀತದಲ್ಲಿ ಪ್ರೋತ್ಸಾಹಿಸುತ್ತಿಲ್ಲ ಹಾಗೂ ಸಂಗೀತ ಕಛೇರಿಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕನ್ನಡ ಕೃತಿಗಳನ್ನು ಹಾಗೂ ಹಾಡುಗಳನ್ನು ಹಾಡುತ್ತಿಲ್ಲವೆಂಬುದು ಕನ್ನಡ ಚಳುವಳಿಗಾರರ ವಾದವಾಗಿತ್ತು. ೧೯೬೧ರಲ್ಲಿ ರಾಮನವಮಿ ಉತ್ಸವದ ಪ್ರಯುಕ್ತ ಎಂ. ಎಸ್. ಸುಬ್ಬುಲಕ್ಷ್ಮಿ ಅವರ ಕಛೇರಿ ಚಾಮರಾಜಪೇಟೆಯ ರಾಮಸೇವಾ ಮಂಡಳಿಯಲ್ಲಿ ಏರ್ಪಾಡಾಗಿತ್ತು. ಆದರೆ ಕನ್ನಡ ಚಳುವಳಿಗಾರರು ಅ.ನ.ಕೃ. ಅವರ ನೇತೃತ್ವದಲ್ಲಿ ಎಂ. ಎಸ್. ಸುಬ್ಬುಲಕ್ಷ್ಮಿಯವರು ತಮಿಳರೆಂಬ ನೆಲೆಯಲ್ಲಿ ಇದನ್ನು ವಿರೋಧಿಸಿ ಬೆಂಗಳೂರಿನ ಬೀದಿಗಳಲ್ಲಿ ಮೆರವಣಿಗೆ ಬಂದರು. ಮೆರವಣಿಗೆಯಲ್ಲಿದ್ದ ಕೆಲವರು ಕಾರ್ಯಕ್ರಮ ನಡೆಯುವ ಪೆಂಡಾಲಿಗೆ ಬೆಂಕಿ ಹಚ್ಚಲು ಕೂಡ ಪ್ರಯತ್ನಿಸಿದರು. ಪೊಲೀಸರು ಹರಸಾಹಸ ನಡೆಸಿ ಕಡೆಗೆ ಲಾಠೀ ಚಾರ್ಜ್ ನಡೆಸುವ ಮೂಲಕ ಗುಂಪನ್ನು ನಿಯಂತ್ರಿಸಬೇಕಾಯಿತು. ಬೆಂಗಳೂರಿನಲ್ಲಿ ರಾಮೋತ್ಸವದ ವೇಳೆ ತಮಿಳುನಾಡಿನಿಂದ ಕರೆಸುವ ಸಂಗೀತ ಕಲಾವಿದರ ಸಂಖ್ಯೆಯೇ ಹೆಚ್ಚಾಗಿರುತ್ತಿತ್ತು. ಈ ಬಗ್ಗೆ ಅ.ನ.ಕೃ. ಅವರು ಅಸಹನೆಯಿಂದ ''ಇದು ರಾಮೋತ್ಸವ ಅಲ್ಲ, ತಮಿಳೋತ್ಸವ'' ಅಂದಿದ್ದರು. ಸುಮಾರು ಐವತ್ತರಷ್ಟಿದ್ದ ಕನ್ನಡ ಸಂಘಗಳು ರಾಮಸೇವಾ ಮಂಡಳಿಯ ವಿರುದ್ಧ ಪ್ರದರ್ಶನ ನಡೆಸಿದ್ದವು.

ಕನ್ನಡ ಚಳುವಳಿ, ಹಾಗೂ ಸಂಗೀತ ಕ್ಷೇತ್ರದಲ್ಲಿ ಕನ್ನಡ ರಾಷ್ಟ್ರೀಯತೆ ಬೆಂಗಳೂರಿನಲ್ಲಿ ಹೊಸತಾಗಿ ಕಂಡುಬಂದರೂ ಕರ್ನಾಟಕ ಸಂಗೀತ ಮತ್ತು ಕನ್ನಡವನ್ನು ಸಮೀಕರಿಸಿ ಮಾತನಾಡುವ ಸಂದರ್ಭ ಅದಕ್ಕೆ ಸುಮಾರು ಅರ್ಧ ಶತಮಾನದಷ್ಟು ಹಿಂದೆಯೇ ಬಂದಿತ್ತು. ಅದಕ್ಕೂ ಹಿಂದಕ್ಕೆ ಹೋದರೆ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ (೧೭೮೦-೧೮೬೫) ಸುಮಾರರಷ್ಟು ಜಾವಳಿಗಳು ಕನ್ನಡದಲ್ಲಿ ರಚಿತವಾಗಿದ್ದುವು. ಆದರೆ ಅವುಗಳನ್ನು ರಚಿಸುವುದಕ್ಕೆ ಯಾವುದೇ ರಾಷ್ಟ್ರೀಯ ಪ್ರವೃತ್ತಿ ಕಾರಣವಾಗಿರಲಿಲ್ಲ, ತೆಲುಗು ಇತ್ಯಾದಿ ಭಾಷೆಗಳಲ್ಲಿ ರಚಿತವಾದಂತೆ ಕನ್ನಡದಲ್ಲೂ ರಚಿತವಾಗುತ್ತಿತ್ತು, ಅಷ್ಟೆ. ಮುಮ್ಮಡಿಯವರ ನಂತರ ಅಧಿಕಾರಕ್ಕೆ ಬಂದ ಚಾಮರಾಜ ಒಡೆಯರ್ (೧೮೬೩-೯೪) ಅವರು ಪಾರ್ಸಿ ನಾಟಕವೊಂದನ್ನು ಅರಮನೆಯ ಆವರಣದಲ್ಲಿ ಆಡಿಸಿ ಅದರಿಂದ ಬಹಳಷ್ಟು ಸ್ಫುರಿತರಾಗಿದ್ದರು. ಇದರ ಪರಿಣಾಮವಾಗಿ ಅವರು ಕಾಳಿದಾಸ ಹಾಗೂ ಶೇಕ್ಸ್‌ಪಿಯರ್‌ನ ಕೆಲವು ನಾಟಕಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿಸಿ ಅದನ್ನು ಆಡಿಸಲು ಪ್ರಾರಂಭಿಸಿದರು. ಆಗಿನ ಕಾಲದ ನಾಟಕಗಳಲ್ಲಿ ಹಾಡುಗಳು ಗಣನೀಯ ಪ್ರಮಾಣದಲ್ಲಿರುತ್ತಿದ್ದುವು. ಆದ್ದರಿಂದಾಗಿ ಈ ನಾಟಕಗಳಿಗೋಸ್ಕರ ಸುಮಾರಷ್ಟು ಕನ್ನಡ ಹಾಡುಗಳನ್ನೂ ಬರೆಸಬೇಕಾಯಿತು. ರತ್ನಾವಳೀ ಥಿಯೇಟ್ರಿಕಲ್ ಕಂಪೆನಿಯ ಮಾಲಕರಾಗಿದ್ದ ವರದಾಚಾರ್ ಅವರು ಉತ್ತಮ ಹಾಡುಗಾರರೂ ಆಗಿದ್ದರು. ಆದರೆ ಕರ್ನಾಟಕ ಸಂಗೀತ ಕಚೇರಿಗಳಲ್ಲಿ ಕನ್ನಡ ಕೃತಿಗಳು ಅಥವಾ ಹಾಡುಗಳು ಕೇಳಿಬರುತ್ತಿರಲಿಲ್ಲ.

ನಾಲ್ವಡಿ ಕೃಷ್ಣರಾಜ ಒಡೆಯರು (ಆಡಳಿತ ಕಾಲ ೧೯೦೧-೧೯೪೦) ಪಟ್ಟಕ್ಕೆ ಬಂದ ಕೂಡಲೆ ಕನ್ನಡದಲ್ಲಿ ಕೃತಿಗಳು ಬರಬೇಕೆಂದು ಆಶಯ ತೋರಿದರು. ಈ ಆಶಯವನ್ನು ೧೯೨೬ರಲ್ಲಿ ಅವರು ಆಜ್ಞಾರೂಪಕ್ಕೆ ತಂದರು (ಮಹಾರಾಜರ ಕಛೇರಿಯಿಂದ ವೀಣಾ ಶಿವರಾಮಯ್ಯನವರಿಗೆ ಬಂದ ಒಂದು ಆಜ್ಞಾಪತ್ರವನ್ನು ಅವರ ಮಗ ನಾರಾಯಣಮೂರ್ತಿ ಅವರು ಇನ್ನೂ ಉಳಿಸಿಕೊಂಡಿದ್ದಾರೆ. ಇದರಲ್ಲಿ ಶಿವರಾಮಯ್ಯನವರು ಯಾವ ರಾಗದಲ್ಲಿ ಕೃತಿಯನ್ನು ರಚಿಸಬೇಕೆಂದೂ ಮತ್ತು ಅದನ್ನು ಸಂಸ್ಥಾನಕ್ಕೆ ಯಾವಾಗ ಒಪ್ಪಿಸಬೇಕೆಂದೂ ನಿಗದಿಪಡಿಸಲಾಗಿದೆ). ಹಿರಿಯ ಸಂಗೀತಗಾರರಾದ ಬಿಡಾರಂ ಕೃಷ್ಣಪ್ಪನವರು, ವೀಣೆ ಶೇಷಣ್ಣನವರು, ಚಿಕ್ಕರಾಮರಾಯರು, ವೆಂಕಟಗಿರಿಯಪ್ಪ, ಟಿ. ಚೌಡಯ್ಯ, ವೀಣೆ ಶಿವರಾಮಯ್ಯ ಇತ್ಯಾದಿ ಸಂಗೀತಗಾರರು ಈ ಆಜ್ಞೆಗೆ ಒಪ್ಪಿಕೊಂಡಿದ್ದರು. ಬಿಡಾರಂ ಕೃಷ್ಣಪ್ಪನವರು ಹಲವು ದಾಸರ ಕೀರ್ತನೆಗಳನ್ನೂ ಸಂಗೀತ ಕಛೇರಿಯಲ್ಲಿ ಹಾಡಲು ಪ್ರಾರಂಭಿಸಿದರು. ಕೃಷ್ಣಪ್ಪನವರು ಹಾಗೂ ಅವರ ತರುವಾಯ ಅವರ ಹಲವು ಶಿಷ್ಯಂದಿರು ಕೂಡ ದಾಸಸಾಹಿತ್ಯವನ್ನೇ ವಸ್ತುವನ್ನಾಗಿ ಮಾಡಿಕೊಂಡು ಕಛೇರಿ ನಡೆಸಿದ್ದಿದೆ. ಮಹಾರಾಜರ ಆಜ್ಞೆಯ ಪ್ರಕಾರ ಕನ್ನಡದಲ್ಲಿ ಕೃತಿ ರಚನೆ ಮಾಡುವುದು ಕೆಲವು ಸಂಗೀತಗಾರರಿಗೆ ಕಷ್ಟಕರವಾಗಿತ್ತು. ಅಂಥ ಸಂದರ್ಭದಲ್ಲಿ ಕನ್ನಡದ ಕೆಲವು ಕವಿಗಳು ಹಾಡನ್ನು ಬರೆದು, ಅದಕ್ಕೆ ರಾಗ ಸಂಯೋಜನೆಯನ್ನು ಸಂಗೀತಗಾರರು ಮಾಡುತ್ತಿದ್ದರು. ಹೀಗೆ ಕನ್ನಡದಲ್ಲಿ ಕೃತಿ ಬರೆದವರಲ್ಲಿ ನಂಜನಗೂಡು ಶ್ರೀಕಂಠಶಾಸ್ತ್ರಿ, ಅಯ್ಯಾಶಾಸ್ತ್ರಿ, ಅನವಟ್ಟಿ ರಾಮರಾವ್, ವೆಂಕಟರಾಮಯ್ಯ, ದೇವೋತ್ತಮ ಜೋಯಿಸ್, ಸೀತಾರಾಮಶಾಸ್ತ್ರಿ, ಮತ್ತು ಆರ್. ಕೆ. ಕೃಷ್ಣಾಶಾಸ್ತ್ರಿ ಪ್ರಮುಖರು. ಇದರಲ್ಲಿ ಅನವಟ್ಟಿ ರಾಮರಾಯರಂತೂ ತ್ಯಾಗರಾಜರ ಕೆಲವು ಕೃತಿಗಳನ್ನೂ ಕನ್ನಡಕ್ಕೆ ಅನುವಾದಿಸಿದರು.

ಕನ್ನಡದಲ್ಲಿ ಕೃತಿಗಳನ್ನು ರಚಿಸಲು ಒಪ್ಪದಿದ್ದ ಒಬ್ಬನೇ ಒಬ್ಬ ಸಂಗೀತಗಾರನೆಂದರೆ ಮೈಸೂರು ವಾಸುದೇವಾ ಚಾರ್ಯರೆಂದು ಕಾಣುತ್ತದೆ. ಕೃತಿಗಳನ್ನು ಇವರು ತೆಲುಗು ಮತ್ತು ಸಂಸ್ಕೃತ ಭಾಷೆಗಳಲ್ಲಿ ರಚಿಸುತ್ತಿದ್ದರು.

ಕನ್ನಡ ಚಳುವಳಿ, ಹಾಗೂ ಸಂಗೀತ ಕ್ಷೇತ್ರದಲ್ಲಿ ಕನ್ನಡ ರಾಷ್ಟ್ರೀಯತೆ ಬೆಂಗಳೂರಿನಲ್ಲಿ ಹೊಸತಾಗಿ ಕಂಡುಬಂದರೂ ಕರ್ನಾಟಕ ಸಂಗೀತ ಮತ್ತು ಕನ್ನಡವನ್ನು ಸಮೀಕರಿಸಿ ಮಾತನಾಡುವ ಸಂದರ್ಭ ಅದಕ್ಕೆ ಸುಮಾರು ಅರ್ಧ ಶತಮಾನದಷ್ಟು ಹಿಂದೆಯೇ ಬಂದಿತ್ತು. ಅದಕ್ಕೂ ಹಿಂದಕ್ಕೆ ಹೋದರೆ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ (೧೭೮೦-೧೮೬೫) ಸುಮಾರರಷ್ಟು ಜಾವಳಿಗಳು ಕನ್ನಡದಲ್ಲಿ ರಚಿತವಾಗಿದ್ದುವು. ಆದರೆ ಅವುಗಳನ್ನು ರಚಿಸುವುದಕ್ಕೆ ಯಾವುದೇ ರಾಷ್ಟ್ರೀಯ ಪ್ರವೃತ್ತಿ ಕಾರಣವಾಗಿರಲಿಲ್ಲ, ತೆಲುಗು ಇತ್ಯಾದಿ ಭಾಷೆಗಳಲ್ಲಿ ರಚಿತವಾದಂತೆ ಕನ್ನಡದಲ್ಲೂ ರಚಿತವಾಗುತ್ತಿತ್ತು, ಅಷ್ಟೆ. ಮುಮ್ಮಡಿಯವರ ನಂತರ ಅಧಿಕಾರಕ್ಕೆ ಬಂದ ಚಾಮರಾಜ ಒಡೆಯರ್ (೧೮೬೩-೯೪) ಅವರು ಪಾರ್ಸಿ ನಾಟಕವೊಂದನ್ನು ಅರಮನೆಯ ಆವರಣದಲ್ಲಿ ಆಡಿಸಿ ಅದರಿಂದ ಬಹಳಷ್ಟು ಸ್ಫುರಿತರಾಗಿದ್ದರು. ಇದರ ಪರಿಣಾಮವಾಗಿ ಅವರು ಕಾಳಿದಾಸ ಹಾಗೂ ಶೇಕ್ಸ್‌ಪಿಯರ್‌ನ ಕೆಲವು ನಾಟಕಗಳನ್ನು ಕನ್ನಡಕ್ಕೆ ತರ್ಜುಮೆ ಮಾಡಿಸಿ ಅದನ್ನು ಆಡಿಸಲು ಪ್ರಾರಂಭಿಸಿದರು.

ಆಚಾರ್ಯರ ಹಲವು ಕೃತಿಗಳನ್ನು ಅರಮನೆಯವರು ಪ್ರಕಟಿಸಿದರೂ ಕೂಡ ಮಹಾರಾಜರು ಮತ್ತು ಅವರ ನಡುವಿನ ಸಂಬಂಧ ಅಷ್ಟೇನೂ ಚೆನ್ನಾಗಿರಲಿಲ್ಲ. ಕನ್ನಡದ ಪ್ರಸಿದ್ಧ ಲೇಖಕರಾದ ಎ. ಎನ್. ಮೂರ್ತಿರಾವ್ ಅವರು ಒಂದೆಡೆ ಈ ಬಗ್ಗೆ ಉಲ್ಲೇಖಿಸುತ್ತಾರೆ. ಅವರ ಪ್ರಕಾರ ವಾಸುದೇವಾಚಾರ್ಯರನ್ನು ತಿಳಿದವರು ಮಹಾರಾಜರು ವಾಸುದೇವಾಚಾರ್ಯರನ್ನು ಸರಿಯಾಗಿ ನಡೆಸಿಕೊಳ್ಳಲಿಲ್ಲವೆಂದೂ, ಮತ್ತು ಅದಕ್ಕೆ ವಾಸುದೇವಾಚಾರ್ಯರು ಮಹಾರಾಜರ ಇಚ್ಛೆಯಂತೆ ನಡೆದುಕೊಳ್ಳದಿರುವುದೇ ಕಾರಣವೆಂದೂ ಆಡಿಕೊಳ್ಳುತ್ತಿದ್ದರು. ಆದರೆ ವಾಸುದೇವಾಚಾರ್ಯರ ಪ್ರಕಾರ ಅವರು ಕನ್ನಡದಲ್ಲಿ ಕೃತಿರಚನೆ ಮಾಡತೊಡಗಿದಂತೆ ಅವರಿಗೆ ಹೊಳೆಯುವ ವಿಷಯಗಳು ತಂತಾನೇ ಕಡಿಮೆಯಾಗುತ್ತಿದ್ದವು. ಆಚಾರ್ಯರ ಮೊಮ್ಮಗನಾದ ಕೃಷ್ಣಮೂರ್ತಿಯವರು 'ಸಂಗೀತ ಸರಿತಾ' ಎಂಬ ಪುಸ್ತಕದಲ್ಲಿ ತನ್ನ ತಾತನ ದೃಷ್ಟಿಕೋನದ ಬಗ್ಗೆ ಉಲ್ಲೇಖಿಸುತ್ತಾರೆ. ತೆಲುಗು, ತಮಿಳುಗಳಲ್ಲಿ ಭಾಷೆಯನ್ನು ಕೃತಿಗಳಲ್ಲಿ ಉಪಯೋಗಿಸುವ ರೀತಿಯೊಂದು ಆಗಲೇ ಸಿದ್ಧಗೊಂಡಿತ್ತು. ಮತ್ತು ಆಚಾರ್ಯರ ದೃಷ್ಟಿಯಲ್ಲಿ ಆ ರೀತಿಯಿಂದ ಆ ಭಾಷೆಗಳಲ್ಲಿ ಸೃಜನಶೀಲ ಕೃತಿಗಳ ರಚನೆ ಇನ್ನೂ ಸಾಧ್ಯವಿತ್ತು. ಹಾಗಿರುವಾಗ ಸಿದ್ಧಶೈಲಿಯೊಂದು ತಯಾರಾಗದಿರುವ ಭಾಷೆಯಲ್ಲಿ ಅವರು ಕೃತಿರಚನೆ ಮಾಡಲು ತನ್ನನ್ನು ತಾನು ಸಮರ್ಥನೆಂದು ತಿಳಿದಿರಲಿಲ್ಲ.

೧೯೦೮ರಲ್ಲಿ ಮೈಸೂರಿನ ಅರಮನೆ ಸಂಗೀತಗಾರರ ವೇತನಶ್ರೇಣಿಯನ್ನೊಮ್ಮೆ ಪರಾಂಬರಿಸಿದರೆ ಸಂಗೀತ ಕಲಾವಿದರ ನಡುವೆ, ಅದರಲ್ಲೂ ವಾಸುದೇವಾಚಾರ್ಯ ಮತ್ತು ಇತರ ಸಂಗೀತಗಾರರ ನಡುವೆ ಅರಮನೆ ನಡೆಸಿದ ತಾರತಮ್ಯ ಗಮನಕ್ಕೆ ಬರುತ್ತದೆ. ಈ ಮಾಹಿತಿ ನಮಗೆ ಸಿಗುವುದು ಡಾ|| ಜೆ. ವಿ. ಗಾಯತ್ರಿ ಅವರು ಸಂಪಾದಿಸಿದ 'ಸೆಲೆಕ್ಷನ್ಸ್ ಫ್ರಂ ದಿ ರೆಕಾರ್ಡ್ಸ್ ಆಫ್ ದಿ ಮೈಸೂರ್ ಪ್ಯಾಲೇಸ್ : ಮ್ಯುಸಿಶಿಯನ್ಸ್, ಆಕ್ಟರ್ಸ್ ಆಂಡ್ ಆರ್ಟಿಸ್ಟ್ಸ್ - (ಭಾಗ ಒಂದು)' ಎಂಬ ಪುಸ್ತಕದಿಂದ. ಆ ವರ್ಷದ ವೇತನಶ್ರೇಣಿಯ ಪ್ರಕಾರ ವೀಣೆ ಶೇಷಣ್ಣನವರು ತನ್ನ ಇಪ್ಪತ್ತೈದು ವರ್ಷಗಳ ಸೇವೆಯ ನಂತರ ಪ್ರತೀ ತಿಂಗಳು ರೂ. ಐವತ್ತು ಸಂಬಳ ಪಡೆಯುತ್ತಿದ್ದರು. ಇವರ ಸಂಬಂಧಿ ವೀಣೆ ಸುಬ್ಬಣ್ಣನವರು ಹತ್ತೊಂಬತ್ತು ವರ್ಷಗಳ ಸೇವೆಯ ನಂತರ ರೂ. ನಲವತ್ತೈದರ ಸಂಬಳ ಪಡೆಯುತ್ತಿದ್ದರು. ಅಬ್ದುಲ್ಲಾ ಖಾನ್ ಎಂಬ ಹಿಂದುಸ್ಥಾನೀ ಗಾಯಕ ಹನ್ನೊಂದು ವರ್ಷಗಳ ಸೇವೆಯಿಂದ ತಿಂಗಳಿಗೆ ಇಪ್ಪತ್ತೈದು ರೂಪಾಯಿ ಪಡೆಯುತ್ತಿದ್ದರು. ಬಿಡಾರಂ ಕೃಷ್ಣಪ್ಪನವರು ೨೨ ವರ್ಷಗಳ ಸೇವೆಯಿದ್ದರೂ ತಿಂಗಳಿಗೆ ಇಪ್ಪತ್ತು ರೂಪಾಯಿ ಮಾತ್ರ ಪಡೆಯುತ್ತಿದ್ದರು. ಆದರೆ ವಾಸುದೇವಾಚಾರ್ಯರ ಕಥೆ ಮಾತ್ರ ಬೇರೆಯೇ ಆಗಿತ್ತು. ಅವರಿಗೆ ೩೬ ವರ್ಷಗಳ ದೀರ್ಘ ಸೇವೆಯಿದ್ದರೂ ಸಂಬಳ ಮಾತ್ರ ಬರೇ ಹತ್ತು ರೂಪಾಯಿಗಳಾಗಿದ್ದಿತು. ಇಷ್ಟೇ ಅಲ್ಲದೇ ಗಾಯತ್ರಿಯವರು ಕೆಲವು ಕಲಾವಿದರ ಸಾಲದ ದಾಖಲೆಗಳನ್ನೂ ಪ್ರಸ್ತುತ ಪಡಿಸುತ್ತಾರೆ. ೧೯೨೫-೨೬ರಲ್ಲಿ ವಾಸುದೇವಾಚಾರ್ಯರಿಗೆ ಒಂದು ಸಾವಿರ ರೂಪಾಯಿಗಳ ಸಾಲ ಬೇಕಾದಾಗ ಹಲವು ಸಲ ಅರ್ಜಿ ಸಲ್ಲಿಸಿದರೂ ಕೂಡ ಸಾಲ ಮಂಜೂರಾಗಲಿಲ್ಲ. ಕೊನೆಗೆ ಆಚಾರ್ಯರು ಅರ್ಜಿಯಲ್ಲಿ ಸಾಲಗಾರರು ವಾರಂಟಿನೊಂದಿಗೆ ಬಂದು ನನ್ನ ಮರ್ಯಾದೆ ಹರಾಜಾಗುವ ಸಾಧ್ಯತೆಯಿದೆ ಹಾಗೂ ಅವರ ಸಾಲ ತೀರಿಸಲು ಈ ಸಾಲದ ಅಗತ್ಯವಿದೆ ಎಂದು ಬಿನ್ನವಿಸಿದರು. ಆಗ ಅರಮನೆಯ ಹುಕುಮೊಂದು ಸಾಲಗಾರರು ಯಾರೆಂದು ನೋಡಿ ಅತೀ ತುರ್ತಾದ ಸಂದರ್ಭದಲ್ಲಿ ಹೆಚ್ಚೆಂದರೆ ರೂಪಾಯಿ ಒಂದು ಸಾವಿರದಷ್ಟನ್ನು ತೀರಿಸಬಹುದೆಂದು ಆಜ್ಞೆ ಹೊರಡಿಸಿತು. ಇದನ್ನು 'ಅಡ್ವಾನ್ಸ್' ಎಂದು ಪರಿಗಣಿಸಿ ಮುಂದಿನ ಸಂಬಳದಲ್ಲಿ ಅದನ್ನು ಚುಕ್ತಾಗೊಳಿಸಬೇಕು ಎಂದು ಕೂಡ ಆ ದಾಖಲೆಯಲ್ಲಿ ವಿವರಿಸಲಾಗಿದೆ (ಪು. ೮೧). ಇದು ಇತರ ಕಲಾವಿದರನ್ನು ನಡೆಸಿಕೊಂಡ ರೀತಿಗೆ ತದ್ವಿರುದ್ಧವಾಗಿದೆ. ಉದಾಹರಣೆಗೆ, ವೀಣೆ ಶೇಷಣ್ಣನವರಿಗೆ ೧೯೦೬ರಲ್ಲೇ ರೂಪಾಯಿ ಮೂರು ಸಾವಿರಗಳಷ್ಟು ಉದಾರ ಸಾಲ



ನೀಡಲಾಗಿತ್ತು. ಅದೇ ವರ್ಷ ಬಿಡಾರಂ ಕೃಷ್ಣಪ್ಪನವರಿಗೆ ರೂ. ಒಂದು ಸಾವಿರಗಳ ಸಾಲ ನೀಡಲಾಗಿತ್ತು. ಹಾಗೂ ವೀಣೆ ಸುಬ್ಬಣ್ಣನವರು ಆಗರ್ಭ ಶ್ರೀಮಂತರಾಗಿದ್ದಾಗ್ಯೂ ಅವರಿಗಿದ್ದ ಎಲ್ಲಾ ಸಾಲಗಳನ್ನೂ ಮನ್ನಾ ಮಾಡಲಾಗಿತ್ತು.

ವಾಸುದೇವಾಚಾರ್ಯರಿಗೆ ಸಿಗಬೇಕಾಗಿದ್ದ ಗೌರವಗಳು ಮುತ್ತಯ್ಯ ಭಾಗವತರಿಗೆ ಸಿಕ್ಕಿತೆಂದು ಕೆಲವರು ಭಾವಿಸುತ್ತಾರೆ. ಇವರು ತಮಿಳುನಾಡಿನ ಹರಿಕೇಶನಲ್ಲೂರ್ ಎಂಬ ಊರಿನವರಾಗಿದ್ದು ಹರಿಕಥಾ ಕಾಲಕ್ಷೇಪದಲ್ಲಿ ತುಂಬಾ ಹೆಸರುಗಳಿಸಿದ್ದರು. ಇವರು ತಂಜಾವೂರಿನ ಸರಸ್ವತಿ ಮಹಲ್ ಲೈಬ್ರೆರಿಯಲ್ಲಿ ಸ್ವಲ್ಪ ಮಟ್ಟಿಗಿನ ಸಂಶೋಧನೆ ಕೂಡ ನಡೆಸಿ ಇತರ ಸಂಗೀತಗಾರರಿಗಿಂತ ಕೊಂಚ ಭಿನ್ನವಾಗಿದ್ದರು. ೧೯೨೭ರ ದಸರಾ ಸಂದರ್ಭದಲ್ಲಿ ಇವರು ಮೈಸೂರಿಗೆ ಬಂದಿದ್ದರು. ಮತ್ತು ಅದೇ ವರ್ಷ ಅವರು ರೂ. ೧೦೦ರ ಸಂಬಳದ ಮೇಲೆ ಅರಮನೆ ಸಂಗೀತಗಾರರಾಗಿ ನೇಮಿಸಲ್ಪಟ್ಟರು. ೧೯೨೮ರಲ್ಲಿ ಅವರಿಗೆ 'ಗಾಯಕ ಶಿಖಾಮಣಿ' ಎಂಬ ಬಿರುದನ್ನೂ ಕೊಡಲಾಯಿತು. ಇದೇ ಸಮಯದಲ್ಲಿ ಅವರು ಮಹಾರಾಜರ ಕುಲದೇವತೆಯಾದ ಚಾಮುಂಡಿ ದೇವಿಯ ಬಗ್ಗೆ ದೇವೋತ್ತಮ ಜೋಯಿಸ್ ಅವರಿಂದ ಒಂದೊಂದೇ ಕನ್ನಡ ಕೃತಿಗಳನ್ನು ರಚಿಸಿ ಅದನ್ನು ಸ್ವರಕ್ಕೆ ಅಳವಡಿಸಿ ಮಹಾರಾಜರಿಗೆ ಅರ್ಪಿಸುತ್ತಿದ್ದರು. ಹೀಗೆ ಅವರು ಒಟ್ಟಾಗಿ ೧೦೮ ಕೃತಿಗಳನ್ನು ರಚಿಸಿದರು. ಇದರಿಂದ ಖುಶಿಪಟ್ಟ ಮಹಾರಾಜರು ರತ್ನಖಚಿತವಾದ ದೇವಿಯ ಮೆಡಲ್ಲೊಂದನ್ನು ಭಾಗವತರಿಗೆ ಬಹುಮಾನವಾಗಿ ಕೊಟ್ಟರು. ಅವರು ಅರಮನೆಯ ವಿದ್ವಾಂಸರಾಗಿರುವಾಗಲೇ ಅವರನ್ನು ಮದ್ರಾಸಿನ ಸಂಗೀತ ಅಕಾಡೆಮಿಯ ಸಂಗೀತ ಶಿಕ್ಷಕರ ಕಾಲೇಜಿನ ಪ್ರಿನ್ಸಿಪಾಲರಾಗಿ ಕಳಿಸಿಕೊಡಲಾಯಿತು. ತಮಿಳುನಾಡಿನ ಸಂಗೀತ ಕಲಾವಿದನೊಬ್ಬ ಕನ್ನಡದಲ್ಲಿ ಕೃತಿರಚನೆ ಮಾಡಿದ್ದುದು ಮಹಾರಾಜರ ಸಂತೃಪ್ತಿಗೆ ಕಾರಣವಾಗಿದ್ದಿತು. ಕನ್ನಡದವನೇ ಆದ ಸಂಗೀತಗಾರನೊಬ್ಬ (ವಾಸುದೇವಾಚಾರ್ಯ) ಕನ್ನಡದಲ್ಲಿ ಕೃತಿ ರಚನೆ ಮಾಡದಿದ್ದುದು ಮಹಾರಾಜರಿಗೆ ಧಾರ್ಷ್ಟ್ಯವಾಗಿ ಕಂಡಿರಬೇಕು.

ಆದರೆ ತನ್ನ ಮುಪ್ಪಿನಲ್ಲಿ ವಾಸುದೇವಾಚಾರ್ಯರು ಲೇಸಾದ ಜೀವನವನ್ನೇ ಕಂಡರು. ಜಯಚಾಮರಾಜ ಒಡೆಯರು ಪಟ್ಟಕ್ಕೆ ಬಂದಮೇಲೆ ಆಚಾರ್ಯರು ಅವರೆಗೆ ಸಿಗದೇ ಇದ್ದ ಗೌರವವನ್ನು ಪಡೆದರು. ಆಚಾರ್ಯರು ಒಡೆಯರಿಗೆ ಸಂಗೀತ ಗುರುಗಳಾಗಿದ್ದುದೂ ಇದಕ್ಕೆ ಇನ್ನೊಂದು ಕಾರಣ. ಅರಮನೆಯ ಆಶ್ರಯ ನಿಲ್ಲುವ ಕಾಲಕ್ಕೆ (ಅಂದರೆ ೧೯೫೦ರ ಆಸುಪಾಸಿನಲ್ಲಿ) ಆಚಾರ್ಯರು ಅತೀ ಹೆಚ್ಚು ಸಂಭಾವನೆ ಪಡೆಯುವ ಅರಮನೆಯ ಸಂಗೀತ ಕಲಾವಿದರಾಗಿದ್ದರು. ೧೯೫೧ರಲ್ಲಿ ಅವರ ಸಂಬಳ ಪ್ರತೀ ತಿಂಗಳು ರೂ. ೩೫೦ಕ್ಕೆ ಮುಟ್ಟಿತ್ತು (ಇತರ ಕಲಾವಿದರಾದ ವೀಣೆ ವೆಂಕಟಗಿರಿಯಪ್ಪನವರಿಗೆ ರೂಪಾಯಿ ೨೫೦, ರಾಮಾನುಜಯ್ಯಂಗಾರ್ಯರಿಗೆ ರೂಪಾಯಿ ೧೫೦ ಮತ್ತು ಪಿಟೀಲು ಚೌಡಯ್ಯನವರಿಗೆ ರೂಪಾಯಿ ನೂರು ಸಂಬಳ ಸಿಗುತ್ತಿದ್ದವು).

ಕನ್ನಡದಲ್ಲಿ ರಾಷ್ಟ್ರೀಯತೆ ಕಂಡುಬಂದುದು ೧೯೬೦ರ ದಶಕದಲ್ಲಾದರೂ ಇಪ್ಪತ್ತನೇ ಶತಮಾನದ ಆದಿಭಾಗದಲ್ಲೇ ಒಂದು ಬಗೆಯ ಕನ್ನಡ ಪ್ರಜ್ಞೆಯನ್ನು ಕಾಣಬಹುದಾಗಿತ್ತು. ಈ ಪ್ರಜ್ಞೆ ಚಾಮರಾಜ ಒಡೆಯರ ಕನ್ನಡ ನಾಟಕಗಳನ್ನಾಡಿಸುವಂಥ ಆಸಕ್ತಿಯಲ್ಲೂ ಹಾಗೂ ನಾಲ್ವಡಿ ಕೃಷ್ಣರಾಜ ಒಡೆಯರ ಕನ್ನಡ ಕೃತಿಗಳನ್ನು ಕಲಾವಿದರಿಂದ ಸಂಯೋಜಿಸುವಂಥ ಆಸಕ್ತಿಯಲ್ಲೂ ವ್ಯಕ್ತವಾಗುತ್ತದೆ. ಇದರಲ್ಲಿ ಮೈಸೂರಿನ ವಿಶಿಷ್ಟತೆಯನ್ನು ಸಾರಿಕೊಳ್ಳುವ ಒಂದು ತುಡಿತವೂ ಇತ್ತು. ಈ ಸಂದರ್ಭದಲ್ಲಿ ರಚಿಸಿದಂಥ ಹೆಚ್ಚಿನ ಕನ್ನಡ ಕೃತಿಗಳು ಈಗ ತೆರೆಮರೆಗೆ ಸರಿದಿವೆ. ಮುತ್ತಯ್ಯ ಭಾಗವತರು ಮೋಹನಕಲ್ಯಾಣಿಯಲ್ಲಿ ರಚಿಸಿದ 'ಭುವನೇಶ್ವರಿಯ' ಹಾಗೂ ನವರಸಗನ್ನಡದ 'ದುರ್ಗಾದೇವಿ'ಯಂಥ ಕೆಲವೇ ಕೆಲವು ಕೃತಿಗಳು ಸಂಗೀತ ಕಛೇರಿಗಳಲ್ಲಿ ಬಳಕೆಯಲ್ಲಿವೆ. ೧೯೬೦, ೭೦, ಹಾಗೂ ೮೦ರ ದಶಕದಲ್ಲಿ ಕನ್ನಡ ರಾಷ್ಟ್ರೀಯತೆಯು ಕರ್ನಾಟಕ ಸಂಗೀತದೊಳಗೆ ಹೊಕ್ಕರೂ ಈ ಹಳೇ ಕೃತಿಗಳನ್ನು ಮತ್ತೆ ಮರುಚಲಾವಣೆಗೆ ತರುವ ಬದಲಿಗೆ 'ಲಘುಸಂಗೀತ' ಎನ್ನುವ ಒಂದು ಶೈಲಿಯನ್ನೇ ಘನೀಕರಿಸುವಲ್ಲಿ ಹೆಚ್ಚು ಸಫಲವಾಯಿತು.

**ಡಾ|| ಶಶಿಕಾಂತ ಕೆ.**
ಸಹಾಯಕ ಪ್ರಾಧ್ಯಾಪಕರು, ರಾಷ್ಟ್ರೀಯ ತಂತ್ರಜ್ಞಾನ ಸಂಸ್ಥೆ - ಕರ್ನಾಟಕ, ಸುರತ್ಕಲ್ - ೫೭೫ ೦೨೫

# ದಲಿತ ಚಳವಳಿ




**ಡಾ||** ವಿ. ಮುನಿವೆಂಕಟಪ್ಪನವರು ಸಂಪಾದಿಸಿ ಹೊರತಂದಿರುವ 'ದಲಿತ ಚಳವಳಿ ಚರಿತ್ರೆ' ಕೃತಿಯನ್ನು ಮುಖ್ಯವಾಗಿ ಮೂರು ಶೀರ್ಷಿಕೆಗಳ ಕೆಳಗೆ ವಿಭಾಗಿಸಲಾಗಿದೆ. ಇಲ್ಲಿನ ಬಹಳಷ್ಟು ಲೇಖನಗಳನ್ನು ಕಳೆದ ಎರಡು ಮೂರು ದಶಕಗಳಲ್ಲಿ ದಲಿತ ಹೋರಾಟಗಳಲ್ಲಿ ಪಾಲ್ಗೊಂಡ ಮತ್ತು ದಲಿತ ಸಾಹಿತ್ಯ ರಚಿಸಿದ ಬಹಳಷ್ಟು ದಲಿತರೇ ರಚಿಸಿದ್ದಾರೆ. ಈ ಕೃತಿಯ ಸಂಪಾದಕರಾದ ಡಾ|| ವಿ. ಮುನಿವೆಂಕಟಪ್ಪನವರ ೧೧ ಲೇಖನಗಳು ಈ ಕೃತಿಯಲ್ಲಿದ್ದು, ಉಳಿದ ಕೆಲವು ಲೇಖಕರ ಎರಡು ಮೂರು ಲೇಖನಗಳು ಇಲ್ಲಿ ಸೇರಿವೆ.

ಕೃತಿಯ 'ಸಾಮಾಜಿಕ ದರ್ಶನ'ದಲ್ಲಿ ಬುದ್ಧ ಮತ್ತು ಬೌದ್ಧ ಧರ್ಮದಿಂದ ಶರಣರು, ರಾಮಧಾನ್ಯ ಚರಿತ್ರೆ, ಸರ್ವಜ್ಞ, ಮಹಾತ್ಮ ಜ್ಯೋತಿಬಾ ಫುಲೆ, ಅಂಬೇಡ್ಕರ್, ಬಾಪೂಜಿ, ನಾಲ್ವಡಿ ಕೃಷ್ಣರಾಜ ಒಡೆಯರ್, ದೇವರಾಯ ಇಂಗಳೆ ಮತ್ತು ಇತ್ತೀಚಿನ ಬಸವಲಿಂಗಪ್ಪ ಮತ್ತು ಬಿ. ಕೃಷ್ಣಪ್ಪ ಅವರವರೆಗಿನ ಲೇಖನಗಳಿವೆ. 'ದಲಿತ ಹೋರಾಟ ದರ್ಶನ'ದಲ್ಲಿ ಪ್ರಾಚೀನ ಭಾರತದ ಇತಿಹಾಸದ ಒಂದಷ್ಟು ವಿಚಾರಗಳು, ದಲಿತ ಚಳುವಳಿಗಳ ಕಾಲಘಟ್ಟಗಳಿಗೆ ಸಂಬಂಧಿಸಿದ ಅನೇಕ ಲೇಖನಗಳು, ದಲಿತ ಸಂಘರ್ಷ ಸಮಿತಿ ಹಿಡಿದ ದುಷ್ಟ ದಾರಿ, ಬಿ. ಬಸವಲಿಂಗಪ್ಪನವರ ಬೂಸಾ ಗಲಾಟೆಯ ವಿದ್ಯಮಾನಗಳು, ಜಿಲ್ಲಾವಾರು ದಲಿತ ಸಂಘಟನೆಗಳ ಪರಿಚಯ, ದಲಿತ ಚಳುವಳಿಗಳ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆ ಇತ್ಯಾದಿ ಪರಿಚಯಾತ್ಮಕ ಲೇಖನಗಳನ್ನು ನೋಡಬಹುದು.




| | | |
|---|---|---|
| ಕೃತಿಗಳು | : | **ದಲಿತ ಚಳವಳಿ ಚರಿತ್ರೆ** |
| ಸಂಪಾದಕರು | : | **ಡಾ|| ವಿ. ಮುನಿವೆಂಕಟಪ್ಪ** |
| ಪ್ರಕಾಶಕರು | : | ತನುಮನು ಪ್ರಕಾಶನ<br>ಮೈಸೂರು - ೨೩ |
| ಪುಟಗಳು | : | ೫೬೦, ೧/೮ ಕ್ರೌನ್ ಆಕಾರ |
| ಬೆಲೆ | : | ರೂ. ೬೦೦-೦೦ |
| ಮೊದಲ ಮುದ್ರಣ | : | ೨೦೦೯ |

ಕೊನೆಯ ಭಾಗವಾದ 'ದಲಿತ ಸಾಹಿತ್ಯ ದರ್ಶನ'ದಲ್ಲಿ ರಾಗಿ-ಬತ್ತದ ಕಾಲಜ್ಞಾನ, ದಲಿತ ಜನಪದ ಪರಿಕಲ್ಪನೆ, ಮೊದಲ ತಲೆಮಾರಿನ ದಲಿತ ಲೇಖಕರ ಪರಿಚಯ, ಹಳಗನ್ನಡ ಸಾಹಿತ್ಯದಲ್ಲಿ ದಲಿತರು, ಕನ್ನಡ ದಲಿತ ಸಾಹಿತ್ಯದ ನೆಲೆ - ದಲಿತ ಸಾಹಿತ್ಯಡ ಕೊಡುಗೆ, ಶಂಬೂಕ, ಕೈವಾರ ನಾರಾಯಣ ಯೋಗಿ ಮತ್ತು ಬಸವಣ್ಣನ ವಚನಗಳು ಇತ್ಯಾದಿ ಲೇಖನಗಳಿವೆ.

ಬಹಳಷ್ಟು ಲೇಖನಗಳಲ್ಲಿ ಕೆಲವು ವಿಷಯಗಳು ಪದೇ ಪದೇ ಮರುಕಳಿಸಿರುವುದು ಕೂಡ ಸ್ವಲ್ಪ ತೊಡಕೆನಿಸುತ್ತದೆ. ಕೆಲವು ಲೇಖನಗಳನ್ನು ತೆಗೆದು ಹಾಕಿ, ಕೆಲವನ್ನು ಸ್ವಲ್ಪ ಟ್ರಿಮ್ ಮಾಡಿದ್ದರೆ ಈ ಕೃತಿ ಇನ್ನೂ ದಿವ್ಯವಾಗಿ ಹೊರಹೊಮ್ಮುತ್ತಿತ್ತು. ಇಷ್ಟೆಲ್ಲ ಕೊರತೆಗಳಿದ್ದರೂ ದಲಿತ ಸಾಹಿತ್ಯ ಮತ್ತು ದಲಿತ ಸಂಘಟನೆಗಳ ಬಗ್ಗೆ ಇದೊಂದು ಅಮೂಲ್ಯ ದಾಖಲೆಯಾಗಿ ನಮ್ಮ ಮುಂದೆ ನಿಲ್ಲುತ್ತದೆ. ಮುಂದಿನ ಪೀಳಿಗೆಯ ಲೇಖಕರೆಲ್ಲ ದಲಿತ ಸಾಹಿತ್ಯ, ದಲಿತ ಸಂಘಟನೆಗಳು ಮತ್ತು ದಲಿತ ದೊಣೆನಾಯಕರ ಚರಿತ್ರೆಯ ಕೆಲವು ಚಿತ್ರಣಗಳನ್ನು ಇಲ್ಲಿ ನೋಡಬಹುದು. ಹಾಗೆಯೇ ಹಿಂದೂಗಳು ಕಟ್ಟಿದ ಮತ್ತು ತಿರುಚಿದ ಪುರಾಣಗಳಲ್ಲಿ ಈ ನೆಲದ ಮೂಲಸ್ಥ ಜನರನ್ನು ಹೇಗೆಲ್ಲ ನಡೆಸಿಕೊಂಡರು ಎನ್ನುವ ಚಿತ್ರಣ ಕೂಡ ಇಲ್ಲಿ ಸ್ವಲ್ಪಮಟ್ಟಿಗೆ ದೊರಕುತ್ತದೆ. ಅದು ವಾಸ್ತವವಾಗಿ ಮತ್ತು ಆಥೆಂಟಿಕ್ಕಾಗಿ ಅಂಬೇಡ್ಕರ್ ಅವರ ಕೃತಿಗಳಲ್ಲಿ ಮಾತ್ರ ದೊರಕುತ್ತದೆ.

* * *

೩೫೦೦ ವರ್ಷಗಳ ಹಿಂದಿನವರೆಗೂ ಕಟ್ಟಿದ್ದ ಸಿಂಧೂ ನಾಗರಿಕ ತೊಟ್ಟಿಲುಗಳು ಭಾರತ ದೇಶದ ಮೂಲ ನಿವಾಸಿಗಳು ಕಟ್ಟಿದವು. ಅನಂತರ ಕ್ರಿಸ್ತಪೂರ್ವ ೧೮೦೦ರಲ್ಲಿ ಮಧ್ಯ ಏಷಿಯಾದಿಂದ ಖೈಬರ್ ಕಣಿವೆಗಳ ಮೂಲಕ ದನಕರುಗಳನ್ನು ಮೇಯಿಸಿಕೊಂಡು ಅಲೆಮಾರಿಗಳಾಗಿ ಬಿಳಿ ಬಣ್ಣದ ಆರ್ಯರು ಭಾರತಕ್ಕೆ ಬಂದರು. ಬೌದ್ಧ ಧರ್ಮದ ಸತ್ಯದ ಅಲೆಗಳಲ್ಲಿ ಸಿಕ್ಕಿ ಕೊಚ್ಚಿಹೋಗಿದ್ದ ಬ್ರಾಹ್ಮಣರು ಬೌದ್ಧ ಧರ್ಮದ ವಿರುದ್ಧ ಸೇಡು ತೀರಿಸಿಕೊಳ್ಳಲು ಅವಕಾಶಕ್ಕಾಗಿ ಕಾಯುತ್ತಿದ್ದರು. ಕ್ರಿ.ಪೂ. ೧೮೫ರಲ್ಲಿ ಮೌರ್ಯ ಸಾಮ್ರಾಜ್ಯದ ಕೊನೆಯ ದೊರೆ ಬೃಹದ್ರಥ ಮೌರ್ಯನನ್ನು ಅವನ ಸೇನಾಧಿಪತಿ ಪುಷ್ಯಮಿತ್ರನೆಂಬ ಸಾಮವೇದಿ ಸುಂಗ ಬ್ರಾಹ್ಮಣನು ಮೋಸದಿಂದ ಕೊಲೆ ಮಾಡಿದನು. ಅಶ್ವಮೇಧಯಾಗವನ್ನು ಜಾರಿಗೆ ತಂದು ಬೌದ್ಧ ರಾಜರುಗಳ ವಿರುದ್ಧ ಯುದ್ಧ ಘೋಷಣೆ ಮಾಡಿ ಮೌರ್ಯ ಸಾಮ್ರಾಜ್ಯವನ್ನು ನಾಶಮಾಡಿ ಸುಂಗ ಸಾಮ್ರಾಜ್ಯವನ್ನು ಸ್ಥಾಪನೆ ಮಾಡಿದನು. ಬೌದ್ಧ ರಾಜರುಗಳ ತಲೆಗಳನ್ನು ಕತ್ತರಿಸಿ ತಂದವರಿಗೆ ನೂರು ಚಿನ್ನದ ನಾಣ್ಯಗಳನ್ನು ಬಹುಮಾನವಾಗಿ ನೀಡುವುದಾಗಿ ಘೋಷಿಸಿ ಬೌದ್ಧ ಭಿಕ್ಷುಗಳ ಮಾರಣಹೋಮ ಮಾಡಿದನು. ಸುಮತಿ ಭಾರ್ಗವನೆಂಬ ಸಾಮವೇದಿ ಬ್ರಾಹ್ಮಣನ ಕೈಯಿಂದ ಅದನ್ನು ಒಂದು ಸಿದ್ಧಾಂತವನ್ನಾಗಿ ಮಾಡಿದನು. ಪುಷ್ಯಮಿತ್ರನು ಹುಟ್ಟುಹಾಕಿದ ರಾಜಕೀಯ ಪ್ರತಿಕ್ರಾಂತಿ ಬೌದ್ಧ ಸಾಮ್ರಾಜ್ಯದ ಸಾಮಾಜಿಕ, ರಾಜಕೀಯ ಪ್ರಜಾಪ್ರಭುತ್ವವನ್ನು ಬುಡಮೇಲು ಮಾಡಿತು.

ಸಮಾನತೆಯ ಸಮಾಜವೊಂದು ಮನುಸ್ಮೃತಿಯ ವಿರುದ್ಧ ಬಂಡಾಯ ಎದ್ದು ಮನುಸ್ಮೃತಿಯ ನೀತಿ ನಿಯಮಗಳನ್ನು ವಿರೋಧಿಸಿತು. ಬೌದ್ಧ ಭಿಕ್ಷುಗಳು ಮತ್ತು ಬೌದ್ಧ ಧರ್ಮ ಭಾರತದಿಂದ ಪಲಾಯನವಾದ ಮೇಲೂ ಬೌದ್ಧರ ದೊಡ್ಡ ಗುಂಪು ಇಲ್ಲಿ ಹೇಗೋ ಉಳಿದುಕೊಂಡಿತು. ಈ ಗುಂಪನ್ನು ಮಣಿಸಲು ಅನೇಕ ಕಾನೂನು ಕಟ್ಟಳೆಗಳನ್ನು ಹೇರಲಾಯಿತು. ಅದುವರೆಗೂ ನಾಗರಿಕತೆಯನ್ನು ಬೆಳೆಸಿದ್ದ ಈ ಮೂಲದ ಜನಾಂಗಗಳ ನಾಯಕರನ್ನು ನಾಗ, ಅಸುರ, ರಾಕ್ಷಸ, ದ್ರಾವಿಡ, ಕಿನ್ನರ, ದಾನವ, ನಿಶಾದ, ದೈತ್ಯ, ಮಾತಂಗ, ವಾನರ, ಕಿಂಪುರುಷ ಹೀಗೆ ಕರೆಯುತ್ತ ಹೀಯಾಳಿಸಿ, ಅನೇಕ ಕಟ್ಟುಕತೆಗಳನ್ನು ಸೃಷ್ಟಿಸಿ ಅವರನ್ನು ಖಳನಾಯಕರನ್ನಾಗಿ ಮಾಡಲಾಯಿತು. ಒಂದು ಗಣರಾಜ್ಯದ ವಿರುದ್ಧ ಇನ್ನೊಂದು ಗಣರಾಜ್ಯವನ್ನು ಎತ್ತಿಕಟ್ಟಿ ಯುದ್ಧಗಳನ್ನು ಮಾಡಿಸಿ ಕಪಟದಿಂದ ಸೋಲಿಸಲಾಯಿತು. ಕೊನೆಗೆ ಸಿಂಧೂ ನದಿಯ ನಾಗರಿಕತೆಯನ್ನು ಅಳಿಸಿಹಾಕಿ ಮೂಲ ಜನರನ್ನು ಅಡಿಯಾಳುಗಳನ್ನಾಗಿ ಮಾಡಿಕೊಳ್ಳಲಾಯಿತು. ಮಾತೃಪ್ರಧಾನ ಸಮಾಜವನ್ನು ಕೆಡವಿ ಪಿತೃಪ್ರಧಾನ ಸಮಾಜವನ್ನು ನಿರ್ಮಿಸಲಾಯಿತು. ನಿಸರ್ಗ ದೇವತೆಗಳನ್ನು ಆರಾಧಿಸುತ್ತಿದ್ದ ಮೂಲ ಜನರ ಮಧ್ಯೆ ಮನುಷ್ಯರನ್ನೇ ದೇವರೆಂದು ಪರಿಭಾವಿಸಿಕೊಂಡು ಮೂರ್ತಿಪೂಜೆಯನ್ನು ಆಚರಣೆಗೆ ತರಲಾಯಿತು. ಮೇಲಿನ ಎಲ್ಲ ವಿವರಣೆಗಳನ್ನು ಮೊದಲ ಭಾಗದ ಲೇಖನಗಳಲ್ಲಿ ನೋಡಬಹುದಾಗಿದೆ.

* * *

ಈ ಕೃತಿಯಲ್ಲಿರುವ ಎಲ್ಲಾ ಲೇಖನಗಳನ್ನು ಓದಿದ ಮೇಲೆ ಬಹುಶಃ ಈ ಲೇಖನಗಳನ್ನು ಬೇರೆ ರೀತಿಯಲ್ಲಿ ಪೋಣಿಸಬಹುದಿತ್ತೇನೋ ಎನ್ನುವ ಆಲೋಚನೆ ಬರದೇ ಇರುವುದಿಲ್ಲ. ಹಾಗೆಯೇ ಇಲ್ಲಿನ ಎಲ್ಲ ಲೇಖನಗಳನ್ನು ಉಪಯೋಗಿಸಿಕೊಂಡು ಒಂದು ಕೃತಿಯಾಗಿ ರೂಪಿಸಿದರೆ ಹೇಗಿರುತ್ತದೆ ಎನ್ನುವ ಆಲೋಚನೆಯೂ ಬರುತ್ತದೆ. ಚರಿತ್ರೆ ಮತ್ತು ಸಾಂಸ್ಕೃತಿಕ ಜ್ಞಾನದೊಂದಿಗೆ ದಲಿತ ಸಾಹಿತ್ಯ ಮತ್ತು ದಲಿತ ಸಂಘಟನೆಗಳ ಬಗೆಗಿನ ಪರಿಚಯವಿರುವ ಅನೇಕ ಲೇಖಕರು ನಮ್ಮೊಂದಿಗಿದ್ದಾರೆ. ಅಂತಹವರು ಯಾರಾದರೂ ಯಾವುದೇ ಗುಂಪಿಗೂ ಮಣೆ ಹಾಕದೆ ಈ ಕಾರ್ಯವನ್ನು ಕೈಗೆತ್ತಿಕೊಳ್ಳಬಹುದು. ಈ ೬೦೦ ಪುಟಗಳ ಬೃಹತ್ ಆಕರ ದಲಿತ ಸಾಹಿತ್ಯ ಕೃತಿಯಲ್ಲಿ ಸಂಶೋಧನೆಗೆ ಯೋಗ್ಯವಾದ ಹಲವು ಅಂಶಗಳು ಅಡಗಿವೆ. ಈ ಕಾರಣದಿಂದ ಡಾ|| ವಿ. ಮುನಿವೆಂಕಟಪ್ಪನವರು ಮುಂದೆ ದಲಿತ ಸಾಹಿತ್ಯ ರೂಪಿಸುವವರಿಗೆ ಸುಗಮವಾದ ದಾರಿ ಮಾಡಿಕೊಟ್ಟಿದ್ದಾರೆ.


**ಡಾ|| ವೆಂಕಟಸ್ವಾಮಿ ಎಂ.**
ನಂ. ೫೧೯, ೭ನೇ ಬ್ಲಾಕ್, ಟೈಪ್-೫, ಸಿ. ಪಿ. ಡಬ್ಲ್ಯೂ. ಕ್ವಾರ್ಟರ್ಸ್
ಎಚ್.ಎಸ್.ಆರ್. ಬಡಾವಣೆ, ಬೆಂಗಳೂರು - ೫೬೦ ೧೦೨




# ಕನ್ನಡದ ಸ್ಥಾನ




**ಕ**ರ್ನಾಟಕದಲ್ಲಿ ಕನ್ನಡವನ್ನು ಉಳಿಸುವ ಬೆಳೆಸುವ ಹೊಣೆ ಕನ್ನಡಿಗರ ಹಾಗೂ ಕರ್ನಾಟಕದಲ್ಲಿ ವಾಸಿಸುವ ನಮ್ಮೆಲ್ಲರ ಮೇಲಿದೆ. ಕನ್ನಡದ ಬೆಳವಣಿಗೆಯ ಪ್ರಯತ್ನಗಳಿಗೆ ಸರಕಾರಗಳು ಒಂದು ಸಾಂಸ್ಥಿಕ, ಸಂಘಟನಾತ್ಮಕ ಸ್ವರೂಪ ನೀಡಿ ನಿರ್ದಿಷ್ಟ ದಿಸೆಯಲ್ಲಿ ಯೋಜನೆಗಳನ್ನು, ಕಾರ್ಯಕ್ರಮಗಳನ್ನು ರೂಪಿಸಿ ಅವುಗಳಿಗೆ ಅನುದಾನ ನೀಡುತ್ತಿವೆ. ಈ ನಿಟ್ಟಿನಲ್ಲಿ ಕನ್ನಡದ ಜನತೆ ಸರಕಾರಗಳಿಗೆ ಋಣಿಯಾಗಿದೆ. ಆದರೆ ಕನ್ನಡದ ಅಭಿವೃದ್ಧಿ ಎಂಬುದು ಕೋಟಿಗಳ ಲೆಕ್ಕಾಚಾರವಲ್ಲ. ಸರಕಾರಗಳು ಎಷ್ಟು ಹಣ ವೆಚ್ಚ ಮಾಡುತ್ತವೆ ಎಂಬುದಕ್ಕಿಂತ ಮಿಗಿಲಾಗಿ ಹೇಗೆ ವ್ಯಯ ಮಾಡುತ್ತವೆ? ಶಾಶ್ವತವಾದ ಪರಿಣಾಮ ಬೀರುವ ವಿಧಾಯಕ ಕಾರ್ಯಕ್ರಮಗಳೇನು? ಎಷ್ಟು? ಎಂಬುದು ಕನ್ನಡ ಸಂಕಥನಗಳಲ್ಲಿ ಪ್ರಮುಖ ಪ್ರಶ್ನೆಯಾಗಬೇಕು.

ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್, ಕನ್ನಡ ವಿಶ್ವವಿದ್ಯಾಲಯ ಮೊದಲಾದ ಸಂಸ್ಥೆಗಳಿಗೆ ಕರ್ನಾಟಕ ಸರಕಾರ ಆರ್ಥಿಕ ನೆರವು ನೀಡುತ್ತಿದೆ. ಈ ಸಂಸ್ಥೆಗಳು ಪುಸ್ತಕ ಪ್ರಕಾಶನ ಹಾಗೂ ಮಾರಾಟ, ಪ್ರಶಸ್ತಿ ವಿತರಣೆ, ಗೋಷ್ಠಿಗಳ ಆಯೋಜನೆ, ವಿಚಾರ ಸಂಕಿರಣಗಳ ಸಂಯೋಜನೆ ಹಾಗೂ ಸಮ್ಮೇಳನಗಳನ್ನು ನಡೆಸುತ್ತಿವೆ. ಆದರೆ ಕನ್ನಡದ ಅಸ್ತಿತ್ವಕ್ಕೆ ಕೊಡಲಿಯೇಟು ಬೀಳುವ ಸಂದರ್ಭದಲ್ಲಿ ಈ ಸಂಸ್ಥೆಗಳು ಸರಕಾರದ ಮೇಲೆ ಯಾವ ರೀತಿಯ ಪ್ರಭಾವ ಬೀರಲು, ಒತ್ತಡ ಹೇರಲು ಈವರೆಗೆ ಸಾಧ್ಯವಾಗಿದೆ? ಇವು ನೀಡುವ ಶಿಫಾರಸುಗಳು ಎಷ್ಟರ ಮಟ್ಟಿಗೆ ಅನುಷ್ಠಾನಕ್ಕೆ ಬರುತ್ತವೆ? ಎಷ್ಟು ಮೂಲೆ ಸೇರುತ್ತವೆ? ಸಾಹಿತ್ಯ ಸಮ್ಮೇಳನಗಳಲ್ಲಿ ಕೈಗೊಳ್ಳುವ ಠರಾವುಗಳ ಪಾಡೇನು? ಎಲ್ಲಿಯವರೆಗೆ ಸರಕಾರಿ ಹಿಡಿತದಲ್ಲಿರುವ ಈ ಸಂಸ್ಥೆಗಳು ಕನ್ನಡದ ಹಿತದೃಷ್ಟಿಯಿಂದ ಸರ್ಕಾರಗಳ ಕಿವಿ ಹಿಂಡಿ ಕನ್ನಡದ, ಕನ್ನಡಿಗನ ಹಿತಕ್ಕೆ ಬೇಕಾದುದನ್ನು ಮಾಡಿಸಿಕೊಳ್ಳುವ ಇಚ್ಛಾ ಹಾಗೂ ಕ್ರಿಯಾಶಕ್ತಿಯನ್ನು ಮೆರೆಯುವುದಿಲ್ಲವೋ ಅಲ್ಲಿಯವರೆಗೆ ಇವು ಕೇವಲ ಅಲಂಕಾರ ಸಾಧನಗಳಷ್ಟೆ.

ಒಂದು ನಾಡಿನ ನುಡಿ ಉಳಿದು ಬೆಳೆದು ಬರಬೇಕಾದರೆ ದೈನಂದಿನ ಆಡಳಿತ ಹಾಗೂ ಶಾಲಾ ಶಿಕ್ಷಣದಲ್ಲಿ ಅದಕ್ಕೆ ಅಗ್ರ ಮಾನ್ಯತೆ ದೊರೆಯಬೇಕು. ಇದು ಲೋಕ ಸತ್ಯ. ಕನ್ನಡವು ಕರ್ನಾಟಕದ ಆಡಳಿತ ಭಾಷೆ ಎಂದು ಎಂದೋ ಘೋಷಿಸಿಯಾಗಿದೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಳು ವಿವಿಧ ಜನವರ್ಗದವರಿಗಾಗಿ 'ಆಡಳಿತ ಕನ್ನಡ' ಗೋಷ್ಠಿಗಳನ್ನು ನಡೆಸುತ್ತಿರುತ್ತವೆ. ಸರಕಾರ ಕಾಲಕಾಲಕ್ಕೆ ಸುತ್ತೋಲೆಗಳನ್ನು ಹೊರಡಿಸುತ್ತದೆ. ಆದರೆ ರಾಜ್ಯ ಉಚ್ಚನ್ಯಾಯಾಲಯದಲ್ಲಿ, ಸಚಿವಾಲಯದಲ್ಲಿ, ವಿಶ್ವವಿದ್ಯಾನಿಲಯಗಳಲ್ಲಿ ಹಾಗೂ ಸರಕಾರದ ಹಲವು ವಿಭಾಗಗಳಲ್ಲಿ ಕನ್ನಡ ಇನ್ನೂ ಸರಿಯಾಗಿ ಜಾರಿಗೆ ಬಂದಿಲ್ಲ. ಕನ್ನಡ ಭಾಷೆಯಲ್ಲಿ ನಾಮಫಲಕಗಳಿದ್ದರೆ ಸಾಲದು, ಕಾನೂನುಗಳು, ಮಾಹಿತಿಗಳು, ತೀರ್ಪುಗಳು, ಖಟ್ಲೆಯ ವಿವರಗಳು, ನಿರ್ಣಯಗಳು, ಆರ್ಥಿಕ ವ್ಯವಹಾರಗಳು ಇವೆಲ್ಲವೂ ಕನ್ನಡದಲ್ಲೇ ದೊರೆಯುವಂಥ ಸ್ಥಿತಿಯನ್ನು ಸರಕಾರ ಹಾಗೂ ಕನ್ನಡಪರ ಸಂಸ್ಥೆಗಳು ರೂಪಿಸಬೇಕಾಗಿದೆ.

ಬಹು ಜನರ ಭಾಷೆಯಾದ ಕನ್ನಡವನ್ನು ಜನಮಾನಸದಲ್ಲಿ ಪ್ರತಿಷ್ಠಾಪಿಸಲು ಶಿಕ್ಷಣವೇ ಪ್ರಬಲ ಸಾಧನವಾಗಿದೆ. ಆದರೆ ಇಂದು ಕರ್ನಾಟಕದಲ್ಲಿ ಕನ್ನಡ ಮಾಧ್ಯಮ ಶಾಲೆಗಳು ಅವಸಾನದ ಅಂಚಿಗೆ ಬಂದು ನಿಂತಿವೆ. ವಿವಿಧ ಕಾರಣಗಳಿಂದಾಗಿ ಪ್ರತಿವರ್ಷ ಹಲವು ಪ್ರಾಥಮಿಕ ಶಾಲೆಗಳನ್ನು ಮುಚ್ಚಲಾಗುತ್ತಿದೆ. ಈ ದುರಂತ ಸ್ಥಿತಿಗೆ ಕನ್ನಡಿಗರು ಎಷ್ಟರ ಮಟ್ಟಿಗೆ ಕಾರಣರೋ ನಮ್ಮನ್ನು ಆಳುವ ಸರಕಾರಗಳೂ ಅಷ್ಟರಮಟ್ಟಿಗೆ ಕಾರಣವೇ.

(ಉಡುಪಿ ಜಿಲ್ಲಾ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣದಿಂದ ಆಯ್ದ ಒಂದು ಭಾಗ)

**ಡಾ|| ಮಹಾಬಲೇಶ್ವರರಾವ್**
'ಭೂಮಿಗೀತಾ', ಅಪೂರ್ವ ಕಾಂಪ್ಲೆಕ್ಸ್ ಹಿಂಭಾಗ
ದೊಡ್ಡಣ್ಣಗುಡ್ಡೆ, ಉಡುಪಿ - ೫೭೬೧೦೨

# ನದಿ



ನದಿಯ ತೀರದಲ್ಲಿ
ಅಮ್ಮ–ಅಪ್ಪ ನಿಂತು
ನನ್ನ ಎತ್ತಿಕೊಂಡು
ನದಿಯ ಸೊಬಗ ನಾ

ನೋಡಿದಾಗ, ನಾನೆಂದೆನು –
"ನಿಲ್ಲು ನಿಲ್ಲು ನದಿಯೆ!
ನೀನು ಏಕೆ ಓಡುವೆ?
ಸಮುದ್ರವ ಸೇರುವೆ ನೀ
ಭರಭರನೆ!"

ರೈತನಿಗೆ ಸುಖಕೊಟ್ಟು
ನಿದ್ದೆ ಶಾಂತಿ ಎಲ್ಲವ ಕೊಟ್ಟು
ಜನಮನ ನಲಿಸಿ ತಣಿಸಿ
ನೀ ಸಮುದ್ರವ ಸೇರುವೆ

ರಕ್ಷಾ, ಎಚ್. ಆರ್.
೭ನೇ ತರಗತಿ, 'ಎ' ವಿಭಾಗ, ಶ್ರೀ ವಿದ್ಯಾಮಂದಿರ ವಿದ್ಯಾ ಶಿಕ್ಷಣ ಕೇಂದ್ರ ಸಂಸ್ಥೆ
ಬೆಂಗಳೂರು



# ಕ್ಲೆಮೆಂಟ್ ಎಂ. ಫ್ರಾನ್ಸಿಸ್
# ವನ್ಯಜೀವಿ ಛಾಯಾಗ್ರಾಹಕ




ವೃತ್ತಿಯಿಂದ ಸಾಫ್ಟ್‌ವೇರ್ ಎಂಜಿನಿಯರ್. ಭಾರತದ 600ಕ್ಕೂ ಹೆಚ್ಚು ಪಕ್ಷಿ ಪ್ರಭೇದಗಳ ಚಿತ್ರಗಳನ್ನು ತೆಗೆದಿದ್ದಾರೆ. ಬಿಡುವಿನ ವೇಳೆ ಪ್ರಾಣಿ ಪಕ್ಷಿಗಳ ಹುಡುಕಾಟದಲ್ಲಿ ಕಳೆಯುತ್ತಾರೆ. ಛಾಯಾಗ್ರಾಹಕರಾಗಿ ಹೊರದೇಶಗಳ ಅರಣ್ಯಗಳಲ್ಲಿ ಮರುಭೂಮಿಗಳಲ್ಲಿ ಅಲೆದಾಡಿದ್ದಾರೆ. ಹಲವು ಪ್ರತಿಷ್ಠಿತ ಪತ್ರಿಕೆಗಳಲ್ಲಿ ಇವರ ಚಿತ್ರಗಳು ಪ್ರಕಟವಾಗಿವೆ. ಪ್ರಕೃತಿ ಮತ್ತು ವನ್ಯಜೀವಿ ಸಂಶೋಧನ ಕ್ಷೇತ್ರಕ್ಕೆ ಮಹತ್ವದ ಕೊಡುಗೆ ನೀಡಿದ್ದಾರೆ. ಮಿತ್ರರ ಜೊತೆಗೂಡಿ ರಚಿಸಿರುವ 'ಬರ್ಡ್ಸ್ ಆಫ್ ವೆಸ್ಟರ್ನ್ ಘಾಟ್ಸ್, ಕೊಂಕಣ್ ಆ್ಯಂಡ್ ಮಲಬಾರ್' ಕೃತಿ ಜನಪ್ರಿಯವಾಗಿದೆ. ತಮ್ಮ ಚಿತ್ರಗಳ ಮೂಲಕ ಪರಿಸರ ಸಂರಕ್ಷಣೆಯ ಅರಿವು ಮೂಡಿಸುವುದೇ ಇವರ ಆಶಯ. 2009ರ ಶಿಕ್ಷಕರ ಸಾಧನೆ ಪುರಸ್ಕಾರಕ್ಕಾಗಿ ನಾಮಕರಣಗೊಂಡ ಏಕೈಕ ವನ್ಯಜೀವಿ ಛಾಯಾಗ್ರಾಹಕ.

– ಕೆ. ಪಿ. ಸ್ವಾಮಿ
















Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

